# ಕೊನಷ್ಟೈಲ ಕತೆಗಳು



ಗೋರೂರು ರಾಮಸ್ವಾಮಯ್ಯಂಗಾರ್



ರಾಮಚಂದ್ರ ಸ್ಮಾರಕ ಗ್ರಂಥಮಾಲೆ
ಗೊ ರೂ ರು

[ಬೆಲೆ ರೂ. ೩—೪—೦]

# ಗೊರೂರು ರಾಮಚಂದ್ರ

ಜನನ ೫—೩—೧೯೩೦
ಕೆಂಗೇರಿ ಗುರುಕುಲಾಶ್ರಮದಲ್ಲಿ

ನಿಧನ ೧೪—೯—೧೯೪೭ ತುಮಕೂರಿನಲ್ಲಿ

# ಅರಿಕೆ

ಈ ಕಥಾ ಸಂಕಲನದಲ್ಲಿ ತಮಿಳು ಲೇಖಕ ಕೊನಷ್ಟೈ ಅವರ ಹದಿನೆಂಟು ಕತೆಗಳು ಅಡಕವಾಗಿವೆ. ಕತೆಗಳನ್ನು ಓದಿದರೆ ಮೂಲ ಲೇಖಕರಿಗೆ ಕೊನಷ್ಟೈ ಎಂಬ ಹೆಸರು ಅನ್ವರ್ಥವಾಗಿವೆಯೆಂಬುದು ಗೊತ್ತಾಗುತ್ತದೆ. ಆ ಪದದಲ್ಲಿ, ವಿಡಂಬನ ಹಾಸ್ಯ ಸಮುದ್ದೇಶದ ವಕ್ರದೃಷ್ಟಿ ಎಲ್ಲ ಅಡಕವಾಗಿವೆ. ತಮಗೆ ಆ ಹೆಸರು ಬಂದ ಸಂದರ್ಭವನ್ನು ನನಗೆ ತಿಳಿಸುತ್ತಾ ಮೂಲ ಲೇಖಕರು " ನಾನು ನನ್ನ ಮೊದಲ ಕತೆಯನ್ನು ಬರೆದು, ನನ್ನ ಹೆಸರನ್ನು ಹಾಕದೆ ಒಂದು ಪತ್ರಿಕೆಗೆ ಕಳುಹಿಸಿದ್ದೆ. ಸಂಪಾದಕರು ಆ ಕತೆಯನ್ನು ನೋಡಿ ಕತೆಯ ಕೆಳಗೆ 'ಬರೆದವರು ಕೊನಷ್ಟೈ'ಎಂದು ಪ್ರಕಟಿಸಿದ್ದರು. ಹೋಗಿ ವಿಚಾರಿಸಿದರಲ್ಲಿ 'ಇಂತಹ ಕತೆ ಬರೆದವರಿಗೆ 'ಇಂತಹ ಹೆಸರೇ ಸರಿ' ಎಂದರು. ಅಲ್ಲಿಂದ ನಾನು ಅದೇ ಹೆಸರನ್ನು ಇಟ್ಟುಕೊಂಡಿದ್ದೇನೆ" ಎಂದರು.

ಕೊನಷ್ಟೈ, ಮದರಾಸು ಹೈಕೋರ್ಟಿನ ನಿವೃತ್ತ ನ್ಯಾಯಾಧೀಶರು, ಬಹಳ ವಿದ್ಯಾವಂತರು; ಸುಸಂಸ್ಕೃತರು; ಸಂಸ್ಕೃತದಲ್ಲಿಯೂ ಸುಶಿಕ್ಷಿತರು; ವಿನಯಶೀಲರು; ಸಂಗೀತ ಪ್ರಿಯರು. ಅವರ ಕತೆಗಳಲ್ಲಿ ಈ ಎಲ್ಲ ಗುಣಗಳೂ ಒಡೆದು ಕಾಣುತ್ತಿವೆ. ಈ ಕತೆಗಳನ್ನು ಅನುವಾದಿಸಿ ಪ್ರಕಟಿಸಲು ಅವರು ಅನುಮತಿಯಿತ್ತುದಕ್ಕೆ ಅವರಿಗೆ ಕೃತಜ್ಞನಾಗಿದ್ದೇನೆ.

ಯಾವ ಸಂಗತಿಯನ್ನೂ ವಿನೋದ ದೃಷ್ಟಿಯಿಂದ ನೋಡುವುದೇ ಇವರ ಸ್ವಭಾವ. ಇವರು ಪುರಾಣದ ಕತೆಗಳಿಗೆ ಹೊಸದೃಷ್ಟಿ ಬೀರುವುದು ಕುತೂಹಲಜನಕವಾಗಿವೆ. ಕುತ್ತಾಲಂ ಎಂಬ ಕತೆಯಲ್ಲಿ ಹೆಂಡತಿಯನ್ನು ಮೊದಲದಿನ ಕಳುಹಿಸಿ, ಮರುದಿನ ಗಂಡನು ಆಗತಾನೆ ಬರುತ್ತಿರುವಾಗ ಇಬ್ಬರೂ ಸಂಧಿಸುತ್ತಾರೆ ಅಪರಿಚಿತ ಸ್ತ್ರೀ ಪುರುಷರಂತೆ ಅವರು ಆಡುವ ಸಂಭಾಷಣೆ ತುಂಬ ವಿನೋದವಾಗಿದೆ. ಕೊನೆಯಲ್ಲಿ ಇಬ್ಬರೂ ಗಂಡ ಹೆಂಡಿರೆಂಬುದು ಗೊತ್ತಾದಾಗ ಆ ಸಂಭಾಷಣೆಗೆ ಒಂದು ಹೊಸ ಕಳೆ ಏರುತ್ತದೆ. ಸಂಗೀತ, ಹಟಮಾರಿ ಈ ಕತೆಗಳಲ್ಲಿ ಸಂಗೀತ ಹೇಗೆ ಮನುಷ್ಯನಿಗೆ ಸತ್ವ್ರೇರಣೆ. ಅದರಿಂದ ಅನ್ಯಾಯಗಳು ಸ್ವಾಭಾವಿಕವಾಗಿ ಮರೆಯಾಗುವುವೆಂಬುದು ವರ್ಣಿತವಾಗಿದೆ. ಹೀಗೆ ಪ್ರತಿಯೊಂದು ಕತೆಯಲ್ಲಿಯೂ ಒಂದೊಂದು ಸ್ವಾರಸ್ಯವಿದೆ. ಜೋತಿಷ್ಯ, ಪರಿಶೋಧನೆ, ಹಬ್ಬ, ಚಲನಚಿತ್ರ, ಪತ್ತೇದಾರಿ, ಸಂಸಾರಜೀವನ, ಉದ್ಯೋಗ, ಕೊನೆಗೆ ಕತೆ ಬರೆಯುವುದು ಎಲ್ಲವೂ ಕೊನಷ್ಟೈಯವರ ಕೀಟಲೆಯ ಹಾಸ್ಯದಿಂದ ಹೊಳೆಯುತ್ತಿವೆ. ಕೊನಷ್ಟೈಗೆ ಅವರ ಸ್ನೇಹಿತ ಕೊಟ್ಟ ಈ ಮುಂದಣ ಪ್ರಶಸ್ತಿಪತ್ರದಿಂದ ಅವರ ಹಾಸ್ಯ ಎಷ್ಟು ನವಿರಾದುದೆಂದು ತಿಳಿಯುತ್ತದೆ. " ನನ್ನ ಸ್ನೇಹಿತ ಕೊನಷ್ಟೈಯನ್ನು ನೋಡುವಾಗಲೆಲ್ಲ ' ತೊಳೆದ ಕೆಂಡ ' ಎಂದು ಹೇಳುತ್ತಾರಲ್ಲ ಆ ಮಾತು ನನ್ನ ಜ್ಞಾಪಕಕ್ಕೆ ಬರುತ್ತದೆ. ಹೊರಗಡೆ ನೋಡಿದರೆ ಬೂದಿಯಂತೆ ಇದ್ದಾನೆ. ಆದರೆ ಅವನಲ್ಲಿ ವಂಚನೆ ಇಲ್ಲ. ಒಳಗಡೆಯೂ ಅದೇ ಬೂದಿಯೇ." [ಪುಟ-೧೭೫] ಕೊನಷ್ಟೈ ತಮ್ಮ ಗ್ರಂಥದ ಅರ್ಪಣ ಪತ್ರಿಕೆಯಲ್ಲಿ ಹೀಗೆ ಹೇಳಿದ್ದಾರೆ. " ಇದಕ್ಕಿಂತ ಕೀಳಾದ ಎಷ್ಟೋ

ಕತೆಗಳನ್ನು ಓದಿದ್ದೇನೆ” ಎಂದು ನನಗೆ ಅನೇಕ ವಿಧದಲ್ಲಿ ಧೈರ್ಯವುಂಟುಮಾಡಿ ಗೃಹಸ್ಥನಾಗಿದ್ದ ನಾನು ಈ, ಕತೆಗಳನ್ನು ಬರೆಯುವಂತೆ ಮಾಡಿದ ನನ್ನ ಹೆಂಡತಿಗೆ ಅರ್ಪಣೆ.”

ಪುಟ ೧೨ ಮತ್ತು ೧೩ ರಲ್ಲಿ ತ್ವಂ-ಮೇ ಎಂಬುದಕ್ಕೆ ತವಂ-ಮೇ ಎಂದು ಬಿದ್ದಿದೆ. ಇದನ್ನು ತ್ವಂಮೇ ಎಂದು ಓದಿಕೊಳ್ಳಬೇಕು. ಪುಟ ೧೬೦ರಲ್ಲಿ ಆಯುರ್ವೇದ ಗ್ರಂಥಿ ಎಂಬುದನ್ನು ಗ್ರಂಥವೆಂದು ಓದಿಕೊಳ್ಳಬೇಕು. ಅನ್ನದಲ್ಲಿ ಕಲ್ಲಿನಂತೆ ನುಸುಳಿಕೊಂಡು ಬಂದಿರುವ ಈ ಮತ್ತು ಉಳಿದ ಮುದ್ರಾರಾಕ್ಷಸಗಳಿಗಾಗಿ ವಾಚಕರ ಕ್ಷಮೆ ಬೇಡುತ್ತೇನೆ.

ಇನ್ನು-ಸಹೃದಯರ ಕಾರುಣ್ಯಕ್ಕೆ ಶರಣ್ಯನಾಗಿ ಈ ಕೃತಿಯನ್ನು ಅವರ ಮಡಿಲಿನಲ್ಲಿರಿಸಿದ್ದೇನೆ.

ಗೊ ರೂ ರು
ನಂದನ॥ ಭಾದ್ರಪದ ಶುಕ್ಲ ೩
[ಗೌರಿಹಬ್ಬ] ತಾ॥ ೨೩-೮-೧೯೫೨

**ಗೊರೂರು ರಾಮಸ್ವಾಮಯ್ಯಂಗಾರ್**

---

# ವಿ ಷ ಯ

## ಮೈಸೂರಿನ ಮಾನ್ಯ ಮುಖ್ಯ ಮಂತ್ರಿಗಳಾದ
## ಶ್ರೀಮಾನ್ ಕೆ. ಹನುಮಂತಯ್ಯ ಬಿ.ಎ. ಎಲ್‌ಎಲ್.ಬಿ. ಅವರು
## ತಮ್ಮ ಅಮೃತಹಸ್ತದಿಂದ ಕೊನಷ್ಟೈ ಗ್ರಂಥದ ಪ್ರಕಾಶನ ಕಾರ್ಯವನ್ನು
## ತಾ|| ೮—೧—೧೯೫೩ರಲ್ಲಿ ನೆರವೇರಿಸಿದಾಗ ಮಾಡಿದ
## ಪ್ರಾಸ್ತಾವಿಕ ಭಾಷಣ.

**ಮಿತ್ರರೇ,**

ಇಂದು ನಾನು ಮೂರು ಕಟ್ಟಡಗಳ ಅಸ್ತಿಭಾರ ಶಿಲೆಗಳನ್ನು ಸ್ಥಾಪಿಸಿದೆ. ಈ ಮುಂದೆ ನಾನು ಮಾಡಲಿರುವ ಕಾರ್ಯ ಇದಕ್ಕಿಂತಲೂ ಮಿಗಿಲಾದುದು, ಸಂತೋಷದಾಯಕವಾದುದು, ಮತ್ತು ಆಪ್ಯಾಯಮಾನವಾದುದು. ಅದುವೆ ಈ ಕೊನಷ್ಟೈ ಕತೆಗಳ ಪ್ರಕಾಶನ ಕಾರ್ಯ. ಕಟ್ಟಡಗಳು ಈ ಊರಿನ ಉಪಯೋಗಕ್ಕೆ ಮಾತ್ರ ಬರಬಹುದು. ಕೊನಷ್ಟೈ ಕತೆಗಳಾದರೋ ಎರಡುಕೋಟಿ ಕನ್ನಡಿಗರ ಮನಸ್ಸಿಗೆ ಸುಮ್ಮಾನವನ್ನೂ ಆಹ್ಲಾದವನ್ನೂ ತರುವ ಹಾಸ್ಯರಸ ಭಂಡಾರವಾಗಿದೆ.

ಶ್ರೀಮಾನ್ ಗೊರೂರು ರಾಮಸ್ವಾಮಯ್ಯಂಗಾರ್ಯರು ನನ್ನ ಮಿತ್ರರು. ಹಾಗೂ ನೆಚ್ಚಿನ ಸಹೋದ್ಯೋಗಿಗಳು. ಇವರು ಬಹಳ ಒಳ್ಳೆಯ ಲೇಖಕರು. ನಾನು ಇವರ ಅನೇಕ ಕಥೆ ಕಾದಂಬರಿಗಳನ್ನು ಓದಿದ್ದೇನೆ. ಅವು ಜಗತ್ತಿನ ಅತ್ಯುತ್ತಮ ಸಾಹಿತ್ಯದ ಪಂಕ್ತಿಗೆ ಸೇರಲು ಅರ್ಹವಾಗಿವೆ. ಇವರ ಹಾಸ್ಯ ಬಹಳ ಮೇಲ್ತರಗತಿಯದು, ಸುಸಂಸ್ಕೃತವಾದುದು, ಅಪರೂಪವಾದುದು. ನಗೆಯನ್ನು ಮರೆತಿರುವ ನಮ್ಮ ಜನಕ್ಕೆ ಇವರ ಗ್ರಂಥಗಳು ನಗುವನ್ನು ಕಲಿಸಿವೆ. ಇವರ ಕೆಲಸ ಕಾರ್ಯಗಳಿಂದ ನನಗೂ ಕೊಂಚ ಪ್ರತಿಬಿಂಬಿತವಾದ ಕಳೆಯು ಬರುವಂತಾಗಿದೆ. ಆದುದರಿಂದ ಕೊನಷ್ಟೈ ಕತೆಗಳನ್ನು ಕನ್ನಡಿಗರ ಮುಂದಿಡುವ ಈ ಕೆಲಸವನ್ನು ಅಭಿಮಾನದಿಂದಲೂ ಹರ್ಷದಿಂದಲೂ ಮಾಡುತ್ತಿದ್ದೇನೆ. ನಮ್ಮ ನಾಡಿನ ಜನಜೀವನದ ವಿವಿಧ ಸನ್ನಿವೇಶಗಳಿಂದ ಹಾಸ್ಯರಸ ಪ್ರಧಾನ

ವಾದ ಮಾಧುರ್ಯವನ್ನು ಕೂಡಿಸಿ ಅನೇಕ ಕತೆಗಳನ್ನು ಇವರು ಬರೆದಿದ್ದಾರೆ. ಜೇನು ಹುಳುಗಳು ವಿವಿಧ ಪುಷ್ಪಗಳಿಂದ ಶೇಖರಿಸಿದ ಜೇನು ಕೊಡಗಳಂತೆ ಇವೆ ಗೊರೂರರವು ಕೃತಿಗಳು. ಇವರು ಇಂದು ಮಾಡಿರುವ ಕೆಲಸ, ಪಕ್ಕದ ಹೂ ತೋಟಕ್ಕೆ ಹೋಗಿ ಅಲ್ಲಿನ ಮಾಧುರ್ಯವನ್ನು ಕೂಡಿಸಿಕೊಂಡು ತಂದು ಮತ್ತೊಂದು ಮಧುರ ಕೊಡವನ್ನು ಕನ್ನಡಿಗರ ಸವಿಯೂಟಕ್ಕೆ ಬಡಿಸಿರುವುದು. ತಮಿಳು ಜನ ಜೀವನದ ಸನ್ನಿವೇಶಗಳಿಂದ ಸೆಳೆದ ಒಂದು .ಹಾಸ್ಯ ಮಾಲೆ ಕೊನಷ್ಟೈ ಕತೆಗಳು. ತಮಿಳಿನಿಂದ ಕನ್ನಡಕ್ಕೆ ಈ ಕತೆಗಳನ್ನು ಶ್ರೀಮಾನ್ ಗೊರೂರು ರಾಮಸ್ವಾಮಿಯ್ಯಂಗಾರ್‍ಯರು ಭಾಷಾಂತರಿಸಿದ್ದಾರೆ. ಭಾಷಾಜ್ಞಾನ, ಸ್ವಾಭಾವಿಕ ಹಾಸ್ಯ, ಇವರಿಗೆ ಎಷ್ಟು ದೈವದತ್ತವಾಗಿದೆಯೋ ಭಾಷಾಂತರ ಜ್ಞಾನವೂ ಅಷ್ಟೇ ದೈವದತ್ತವಾಗಿ ಇವರಿಗೆ ಬಂದಿರುತ್ತದೆ. ಇದಕ್ಕೆ ಈ ದಿವಸ ನಾನು ಪ್ರಕಾಶನಗೊಳಿಸುತ್ತಿರುವ "ಕೊನಷ್ಟೈ ಕತೆಗಳ" ಕನ್ನಡದ ಅನುವಾದ ಸಾಕ್ಷಿಭೂತವಾಗಿದೆ.

ಈ ಕೊನಷ್ಟೈ ಕತೆಗಳನ್ನು ನಾನು ಓದಿದ್ದೇನೆ. ಅದರ ಹೊಸ ಮಾದರಿಯ ಹಾಸ್ಯರಸವನ್ನು ಅನುಭವಿಸಿ ಆನಂದಪಟ್ಟಿದ್ದೇನೆ. ದುಗುಡ ದುಮ್ಮಾನಗಳಿಂದ ಕಷ್ಟಕಾರ್ಪಣ್ಯಗಳಿಂದ ಜೀಸತ್ತ ಮನಸ್ಸಿಗೆ ಹರ್ಷ ಆನಂದಗಳನ್ನು ತರುವ ಸಿದ್ಧೌಷಧದಂತೆ ಇದೆ ಈ ಕೊನಷ್ಟೈ ಕತೆಗಳು.

ತಮಿಳರ ಮತ್ತು ಕನ್ನಡಿಗರ ಸಂಬಂಧವು ಆರ್ಷೇಯವಾದುದು ನಿಕಟವಾದುದು. ಕಾವೇರಿ ನದಿಯು ಈ ಬಾಂಧವ್ಯವನ್ನು, ಸತತ ಹರಿದು ಹರಿದು ಮೆರೆಸುತ್ತಿದ್ದಾಳೆ. ಹಾಗೆಯೇ ಸರಸ್ವತಿಯು ತಮಿಳು ಕನ್ನಡ ಸಾಹಿತ್ಯಗಳ ಬಾಂಧವ್ಯವನ್ನು ಶಾಶ್ವತವಾಗಿ ಬೆಸೆಯುತ್ತಿದ್ದಾಳೆ. ಕೊನಷ್ಟೈ ಕತೆಗಳು ಈ ಬಾಂಧವ್ಯದ ಬೆಸಗೆಯ ಅತ್ಯಂತ ನೂತನವಾದ ಒಂದು ಸಂಕೇತ.

ಸಾಹಿತ್ಯ, ಸೌಂದರ್ಯ, ಆನಂದ, ರಸ, ಇವು ಸರ್ವವ್ಯಾಪಿ, ಸರ್ವಕಾಲಿಕ ಅವು ಮನುಷ್ಯನ ಆತ್ಮದ ಪ್ರಪಂಚಕ್ಕೆ ಸೇರಿದುವು. ಸಾಹಿತ್ಯ ಜೀವನವನ್ನು ಹಸನುಮಾಡುತ್ತದೆ. ಬಾಳನ್ನು ಬೆಳಗು ಮಾಡುತ್ತದೆ. ಮನಸ್ಸಿಗೆ ಮೆರಗನ್ನು ಕೊಡುತ್ತದೆ.

"ಕೊನಸ್ಟೈ ಕತೆಗಳನ್ನು" ನಾನು ಓದಿ ಆನಂದಿಸಿದ್ದೇನೆ. ಇದರಲ್ಲಿರುವ ಹಾಸ್ಯದಲ್ಲಿ ಒಂದು ವಿಧವಾದ ನವೀನತೆ, ಹೊಸ ಬೆಡಗು, ಇದ್ದಕ್ಕಿದ್ದಂತೆ ಬೆರಗುಗೊಳಿಸುವ ಸನ್ನಿವೇಶ, ಅನಿರೀಕ್ಷಿತವಾದ ಮನೋಹರವಾದ ಹೊಳಪು ಓದುವವರನ್ನು ನಗಿಸುತ್ತದೆ. ದೇಹಕ್ಕೆ ಕೊಳೆ ಸೇರುವುದು ಹೇಗೆ ಸ್ವಾಭಾವಿಕ ವೋ ಹಾಗೆಯೇ ಮನಸ್ಸಿಗೂ ರಾಗದ್ವೇಷಾದಿ ಮಾಲಿನ್ಯಗಳು ಸೇರುವುದು ಸ್ವಾಭಾವಿಕ. ಆದರೆ ದೇಹದ ಕೊಳೆಯನ್ನು ನೀರಿನಿಂದ ತೊಳೆದುಕೊಳ್ಳು ವಂತೆ ಮನಸ್ಸಿನ ಕೊಳೆಯನ್ನು ಸಾಹಿತ್ಯ ಲಭ್ಯವಾದ ಜ್ಞಾನದಿಂದ ತೊಳೆದು ಕೊಳ್ಳಬೇಕು.

ಶ್ರೀಮಾನ್ ರಾಮಸ್ವಾಮಯ್ಯಂಗಾರ್ಯರು ಈ ಹಳ್ಳಿಯಲ್ಲಿ ಕುಳಿತು ಕೊಂಡು ಮಾಡುತ್ತಿರುವ ಈ ಸೇವೆ ಜನತೆಗೂ ಜನಾರ್ಧನನಿಗೂ ಪ್ರಿಯ ವಾಗಿದೆ. ಇವರು ನಮ್ಮ ಜನದ ಪ್ರೇಮಿಗಳು, ಸಜ್ಜನರು. ಇವರ ಸಾಹಿತ್ಯ ಸೇವೆ ಸತತವಾಗಿ ನಡೆಯಲಿ. ಇಂಥಹವರು ಹಳ್ಳಿಗಳಲ್ಲಿ ನೆಲೆಸುವುದರಿಂದ ಹಳ್ಳಿಗಳ ಸರ್ವತೋಮುಖವಾದ ಏಳಿಗೆಯಾಗುತ್ತದೆ.

ಇನ್ನು ಈ ಊರಿನವರಾಗಿ ಇಲ್ಲಿಯೇ ಬರೆದು ಇಲ್ಲಿಯೇ ಮುದ್ರಿಸಿ ಪ್ರಕಟಿಸಿದ ಈ ಗ್ರಂಥವನ್ನು, ಅತ್ಯಂತ ಆನಂದದಿಂದ ಪ್ರಕಾಶನಗೊಳಿಸುತ್ತೇನೆ. ಈ ಕತೆಗಳನ್ನು ಓದಿ ಆನಂದಿಸುವವರು ನಿಜವಾಗಿ ಅದೃಷ್ಟಶಾಲಿಗಳು. ಏಕೆಂದರೆ, ಅದೃಷ್ಟವಿಲ್ಲದೆ ಆನಂದ ದೊರಕಲಾರದು.

—o—

" ತಮಿಳು ಲೇಖಕ ಕೊನಷ್ಟೈ ಅವರ ಹದಿನೆಂಟು ಕತೆಗಳು ಈ ಸಂಗ್ರಹದಲ್ಲಿವೆ. ಲೇಖಕರು ಮದ್ರಾಸ್ ಹೈಕೋರ್ಟಿನ ನಿವೃತ್ತ ನ್ಯಾಯಾಧೀಶರು. ಈ ಎಲ್ಲ ಕತೆಗಳಲ್ಲಿ ಲೇಖಕರ ಸಂಸ್ಕೃತಿ ವಿನೋದ ಸ್ವಭಾವ ಎದ್ದು ಕಾಣುತ್ತದೆ. ಅನುವಾದವೂ ಬಹಳ ಚೆನ್ನಾಗಿದೆ. ಕಮಿಷನರ ಕೊರಗು, ಜ್ಯೋತಿಷ್ಯ ಮುಂತಾದ ಕತೆಗಳು ಮತ್ತೊಮ್ಮೆ ಓದೋಣವೆನ್ನುವಷ್ಟು ಸುಂದರವಾಗಿವೆ. ಪರಭಾಷೆಯ ಇಂತಹ ಉತ್ತಮ ಪುಸ್ತಕಗಳ ಭಾಷಾಂತರವು ಕನ್ನಡ ಸಾಹಿತ್ಯಕ್ಕೆ ತುಂಬ ಅಗತ್ಯವೂ ಉಪಯುಕ್ತವೂ ಆಗಿದೆನ್ನಬಹುದು."

—**ಕರ್ಮವೀರ**

# ಜೋತಿಷ್ಯ

" ನೀವು ಏನು ಬೇಕಾದರೂ ಹೇಳಿ. ನನಗೆ ಜ್ಯೋತಿಷ್ಯದಲ್ಲಿ ನಂಬಿಕೆ ತಪ್ಪುವುದಿಲ್ಲ. ಅದರಲ್ಲಿಯೂ ರಾಮಲಿಂಗ ಜೋಯಿಸರಲ್ಲಿ ಪೂರ್ಣ ನಂಬಿಕೆ" ಎಂದಳು ಕಮಲಾ.

ಸಮಯ, ಸಂಧ್ಯಾ ಕಾಲ. ಲೇಡೀಸ್ ಕ್ಲಬ್‌ನ (ಮಹಿಳಾ ಸಮಾಜ) ಉಪವನದ ಒಂದು ಮೂಲೆಯಲ್ಲಿ ಮೇಜಿನ ಸುತ್ತ ಮುವ್ವರು ಚಿಕ್ಕ ವಯಸ್ಸಿನ ಯುವತಿಯರು ಕುಳಿತು ಸಂಭಾಷಣೆಯಲ್ಲಿ ತೊಡಗಿದ್ದರು.

" ನೀನು ಹಾಗೆ ಹೇಳಲು ಕಾರಣ ನನಗೆ ಗೊತ್ತು" ಎಂದಳು ದೇವಕಿ.

" ಏನು ಕಾರಣ ?"

" ನಿನ್ನ ಮದುವೆಗೆ ಮುಹೂರ್ತವನ್ನು ನೋಡಿ ಹೇಳಿದವನು ಅವನು ತಾನೇ"

" ಇಲ್ಲವೇ ಇಲ್ಲ. ಮುಹೂರ್ತ ನೋಡಿ ಮದುವೆ ಮಾಡಿದ್ದರೆ ತಾನೇ ಅವರು ನೋಡಿ ಹೇಳುವುದಕ್ಕೆ ?"

" ಹಾಗಾದರೆ ನಿನಗೆ ಒಳ್ಳೆಯ ಗಂಡ ಸಿಕ್ಕುತ್ತಾನೆ ಎಂದಾದರೂ ಜ್ಯೋತಿಷ್ಯ ಹೇಳಿರಬೇಕು ಅವನು."

" ಅದೂ ಇಲ್ಲ. ಅದಕ್ಕೆ ಅವನು ವಿರೋಧವಾಗಿಯೇ ಹೇಳಿದನು" ಎಂದು ಕಮಲಾ ಮಾತನ್ನು ಲಂಬಿಸಿ ಎಳೆದು ಹೇಳಿದಳು.

" ಹಾಗೆ ಅವನು ಹೇಳಿದುದು ತಾನೇ ಅಂತಹುದೇನು ? ನಿನ್ನ ಗಂಡನಿಗೆ ಒಳ್ಳೆಯ ಹೆಂಡತಿ ಸಿಕ್ಕುತ್ತಾಳೆ ಎಂದು ತಾನೇ. ಅದಕ್ಕಾಗಿ ಶಾಸ್ತ್ರಿಗಳಿಗೆ ಚಿನ್ನದ ತೋಡಾ ಕೊಡಬೇಕೆನ್ನುತ್ತೀಯಾ ?" ಎಂದು ಕೇಳಿದಳು ಸರಳಾ. ಎಲ್ಲರೂ ನಕ್ಕರು.

" ನನ್ನ ಸ್ವಂತ ವಿಷಯ ಇರಲಿ. ನನ್ನ ಮಾತಿನ ಪುಷ್ಟಿಗಾಗಿ ಬೇರೆ ದೃಷ್ಟಾಂತರ ಹೇಳುತ್ತೇನೆ. ನನ್ನ ಪ್ರೇಮದ ಗೆಳತಿ ವಿಮಲಾ ತನಗೆ ಸಂಭವಿಸಿದುದನ್ನು ಸ್ವಲ್ಪವೂ ಮುಚ್ಚುಮರೆಯಿಲ್ಲದೆ ನನ್ನೊಂದಿಗೆ ಹೇಳಿದ್ದಾಳೆ. ಅದನ್ನು ಹಾಗೆಯೇ ಒಂದು ಅಕ್ಷರವನ್ನೂ ಕೂಡ ಬದಲಾಯಿಸದೆ ಹೇಳುತ್ತೇನೆ.

ಅವನ್ನು ಕೇಳಿದ ಮೇಲೆ ನಿಮ್ಮ ಅಭಿಪ್ರಾಯಗಳನ್ನು ತಿಳಿಸಿ" ಎಂದಳು ಕಮಲಾ.

ಮೂವರೂ ಮೂರು ಐಸ್‌ಕ್ರೀಂ ತರಿಸಿಕೊಂಡು ಸಾವಧಾನವಾಗಿ ಕತೆ ಹೇಳಲೂ ಕೇಳಲೂ ತೊಡಗಿದರು. ವಿಮಲಾ ತನ್ನೊಡನೆ ಹೇಳಿದುದನ್ನು ಕಮಲಾ ಹಾಗೆಯೇ ಹೇಳತೊಡಗಿದಳು.

## ವಿಮಲಾ ಕಮಲೆಗೆ ಹೇಳಿದುದು

ನನ್ನನ್ನು ಮದುವೆಯಾಗಲು ಬಯಸಿ ಬರುವವರ ಜಾತಕಗಳನ್ನೆಲ್ಲಾ ನಮ್ಮ ತಂದೆ ರಾಮಲಿಂಗ ಜೋಯಿಸರಿಗೆ ಸರಿ ನೋಡಲು ಕೊಡುವುದು ಪದ್ಧತಿ. ಅವರು ಪ್ರತಿ ಜಾತಕದಲ್ಲಿಯೂ ಏನಾದರೊಂದು ತಪ್ಪನ್ನು ಕಂಡು ಹಿಡಿದೇ ಹಿಡಿಯುತ್ತಿದ್ದರು. ನನಗೂ ಹದಿನೈದು ವರ್ಷ ತುಂಬಿ ಹೋಗಿತ್ತು. ಕೊನೆಯಲ್ಲಿ ನಮ್ಮ ತಂದೆ ಒಂದು ಜಾತಕವನ್ನು ಕೊಟ್ಟು "ಶಾಸ್ತ್ರಿಗಳೇ ಇದಾದರೂ ಕೂಡುತ್ತದೆಯೇ ನೋಡಿ. ಆವಣಿ (ಆಷಾಢ, ಶ್ರಾವಣ) ಮಾಸವಾದರೂ ಚಿಂತೆಯಿಲ್ಲ, ಈಗಲೇ ವಿವಾಹವನ್ನು ಮುಗಿಸಿಬಿಡ್ತೇನೆ" ಎಂದರು.

ಶಾಸ್ತ್ರಿಗಳು ಕನ್ನಡಕವನ್ನು ಹಾಕಿಕೊಂಡು ನನ್ನ ಜಾತಕವನ್ನೂ ನಮ್ಮ ತಂದೆ ಕೊಟ್ಟ ಜಾತಕವನ್ನೂ—ಎರಡನ್ನೂ ಸ್ವಲ್ಪ ನೋಡಿದರು. ಅನಂತರ ಕನ್ನಡಕವನ್ನು ಹಣೆಯ ಮೇಲಕ್ಕೆ ತಳ್ಳಿಬಿಟ್ಟು ನನ್ನ ಜಾತಕವನ್ನೇ ಮತ್ತೊಂದು ಸಲ ನೋಡಿದರು. ಕೊನೆಯಲ್ಲಿ ದೊಡ್ಡದಾಗಿ ನಿಟ್ಟುಸಿರು ಬಿಟ್ಟು ಎರಡು ಜಾತಕಗಳನ್ನೂ ನೆಲದ ಮೇಲೆ ಹಾಕಿದರು. ನನ್ನ ತಂದೆಗೆ ಎದೆ ಡವ ಡವ ಕೆಂದು ಹೊಡೆದುಕೊಂಡಿತು.

"ಏನು ಶಾಸ್ತ್ರಿಗಳೇ ಹೆಣ್ಣಿಗೆ ಶನಿದೋಷ ಬಲವಾಗಿದೆಯೋ?" ಎಂದು ಕೇಳಿದರು ನಮ್ಮ ತಂದೆ.

"ಹಾಗಿದ್ದರೂ ಏನೂ ಬಾಧಕವಿಲ್ಲ" ಎಂದರು ಶಾಸ್ತ್ರಿಗಳು.

"ಏನು? ಶನಿ ದೋಷ ಬಾಧಕವಿಲ್ಲವೆ?"

"ಹೌದು. ಶನಿ ದೋಷವಾಗಿದ್ದರೆ ಕೂಡಲೇ ಪರಿಹಾರ ಮಾಡಿಬಿಡುತ್ತಿದ್ದೆ"

"ಹಾಗಾದರೆ ಅದಕ್ಕಿಂತ ಕೆಟ್ಟದ್ದು ಏನಿರಬಹುದು ಜಾತಕದಲ್ಲಿ?"

"ಇದುವರೆಗೆ ನನ್ನ ವಿದ್ಯೆಯೇ ಸುಳ್ಳಾಗಿರಬಹುದೆಂದುಕೊಂಡು ನಿಮ್ಮೊಂ

ದಿಗೆ ತಿಳಿಸದೆ ಇದ್ದೆ. ಇನ್ನು ಮುಚ್ಚಿಟ್ಟು ಪ್ರಯೋಜನವಿಲ್ಲ. ಯಾಕೆಂದರೆ ನಾವು ನಿರೀಕ್ಷಿಸದ ಪುರುಷ ಇವಳನ್ನು ಸೇರುತ್ತಾನೆ. ಇವಳ ಜಾತಕ ಸೀತಾ ದೇವಿಯ ಚಕ್ರದಂತೆ, ಆದರೆ ಇನ್ನೂ ಬಲವಾಗಿ ವಕ್ರವಾಗಿ ಇದೆ. ಸೀತಾ ದೇವಿಯನ್ನಾದರೋ ವಿವಾಹವಾದ ನಂತರ ರಾವಣನು ಎತ್ತಿಕೊಂಡು ಹೋಗು ವುದು ಸಂಭವಿಸಿತು. ರಾವಣನನ್ನು ರಾಮನು ಧ್ವಂಸ ಮಾಡಿ ಸೀತೆಯನ್ನು ಹಿಂದಕ್ಕೆ ಕರೆದುಕೊಂಡು ಬಂದನು. ನಿಮ್ಮ ಹೆಣ್ಣಿಗೆ ಜಾತಕದಲ್ಲಿ ತೋರುವ ವಿಧಿಯೊ?-ನಾನು ಏನು ಹೇಳಲಿ? ನನಗೆ ನಾಲಗೆಯೇ ಏಳುವುದಿಲ್ಲ. ಆದರೂ ಹೇಳುತ್ತೇನೆ. ನಿಮ್ಮ ಈ ಕನ್ಯೆಯನ್ನು ಒಬ್ಬನು ಬಲಾತ್ಕಾರವಾಗಿ ಹಾರಿಸಿಕೊಂಡು ಹೋಗಿ ಮದುವೆ ಮಾಡಿಕೊಳ್ಳುತ್ತಾನೆ" ಎಂದರು.

"ಹಾಗೆಯೇ"? ಎಂದು ನಮ್ಮ ತಂದೆ ಗಾಬರಿಯಿಂದ ಕೇಳಿದರು.

"ಹೌದು. ಶ್ರೀ ಜಯಂತಿ ಇನ್ನೂ ಒಂದು ವಾರವಿದೆ. ಈ ಏಳು ದಿನಗಳಲ್ಲಿಯೇ ಇದು ನಡೆಯುವುದು" ಎಂದು ಶಾಸ್ತ್ರಿಗಳು ಲೆಕ್ಕಾಚಾರವಾಗಿ ಖಂಡಿತವಾಗಿಯೇ ಹೇಳಿದರು.

ನನ್ನ ತಂದೆಗೂ ತಾಯಿಗೂ ಅರ್ಧ ಮೂರ್ಛೆಯೇ ಉಂಟಾಯಿತು. ಶಾಸ್ತ್ರಿಗಳು ಓಲೆಗರಿ ಪುಸ್ತಕವನ್ನೂ ಜಾತಕಗಳನ್ನೂ ಎತ್ತಿಕೊಂಡು ಹೊರಟು ಹೋದರು. ಸ್ವಲ್ಪ ಹೊತ್ತಿನ ನಂತರ ಮೊದಲು ನಮ್ಮ ತಾಯಿಗೇ ಸ್ವಲ್ಪ ಸಮಾಧಾನವುಂಟಾಯಿತು.

"ಇನ್ನು ಒಂದು ಗಳಿಗೆಯೂ ಈ ಗ್ರಾಮದಲ್ಲಿರುವುದು ಭದ್ರವಲ್ಲ. ಪಟ್ಟಣ ದಲ್ಲಿ ಎಲ್ಲಿಯಾದರೂ ಪೋಲೀಸ್ ಕಾವಲಿನಲ್ಲಿಯೇ ಇನ್ನು ಇರಬೇಕು" ಎಂದಳು.

ನಮ್ಮ ತಂದೆ ಚಿಂತೆಯಿಂದ "ಯಾವ ನಗರಕ್ಕೆ ಹೋಗುವುದು ತಾನೇ ನಮ್ಮಿಂದ ಸಾಧ್ಯ?" ಎಂದರು.

"ತಿರುಚನಾಪಲ್ಲಿಗೆ ಹೋಗೋಣ. ಅಲ್ಲಿ ನಮ್ಮ ಸೋದರತ್ತೆಯ ಮಗ (ಅತ್ತಾನ್) ಸಬ್ ಕಲೆಕ್ಟರ್ ಆಗಿ ಬಂದಿದ್ದಾನೆ. ಅಲ್ಲಿ ಹೋದರೆ ನಮಗೆ ಯಾವ ಯೋಚನೆಯೂ ಇರುವುದಿಲ್ಲ" ಎಂದು ಉಪಾಯ ಹೇಳಿದಳು ನಮ್ಮ ತಾಯಿ.

* ಅತ್ತಾನ್‌ನ ಸಹಾಯ ಬೇಡುವುದು ನಮ್ಮ ತಂದೆಗೆ ಅಷ್ಟು ಇಷ್ಟವಿಲ್ಲ.

---

* ಸೋದರತ್ತೆಯ ಮಗನನ್ನು ತಮಿಳಿನಲ್ಲಿ "ಅತ್ತಾನ್" ಎನ್ನುತ್ತಾರೆ. ಈ ಕತೆ ಯಲ್ಲಿ ಉದ್ದಕ್ಕೂ ಆ ಮಾತನ್ನೇ ಬಳಸಿದೆ.

ಅವರು ಸೀಮೆಗೆ ಹೋಗಿ ಬಂದವರು. ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಅಧಿಕಾರ ದೊರೆತು ಇನ್ನೂ ಒಂದು ವರುಷವಾಗಿತ್ತು. ನನ್ನ ಜಾತಕಕ್ಕಾಗಿ ಹೇಳಿ ಕಳುಹಿಸಿದ್ದರು. ನಮ್ಮ ತಾಯಿಗೆ ಇಷ್ಟವೇ. ಆದರೆ ನಮ್ಮ ತಂದೆ ಒಪ್ಪ ಲಿಲ್ಲ. "ಒಳ್ಳೆಯ ಮಾತು ಹೇಳಿದೆ. ಸೀಮೆಗೆ ಹೋಗಿ ಬಂದವನು ಜಾತಿ ಭ್ರಷ್ಟ, ಅವನಿಗೇ ನನ್ನ ಮಗಳನ್ನು ಕೊಡುವುದು! ಸಾಧ್ಯವಿಲ್ಲ" ಎಂದು ಬಿಟ್ಟಿದ್ದರು. ಅಳಿಯನ ಅಂತಸ್ತಿಗೆ ಅರ್ಹವಾಗಿ ಮರ್ಯಾದೆ ಮಾಡಿ ವಿವಾಹ ಮಾಡುವುದು ಕಷ್ಟವೆಂಬ ಭಾವನೆಯೂ ನಮ್ಮ ತಂದೆಗೆ ಇದ್ದಿರಬಹುದು. ಅವರಲ್ಲಿ ಈಗ ಹೋಗಿ ಸಹಾಯ ಕೇಳುವುದಕ್ಕೆ ನಮ್ಮ ತಂದೆಗೆ ಲಜ್ಜೆಯಾದುದು ಸ್ವಾಭಾವಿಕವೇ? ಹೀಗಿದ್ದರೂ ನಮ್ಮ ತಾಯಿ ಹೇಳಿದಂತೆ ನಮಗೆ ಬೇರೆ ಗತಿ ಇರಲಿಲ್ಲ. ಹೇಗಾದರೂ ಅವರ ಸಹಾಯವನ್ನು ನಾವು ಯಾಚಿಸುವುದು ಈ ಒಂದು ವಾರಕ್ಕಾಗಿ ತಾನೆ? ಈ ಕಾರಣಗಳಿಂದ ಕೊನೆಯಲ್ಲಿ ನಮ್ಮ ತಂದೆ ಸಮ್ಮತಿಸಿದರು.

ತಿರುಚನಾಪಳ್ಳಿಯಲ್ಲಿ ನಮ್ಮ ಅತ್ತಾನ್‌ರ ಬಂಗಲಿಯ ಮಗ್ಗಲು ಮನೆ ಯೊಂದು ನಮಗೆ ಸಿಕ್ಕಿತು. ನಮ್ಮ ಅತ್ತಾನ್‌ರನ್ನ ನಾನು ನೋಡಿ ಕೆಲವು ವರುಷಗಳಾಗಿದ್ದವು. ಮೊದಲು ಅವರು ನನ್ನನ್ನು ವಿವಾಹವಾಗಲು ಬೇಡಿ ದಾಗ ತಿರಸ್ಕರಿಸಿದುದರಿಂದ ಈಗ ಅವರ ಸಹಾಯವನ್ನು ಅಪೇಕ್ಷಿಸಲು ನನಗೆ ಸಂಕಟವಾಗಿತ್ತು. ಒಂದು ಪಕ್ಷ ಅವರಿಗೆ ಇನ್ನೂ ನಮ್ಮ ಮೇಲೆ ಕೋಪವೇ ಇರಬಹುದು" ಎಂದು ಹೆದರಿದ್ದೆನು. ಆದರೆ ಅವರು ನನ್ನನ್ನು ನೋಡಿದಾಗ ಅವರ ಕಣ್ಣುಗಳು ಸ್ವಲ್ಪ ಜ್ವಲಿಸಿದುವೇ ಹೊರತು ಮಾತುಗಳಲ್ಲಿ ಕೋಪವೇನೂ ಕಾಣಲಿಲ್ಲ.

"ಬಾ ಸೀತಾ" ಎಂದರು.

ಅವರು ಉತ್ಸಾಹವಾಗಿ ಒಳ್ಳೆ ನಗು ಮುಖವಾಗಿದ್ದರು. ಆದರೂ ನಮ್ಮ ತಂದೆ ಪದೇ ಪದೇ ಹೇಳಿ ಹೇಳಿ ಅಭ್ಯಾಸವಾಗಿದ್ದಂತೆ "ಅವನು ಜಾತಿಭ್ರಷ್ಟ" ಎಂದು ಖಿನ್ನರಾಗಿ ಹೇಳಿಕೊಂಡರು. ಆದರೆ ಬಾಗಿಲಿನಲ್ಲಿ ಯಾವಾಗಲೂ ನಮಸ್ಕರಿಸುತ್ತ ನಿಂತಿದ್ದ ಇಬ್ಬರು ಜವಾನರನ್ನು ನೋಡಿ ತಂದೆಯವರ ಮನಸ್ಸೂ ಸ್ವಲ್ಪ ಮೃದುವಾಯಿತು.

ಹೇಳಿದ್ದಂತೆ ಅತ್ತಾನ್ ನಿತ್ಯ ಬೆಳಿಗ್ಗೆ ಬರುತ್ತಿದ್ದರು. ನಮ್ಮ ತಂದೆ

ಯವರು ಆ ಕಾಲದಲ್ಲಿಯೇ ಪ್ರಾತಃಕಾಲದ ಜಪದಲ್ಲಿ ತೊಡಗಿರುತ್ತಿದ್ದರು. ನಮ್ಮ ತಾಯಿಗೆ ಹಳ್ಳಿಯಲ್ಲಿ ಮೊಸರು ಕಡೆಯುವ ಅಭ್ಯಾಸವಾಗಿದ್ದುದರಿಂದ ತಾವೇ ಮೊಸರನ್ನು ಕಡೆದ ಹೊರತು ಅವರಿಗೆ ಸಮಾಧಾನವಾಗುತ್ತಿರಲಿಲ್ಲ. ಆದುದರಿಂದ ನಮ್ಮ ಅತ್ತಾನ್ ಬಂದಾಗ ಅವರಿಗೆ ಮಾತಿಗೆ ಸಿಕ್ಕುತ್ತಿದ್ದವಳು ನಾನು ಒಬ್ಬಳೇ. ಆದರೆ ಅದರಿಂದ ಅವರಿಗೆ ಅತೃಪ್ತಿಯಾದಂತೆ ತೋರಲಿಲ್ಲ.

* * * *

"ನಿನ್ನ ಸ್ನೇಹಿತೆ ವಿಮಲಾವನ್ನು ಒಂದು ಸಲ ನೋಡಬೇಕೆಂದು ಆಸೆಯಾಗಿದೆ" ಎಂದು ದೇವಕಿ,

"ನನಗೂ ಹಾಗೆಯೇ" ಎಂದು ಸರಳಾ ಅನುಮೋದಿಸಿದಳು.

"ಏತಕ್ಕಾಗಿಯೋ?" ಎಂದು ಕಮಲಾ ಸ್ವಲ್ಪ ಕೋಪದಿಂದ ಕೇಳಿದಳು.

"ಏನೂ ಇಲ್ಲ. ಮುಂದೆ ಹೇಳು (ಐಯ್ಯರೇ ಇನ್ನೂ ಮೂರು ಐಸ್‌ಕ್ರೀಂ ತಂದು ಕೊಡಿ) ಅವರಿಬ್ಬರೂ ಏನನ್ನು ಕುರಿತು ದಿನವೂ ಮಾತನಾಡಿಕೊಳ್ಳುತ್ತಿದ್ದರೋ!"

ಕಮಲಾ ಮತ್ತೆ ಮುಂದುವರಿಸಿ ವಿಮಲಾ ತನ್ನೊಂದಿಗೆ ಹೇಳಿದುದನ್ನು ಹೇಳತೊಡಗಿದಳು.

* * * *

ನಾವು ಏನೇನು ಮಾತನಾಡಿಕೊಂಡೆವು ಎಂಬುದು ನನಗೆ ಜ್ಞಾಪಕವಿಲ್ಲ. ಆದರೆ ಹೊತ್ತು ಬಹಳ ಕಳೆದು ಹೋಯಿತು. ಮೂರನೆಯ ದಿವಸ ನಮ್ಮ ಮನೆಯಿಂದ ಹೊರಡುವಾಗ ಅತ್ತಾನ್ ನನಗೆ ಒಂದು ಪಟವನ್ನು ತೋರಿಸಿದರು.

''ಇದು ಯಾರು ಹೇಳು ನೋಡೋಣ''

''ಅದು ಒಂದು ರಾಜಾ''

''ಅಲ್ಲ, ಅಲ್ಲ''

ಅಲ್ಲವಾದರೆ ಅಮರ ಸಿಂಹಾಸನ ಟಾಕೀಸ್‌ನಲ್ಲಿ ರಾವಣ ವೇಷಧಾರಿಯ ಚಿತ್ರ ಪತ್ರಿಕೆಗಳಲ್ಲಿ ಬಿದ್ದಿತ್ತು. ಇದು ಅವನಾಗಿರಬಹುದು.

"ಅದೂ ಅಲ್ಲ. ಇವನಂತಿರುವ ಒಬ್ಬನು ಶ್ರೀ ಜಯಂತಿಗೆ ಮೊದಲು ನಿನ್ನನ್ನು ಹಾರಿಸಿಕೊಂಡು ಹೋಗುತ್ತಾನೆ."

"ಈ ವಿಚಾರ ನಿಮಗೆ ಹೇಗೆ ಗೊತ್ತು?" ಎಂದು ಕೇಳಿದೆ. ಅವರು ಪ್ರತ್ಯುತ್ತರ ಕೊಡದೆ ಹೊರಟು ಹೋದರು.

ಅವರು ಮರು ದಿವಸ ಬಂದಾಗ ಮತ್ತೆ ಅದೇ ವಿಷಯವನ್ನು ಕೇಳಿದೆ. "ಅದೇ? ಒಂದು ಹೆಣ್ಣನ್ನು ಹಾರಿಸಿಕೊಂಡು ಹೋದುದಕ್ಕಾಗಿ ಸೆರೆಯಲ್ಲಿರುವ ಖೈದಿಯ ಚಿತ್ರ. ನಿನಗಾಗಿ ಬರುವ ಪುರುಷ ಹೇಗಿರುತ್ತಾನೆಂಬುದನ್ನು ತೋರಿಸಲು ಅದನ್ನು ತರಿಸಿದೆ."

"ಅವನ ಮುಖ ನನಗೇನೂ ಒಪ್ಪಿಗೆಯಿಲ್ಲ" ಎಂದು ಹೇಳಿ ಪಟವನ್ನು ಕಿತ್ತುಕೊಂಡು ಹರಿದು ಹಾಕಿದೆ.

"ಹಾಗಾದರೆ ನಿನಗೆ ಬೇರೆ ಒಬ್ಬನ ಪಠವನ್ನು ತೋರಿಸಲೆ?"

"ಯಾರ ಪಟ?"

"ಯಾರೊ ಒಬ್ಬ, ಒಂದು ಹೆಣ್ಣನ್ನು ಹಾರಿಸಿಕೊಂಡು ಹೋಗಿ ಅವಳನ್ನು ವಿವಾಹವಾಗುತ್ತಾನಂತೆ. ಹಾಗೆ ಅವನಿಗೆ ಒಬ್ಬ ಜೋಯಿಸರು ಹೇಳಿದ್ದಾರೆ."

''ಎಲ್ಲಿ ತೋರಿಸಿ. ನಿಮ್ಮ ಪಠವೇ; ಹ್ಯಾಟ್ ಹಾಕಿಕೊಂಡ ಮಾತ್ರಕ್ಕೆ ನನಗೆ ತಿಳಿಯದೆ? ಸುಮ್ಮನೆ ಯಾಕೆ ಸುಳ್ಳೆಲ್ಲ ಹೇಳುತ್ತೀರಿ?''

''ಏನು ಸುಳ್ಳು ಹೇಳಿದೆ? ನಿನಗೆ ಜೋಯಿಸ ಹೇಳಿದುದು ನಿಜ, ನನಗೆ ಹೇಳಿದರೆ ಮಾತ್ರ ಸುಳ್ಳು ಅಲ್ಲವೇ? ಕೆಲವು ಕಾಲದಿಂದಲೇ, ಹಾರಿಸಿಕೊಂಡು ಹೋಗಬೇಕಾದ ಹೆಣ್ಣನ್ನೂ ಸಹ ಹುಡುಕಿ ಇಟ್ಟಿದ್ದೇನೆ'' ಎಂದು ಹೇಳಿಕ್ಕೊಂಡೇ ಅವರು ಹೊರಟು ಹೋದರು.

ಮರು ದಿವಸ ಅವರು ಬಂದು "ಅವನ ವಿಚಾರ ಸರ್ಕಾರಕ್ಕೆ ಬರೆದಿದ್ದೇನೆ" ಎಂದರು.

"ಯಾರ ವಿಚಾರ?"

"ನಿನ್ನೆ ಹೇಳಿದೆನಲ್ಲ ಆ ಖೈದಿಯ ವಿಚಾರ"

ಏನೆಂತ ಬರೆದಿದ್ದೀರೋ?"

"ಉಳಿದಿರುವ ಶಿಕ್ಷೆಯನ್ನು ವಜಾ ಮಾಡಬೇಕೆಂದು"

"ಆ ರೀತಿ ಯಾಕೆ ಬರೆದಿರಿ?"

"ನೀನೇ ಹೇಳು. ನಾನು ಮಾತ್ರ ನಿನ್ನನ್ನು ಹಾರಿಸಿಕೊಂಡು ಹೋಗಿ ವಿವಾಹ ಮಾಡಿಕೊಂಡು ನನ್ನ ಅಧಿಕಾರದಲ್ಲಿರುವಾಗ, ಅದೇ ರೀತಿ ಮಾಡಿದ

ಮತ್ತೊಬ್ಬನು ಜೈಲಿನಲ್ಲಿರುವುದು ನ್ಯಾಯವೆ?

"ನೀವೇನೂ ನನ್ನನ್ನು ಹಾರಿಸಿಕೊಂಡು ಹೋಗುವುದಿಲ್ಲ" ಎಂದು ಖಂಡಿತವಾಗಿ ಹೇಳಿದೆ.

"ಹಾಗೆಯೆ? ನಮ್ಮಿಬ್ಬರಿಗೂ ಹೇಳಿರುವ ಜ್ಯೋತಿಷ್ಯ ಸುಳ್ಳಾಗಿ ಹೋಗುವುದೆ? ನಾನು ಇಷ್ಟು ಕಷ್ಟಪಟ್ಟು ದೇವಸ್ಥಾನದ ಧರ್ಮದರ್ಶಿಗಳಿಂದ ಸಂಪಾದಿಸಿರುವ ಈ ಆಶೀರ್ವಾದ ಪತ್ರವೂ ವ್ಯರ್ಥವಾಗಿ ಹೋಗುವುದೇ?" ಎಂದರು.

ನಾನೇನೂ ಬದಲು ಹೇಳಲಿಲ್ಲ. ತಟಕ್ಕನೆ ಅವರ ಕೈಯ್ಯಲ್ಲಿದ್ದ ಕೆಂಪು ಚೀಟಿಯನ್ನು ಕಿತ್ತುಕೊಂಡೆ. ಮರು ದಿವಸ ಗುಣಕ್ಷೇತ್ರ ದೇವಸ್ಥಾನದಲ್ಲಿ ವಿವಾಹವನ್ನು ನಡೆಸಿಕೊಳ್ಳಲು ದೇವಾಲಯದ ಅಧಿಕಾರಿಗಳು ಕೊಟ್ಟಿದ್ದ ಅನುಮತಿ ಪತ್ರ ಅದು. ವಧುವಿನ ಹೆಸರು ವಿಮಲಾ ಎಂದು ಇತ್ತು. ಅದಕ್ಕೆ ಮೇಲೆ ಅಳಿಯನಾಗುವವನು ಎಂಬಲ್ಲಿ ಅತ್ತಾನ್ ರ ಹೆಸರಿತ್ತು. ಶುಭಮಸ್ತು ಎಂಬ ಧರ್ಮದರ್ಶಿಗಳ ಆಶೀರ್ವಚನವೂ ಇತ್ತು. ಅತ್ತಾನ್ ಹೀಗೆ ಮಾಡಿದುದಕ್ಕೆ, ನನಗೆ ಮಾತ್ರ ಅವರು ಸಮಯ ಕೊಟ್ಟಿದ್ದರೆ, ಅವರಿಗೆ ಸಾವಿರ ಆಕ್ಷೇಪಣೆ ಹೇಳಿರುತ್ತಿದ್ದೆ. ಆದರೆ ನಾನು ಅದನ್ನು ಪೂರ್ಣ ಓದುವುದಕ್ಕೆ ಮುಂಚೆಯೇ ಅವರು ಕಿತ್ತುಕೊಂಡು ಹೋಗಿಬಿಟ್ಟರು. ಅವರನ್ನು ಮತ್ತೆ ಕಂಡಾಗ ಹೇಗೆ ಹೇಗೆ ಗದರಿಸಬೇಕೆಂದು ಆ ಹಗಲು ರಾತ್ರಿಯೆಲ್ಲಾ ಉರು ಹಾಕಿಕೊಂಡಿದ್ದೆ. ಎಷ್ಟೇ ಅತ್ತಾನಿಯಾಗಿರಲಿ, ಸುಂದರನಾಗಿರಲಿ, ಪ್ರಿಯನಾಗಿರಲಿ, ಈ ರೀತಿ ಅವರೊಂದಿಗೆ ಓಡಿಹೋಗಿ ಯಾರೂ ಕಾಣದಂತೆ ಮದುವೆ ಮಾಡಿಕೊಳ್ಳುವುದು ಚೆನ್ನಾಗಿರುತ್ತದೆಯೇ? ಅವರೊಂದಿಗೆ ಪ್ರಕಾಶವಾಗಿ ಮಣೆಯ ಮೇಲೆ ಕುಳಿತು ವಿವಾಹವಾಗಲು ನನ್ನ ತಂದೆ ಒಪ್ಪುವುದಿಲ್ಲವೆಂಬ ಮಾತಂತೂ ಇರಲಿ. ನನ್ನ ಮದುವೆಗೆ ನಾನು ಮೊದಲು ಒಪ್ಪಬೇಡವೇ? ನನ್ನನ್ನು ಬಾಯಿ ಮಾತಿಗಾದರೂ ಕೇಳಿ ಒಪ್ಪಿಸದೆ ನನ್ನ ಸಮ್ಮತಿ ತಮ್ಮ ಕೈಯ್ಯಲ್ಲಿಯೇ ಇದೆಯೆಂದು ತಿಳಿದು ತೀರ್ಮಾನಿಸುವುದೇ? ಎಷ್ಟು ಧೈರ್ಯ? ಇದಕ್ಕಾಗಿಯಾದರೂ ಅವರನ್ನು ಮದುವೆ ಮಾಡಿಕೊಂಡು ಅನಂತರ ದಿನವೂ ಅವರ ಮಾತನ್ನು ಮೀರಿ ನಡೆದು ಸೇಡು ತೀರಿಸಿಕೊಳ್ಳಬೇಕೆಂದು ಕೂಡ ನನಗೆ ಆಗಾಗ್ಗೆ ತೋರ ಹತ್ತಿತ್ತು.

ಆದರೆ ಮರು ದಿನ ಬೆಳಿಗ್ಗೆ ಅವರನ್ನು ನೋಡಿದಾಗ ನನಗೆ ಅಯ್ಯೋ

ಪಾಪ ಎನ್ನಿಸಿತು. ಕಿವಿಯನ್ನು ಮುಚ್ಚಿ ದವಡೆ ಸುತ್ತ ಒಂದು ಕೆಂಪು ಬಣ್ಣದ ಶಾಲನ್ನು ಸುತ್ತಿದ್ದರು.

ಗಾಬರಿಯಿಂದ " ಏನು ಸಮಾಚಾರ " ಎಂದು ಕೇಳಿದೆ.

" ಕಿವಿ ನೋವು. ಎರಡು ಕಿವಿಗಳಲ್ಲಿಯೂ ಚುಚ್ಚುತ್ತಿದೆ. ರಾತ್ರಿಯೆಲ್ಲಾ ಕಣ್ಣನ್ನೇ ಮುಚ್ಚಲಿಲ್ಲ "

ನನಗೆ ಕರುಣೆ ಹೆಚ್ಚಾಗಿ ಕೋಪ ಇಳಿದು ಹೋಯಿತು. " ಏನಾದರೂ ಔಷಧಿ ಮಾಡಿಕೊಳ್ಳಬಾರದೆ ?" ಎಂದೆ.

" ಒಂದು ಔಷಧಿಯೂ ಬಾಕಿಯಿಲ್ಲ. ಇನ್ನು ಮಂತ್ರಿಸಿ ನೋಡ ಬೇಕು ಅಷ್ಟೆ "

ನಮ್ಮ ತಂದೆಯವರಿಗೆ ಮಂತ್ರದಲ್ಲಿ ಪೂರ್ಣ ನಂಬಿಕೆ. ಯಾವ ರೋಗ ಬಂದರೂ ಊರಿನಲ್ಲಿ ಅವರು ಮಾಂತ್ರಿಕನನ್ನೇ ಕರೆಸುತ್ತಾರೆ. ನನಗೆ ಅದರಲ್ಲಿ ಅಷ್ಟು ನಂಬಿಕೆ ಇಲ್ಲ. ಆದರೆ ನಮ್ಮ ಅತ್ತಾನ್ ತುಂಬ ಓದಿದವರು. ಅವರೇ ಹೇಳುವಾಗ ಯಾಕೆ ಮಾಡಿ ಪರೀಕ್ಷಿಸಬಾರದು? ಎಂದು ನನಗೆ ತೋರಿತು.

ಅತ್ತಾನ್ ಹೇಳಿದರು.

" ಆದರೆ ಕಿವಿಯ ನೋವಿಗೆ ಮಂತ್ರಿಸುವುದೆಂದರೆ ಬಹಳ ತಾಪತ್ರಯ. ಮದುವೆಯಾಗದ ಹೆಣ್ಣು ಮಂತ್ರಿಸಿದರೆ ಮಾತ್ರ ಫಲಿಸುತ್ತೆ "

" ಅದೇನೂ ಅಂತಹ ಮಹಾ ತಾಪತ್ರಯವೆ ? ನಾನು ಸ್ನಾನ ಮಾಡಿ ಶುದ್ಧಳಾಗಿದ್ದೇನೆ. ಮಂತ್ರವನ್ನು ಹೇಳಿ, ಜಪಿಸುತ್ತೇನೆ " ಎಂದೆ.

" ಜಪಿಸಬೇಡ. ಮಂತ್ರವನ್ನು ನನ್ನ ಕಿವಿಯಲ್ಲಿ ಒಂದು ಸಲ ಹೇಳಿದರೆ ಸಾಕು " ಎಂದು ಹೇಳಿ ಕಿವಿಗೆ ಕಟ್ಟಿದ್ದ ಶಾಲುವನ್ನು ಬಿಚ್ಚಿದರು.

ರಾತ್ರಿಯೆಲ್ಲಾ ಎಚ್ಚರವಾಗಿದ್ದಿದ್ದರೂ ಮುಖವೇನೂ ಬಾಡಿರಲಿಲ್ಲ. " ಮೊದಲು ಬಲ ಕಿವಿಯಲ್ಲಿ ನಾನು ಹೇಳುವಂತೆ ಹೇಳು " ಎಂದರು.

" ಓಂ "

" ಓಂ "

" ಅಗ್ನಿ ಸಾಕ್ಷಿ"

" ಅಗ್ನಿ ಸಾಕ್ಷಿ"

" ತವಂ ಮೇ "

" ತವಂ ಮೇ ''

" ಕಾಂತಃ "

" ಕಾಂತಃ "

" ಸರಿ. ಈಗ ಅರ್ಧ ನೋವು ನಿಂತು ಹೋಯಿತು. ಇನ್ನು ಎಡ ಕಿವಿಯಲ್ಲಿ ಇದಕ್ಕೆ ನಮ್ಮ ಭಾಷೆಯಲ್ಲಿ ಹೇಳಿದರೆ ಸಾಕು "

" ಓಂ "

" ಓಂ "

" ಅಗ್ನಿ ಸಾಕ್ಷಿ–ಅಗ್ನಿ ಭಗವಂತನೇ ಸಾಕ್ಷಿಯಾಗಿರಲಿ "

" ಅಗ್ನಿ ಸಾಕ್ಷಿ–ಅಗ್ನಿ ಭಗವಂತನೇ ಸಾಕ್ಷಿಯಾಗಿರಲಿ "

" ತವಂ–ನೀನು "

" ತವಂ–ನೀನು"

" ಮೇ–ನನಗೆ"

" ಕಾಂತಃ–ಕಾಂತನು"

" ಕಾಂ–ನಾನು ಹೇಳುವುದಿಲ್ಲ "

" ಆಗಲೇ ಹೇಳಿಯೇ ಆಯಿತಲ್ಲ, ಸಂಸ್ಕೃತದಲ್ಲಿ ಅದೂ ಬಲ ಕಿವಿಯಲ್ಲಿ ಹೇಳುವುದು ತಾನೇ ಮುಖ್ಯವಾದುದು. ಅಗ್ನಿ ಸಾಕ್ಷಿಯಾಗಿ ಹೇಳಿದ ಮಾತುಗಳನ್ನು ಇನ್ನು ಹೇಗೆ ಅಳಿಸುವುದು? ಬೇರೆ ಪುರುಷನನ್ನು ಹೇಗೆ ಮದುವೆಯಾಗುವುದು? ಆ ಚೀಟಿ ಎಲ್ಲಿ "?

" ಆ ಮೇಜಿನ ಡ್ರಾಯರ್‌ನಲ್ಲಿದೆ ನಾನು ಯಾತಕ್ಕೂ ಸಮ್ಮತಿಸುವುದಿಲ್ಲ "

" ಕಿಟಕಿಯ ಆಚೆ ಇಣಕಿ ನೋಡು, ಬಾಗಿಲಿನಲ್ಲಿ ಮೋಟಾರು ಸಿದ್ಧವಾಗಿದೆ."

" ನಾನು ಇಣಕಿ ನೋಡುವುದಿಲ್ಲ. ಅಬ್ಬ ಎಷ್ಟು ದೊಡ್ಡ ಕಾರು!"

" ಊಟಕ್ಕೆ ಮತ್ತೆ ಹಿಂದಿರುಗಿ ಬಿಡಬಹುದು "

" ಒಂದು ಹೆಜ್ಜೆಯನ್ನೂ ಎತ್ತಿ ಇಡುವುದಿಲ್ಲ. ನಾನು ಒಳ್ಳೆ ಸೀರೆ ಕೂಡ ಉಟ್ಟುಕೊಂಡಿಲ್ಲ "

ನನ್ನ ಪಾಡಿಗೆ ನಾನು ಆಕ್ಷೇಪಿಸುತ್ತಲೇ ಇದ್ದೆ. ಹೇಗೋ ಮೋಟಾರಿನ ಸಮೀಪಕ್ಕೆ ಹೋಗಿಯೇ ಇದ್ದೆವು.

ಹನ್ನೊಂದು ಗಂಟೆಗೆ ವಿವಾಹಿತ ದಂಪತಿಗಳಾಗಿ ಅತ್ತಾನ್‌ರ ಮನೆಗೆ ಹಿಂತಿರುಗಿದೆವು.

ಆ ದಿನ ಪೂರ್ತ ನಮ್ಮ ತಂದೆ ಕೋಪವಾಗಿಯೇ ಇದ್ದರು. ನಮ್ಮ ಮುಖ ವನ್ನು ಇನ್ನು ನೋಡುವುದಿಲ್ಲವೆಂದೇ ಹೇಳಿದರು. ಮರು ದಿನ ನಮ್ಮ ತಾಯಿ "ಚೆನ್ನಾಗಿದೆ. ಇಂದು ಶ್ರೀ ಜಯಂತಿ. ಹಬ್ಬದ ದಿನ ನಮ್ಮ ಒಬ್ಬಳೇ ಹೆಣ್ಣನ್ನೂ ಅಳಿಯನನ್ನೂ ಕರೆಸಿ ಒಂದು ತುತ್ತು ಅನ್ನವನ್ನೂ ಕೂಡಾ ಬಡಿಸ ದಿದ್ದರೆ ದೇವರು ಏನಾದರೂ ಶಾಪ ಕೊಡುತ್ತಾನೆ'' ಎಂದು ಹೇಳಿದ ನಂತರವೇ ನಮ್ಮ ತಂದೆ ನಮ್ಮನ್ನು ಮನ್ನಿಸಿದರು.

"ಹೇಗಿದ್ದರೂ ಶಾಸ್ತ್ರಿಗಳು ಹೇಳಿದ್ದ ಜೋತಿಷ್ಯ ಸುಳ್ಳಾಗಲು ಸಾಧ್ಯವೆ? ಜೋತಿಷ್ಯ ವಿಶೇಷಗಳನ್ನು ಶಾಸ್ತ್ರಿಗಳನ್ನು ಕೇಳುವ ಆವಶ್ಯಕತೆ ತಾನೆ ಏನು? ನಿಮಗೆ ತಿಳಿಯದ ವಿಷಯವೆ?" ಎಂದು ಅತ್ತಾನ್ ಹೇಳಿದ ನಂತರ ನಮ ತಂದೆಗೂ ನಮಗೂ ಪೂರ್ಣವಾಗಿ ರಾಜಿಯಾಗಿಬಿಟ್ಟಿತು. ನಮ್ಮ ತಂದೆ ಬಹಳ ಬೇಗ "ಅತ್ತಾರ್ ಭ್ರಷ್ಟ" ಎಂಬ ಮಾತನ್ನೇ ಮರೆತುಬಿಟ್ಟರು. ಶ್ರೀ ಜಯಂತಿಯ ರಾತ್ರಿ ನಾವೆಲ್ಲಾ ಒಟ್ಟಿಗೆ ಊಟಕ್ಕೆ ಕುಳಿತೆವು. ಈಗೆಲ್ಲಾ ನಮ್ಮ ತಂದೆ ಅಳಿ ಯಂದಿರು ಎಂದು ಹೇಳುವುದಿಲ್ಲ. "ಕಲೆಕ್ಟರ್ ಕರೆಯುತ್ತಾರೆ" "ಕಲೆಕ್ಟರ್ ಹೇಳಿದರು" ಎನ್ನುತ್ತಾರೆ. ಅವರ ಮಾತು ಫಲಿಸಿ ಶೀಘ್ರವಾಗಿ ಕಲೆಕ್ಟರ್ ಕೆಲಸವಾಗುವುದನ್ನು ನಿರೀಕ್ಷಿಸುತ್ತಿದ್ದೇನೆ."

* * * *

''ಹೀಗೆ ವಿಮಲಾ ನನಗೆ ಹೇಳಿದಾಳೆ. ಈಗಲಾದರೂ ರಾಮಲಿಂಗ ಶಾಸ್ತ್ರಿ ಗಳ ಜೋತಿಷ್ಯವನ್ನು ನಂಬುತೀರಾ ಇಲ್ಲವೆ?" ಎಂದು ಕಮಲಾ ಕೇಳಿ ಮುಗಿಸಿದಳು.

"ಕತೆ ಏನೋ ಸರಿಯಾಗಿ ಮುಗಿಯಿತು. ಆದರೆ ಹೆಣ್ಣನ್ನು ಬಲಾ ತ್ಕಾರವಾಗಿ ಹಾರಿಸಿಕೊಂಡು ಹೋಗಿ ವಿವಾಹವಾಗುತ್ತಾನೆಂದು ಜೋಯಿಸರು ಹೇಳಿರಲಿಲ್ಲವೆ?" ನೀನು ಹೇಳುವುದರಲ್ಲಿ ಹಾಗೆ ಬಲಾತ್ಕಾರವಾಗಿ ಹಾರಿಸಿ ಕೊಂಡು ಹೋದುದು ಕಾಣುವುದಿಲ್ಲವಲ್ಲ? ಎಂದಳು ಸರಳಾ.

"ಕಾಣುವುದಿಲ್ಲವೆ ನಿನಗೆ? ಎಂದು ಕಮಲಾ ಕೋಪದಿಂದ ಹೇಳಿದಳು. "ನನ್ನನ್ನು ಅತ್ತಾನ್ ಕಟ್ಟಿ ಎತ್ತಿಕೊಂಡು ಮಹಡಿಯ ಮೆಟ್ಟಿಲುಗಳನ್ನಿಳಿದು

ಮೋಟಾರಿನಲ್ಲಿ ಹಾಕಿದುದನ್ನು ನೀನು ನೋಡಿದ್ದರೆ ಹೀಗೆ ಹೇಳುತ್ತಿರಲಿಲ್ಲ" ಎಂದಳು.

"ಓಹೊ ನಿನ್ನನ್ನೆ ? ನಿನ್ನ ಅತ್ತಾನ್ ಕಟ್ಟಿ ಎತ್ತಿಕೊಂಡು ಹೋದುದು ? ಈಗ ಚೆನ್ನಾಗಿ ತಿಳಿಯಿತು. ನಿನ್ನ ಸ್ನೇಹಿತೆಯ ಕತೆಯನ್ನು ಒಂದು ಅಕ್ಷರವೂ ಕೂಡ ತಪ್ಪದಂತೆ ಜ್ಞಾಪಕವಾಗಿ ಹೇಳುವ, ನಿನ್ನ ಶಕ್ತಿಯೂ ತಿಳಿಯಿತು. ವಿಮಲಾವನ್ನು ಪ್ರತ್ಯಕ್ಷವಾಗಿ ನೋಡಬೇಕೆಂದು ನನ್ನ ಆಸೆ ಎಂದು ಹೇಳಲಿಲ್ಲವೆ ? ಆ ವ್ಯರ್ಥವಾದ ಮಾತನ್ನು ಇನ್ನೂ ಬಿಟ್ಟೆ" ಎಂದಳು ದೇವಕಿ. ಅವಳೂ ಸರಳಳೂ ನಕ್ಕರು. ಕಮಲಾ ಲಜ್ಜೆಯಿಂದ ತಲೆ ತಗ್ಗಿಸಿಕೊಂಡು ಸ್ವಲ್ಪ ಹೊತ್ತು ಮೌನವಾಗಿದ್ದಳು.

"ನಿನ್ನ ಜೋಯಿಸರನ್ನು ಕುರಿತು ನನಗೆ ಸ್ವಲ್ಪ ಸಂದೇಹವುಂಟಾಗಿದೆ" ಎಂದು ದೇವಕಿ ಮತ್ತೆ ಪ್ರಾರಂಭಿಸಿದಳು.

"ಏನು ಸಂದೇಹ ?"

"ನಿನ್ನ ಅತ್ತಾನ್‌ರಿಗೆ ಅವರು ಮೊದಲಿನಿಂದ ಗೊತ್ತು ಅಲ್ಲವೆ ?"

"ಹಾಗೇ ಇರಬೇಕು. ಅವರ ಮಗನಿಗೆ ಸ್ವಲ್ಪ ದಿನಗಳ ಕೆಳಗೆ ಅತ್ತಾನ್ ಶಿಪಾರಸು ಹೇಳಿ ಒಂದು ಗುಮಾಸ್ತೆ ಕೆಲಸವನ್ನು ಕೊಡಿಸಿದರು.

"ಹೋಗಲಿ. ಪ್ರಪಂಚದಲ್ಲಿ ಕೃತಜ್ಞತೆ ಎಂಬುದು ಇನ್ನೂ ಇದೆ.''

"ಹಾಗಂದರೇನು ?" ಎಂದು ಕಮಲಾ ಗೊಣಗುಟ್ಟಿದಳು.

"ಹಾಗೆಂದರೆ ಆ ಮಹಡಿ ಮೆಟ್ಟಲು ದೃಶ್ಯವನ್ನು ನೋಡಲು ಲಭ್ಯ ವಾಗದೇ ಹೋಯಿತಲ್ಲಾ ಎಂದು ವಿಷಾದಪಡುತ್ತೇನೆ" ಎಂದಳು ದೇವಕಿ.

"ಅವಳ ಮಾತಿರಲಿ. ನಾನು ಸ್ವಲ್ಪ ಜೋತಿಷ್ಯ ಹೇಳುತ್ತೇನೆ ಕೇಳು" ಎಂದಳು ಸರಳಾ.

"ಏನು ಜೋತಿಷ್ಯ ?"

"ಶಾಸ್ತ್ರಿಗಳೂ ಅವರ ದೇವಿಯರೂ, ಮೊದಲು ಉಡುತ್ತಿದ್ದ ಹರಕಲು ಪಂಚೆಯನ್ನೂ ನೂಲು ಕಂಬಿ ಸೀರೆಯನ್ನೂ ಬಿಟ್ಟು, ರೇಷ್ಮೆ ಅಂಚಿನ ಪಂಚೆ ಯನ್ನೂ ಬೆಂಗಳೂರು ರೇಷ್ಮೆ ಸೀರೆಯನ್ನೂ ಕೊಳ್ಳುವವರಾಗಿದ್ದಾರೆ ಅಲ್ಲವೆ ?"

"ಆಗಲೇ ಕೊಂಡುಕೊಂಡು ಆಯಿತಲ್ಲ"

"ಹಾಗೋ! ಹಾಗಾದರೆ ಆಕೆಗೆ ಹೊಸದಾಗಿ ಒಡವೆಗಳನ್ನೂ ಮಾಡಿಸಿ ಕೊಳ್ಳುವ ಆಸೆ ಇರಬಹುದೆ?"

"ಸವರ್ಣ ಬೆಲೆ ಹೇಗಿದೆ ವಿಚಾರಿಸಿ ಬರೆಯಿರಿ ಎಂದು ಆಕೆ ನನಗೆ ಬರೆದಿದ್ದಾಳೆ"

ಇವೆಲ್ಲ ಅವರ ಮಗ ಸಂಪಾದಿಸುತ್ತಿರುವ ೩೦ ರೂಪಾಯಿ ಗುಮಾಸ್ತೆ ಕೆಲಸದಿಂದ ಆಗುತ್ತಿದೆಯಲ್ಲವೆ?-ಈಶ್ವರನ ಜಡೆಯಿಂದ ಗಂಗಾ ಪ್ರವಾಹದಂತೆ ಅಲ್ಲಿ ಹಣ ಸುರಿಯುತ್ತಿರಬಹುದು"

ಸರಳಳೂ ದೇವಕಿಯೂ ನಕ್ಕರು. ಕಮಲಾ ಸಹ ನಗುವಿನಲ್ಲಿ ಸೇರದಿರಲು ಸಾಧ್ಯವಾಗಲಿಲ್ಲ.

ಅನಂತರ "ಅದೆಲ್ಲಾ ಏನೂ ಇಲ್ಲ. ನಮ್ಮ ಜೋಯಿಸರು ಏನೂ ತಪ್ಪಿಲ್ಲ" ಎಂದಳು ಕಮಲಾ.

"ತಪ್ಪು ಎಂದು ಹೇಳಲಿಲ್ಲವಲ್ಲ. ನಾನೂ ಸಹ ಶಾಸ್ತ್ರಿಗಳನ್ನ ಕರೆಸಿ ಜೋತಿಸ್ಯ ಕೇಳಬೇಕೆಂದು ನಿಶ್ಚಯಿಸಿದ್ದೇನೆ" ಎಂದಳು ಸರಳಾ.

"ಎಲ್ಲಾ ಬಿಟ್ಟು ಶಾಸ್ತ್ರಿಗಳು ಯಾಕೆ? ಸುಂದರರಾಗಿ ಒಳ್ಳೆಯವರಾಗಿ ಸಬ್ ಕಲೆಕ್ಟರ್ ಆಗಿರುವ ಒಬ್ಬ ಅತ್ತಾನ್ ಇದ್ದರೇ ಸಾಕಲ್ಲ! ಎಂದಳು ದೇವಕಿ.

---

# ಕಮಿಷನ್ನರ ಕೊರಗು

ದಿವಾನ್ ಬಹದ್ದೂರ್ ಜಿ. ಹಂಸರಾಜ ಅಯ್ಯಂಗಾರ್, ಸಿ. ಐ. ಇ. ಪೆನ್ಷನ್ ಅಸಿಸ್ಟೆಂಟ್ ಕಮಿಷನರ್ ಆಫ್ ಪೋಲೀಸ್) ಅವರು ಸ್ವರ್ಗಸ್ಥ ರಾದುದನ್ನು ಇಂದಿನ ವರ್ತಮಾನ ಪತ್ರಿಕೆಯಲ್ಲಿ ಓದಿ ದುಃಖಿಸುತ್ತಿದ್ದೇನೆ. ಅವರ ದೇವಿ (ಪತ್ನಿ) ಉತ್ತಮಳಾದ ಸ್ತ್ರೀ. ಕೆಲವು ದಿನಗಳ ಹಿಂದೆ ಆಕೆ ಸಹ ಸುಮಂಗಲಿಯಾಗಿಯೇ ತೀರಿಕೊಂಡಳು. ಅಯ್ಯಂಗಾರ್ಯರನ್ನು ಸರ್ಕಾರವೂ ಜನಗಳೂ ಬಹಳ ಗೌರವಿಸುತ್ತಿದ್ದರು. ಅವರ ಒಬ್ಬಳೇ ಮಗಳಾದ ಚಂದ್ರಮತಿ ನನ್ನ ಸ್ನೇಹಿತ ಬಲರಾಮನಿಗೆ ವಿವಾಹವಾಗಿ ಯಾವ ಕುಂದೂ ಇಲ್ಲದೆ ಸುಖ ಬಾಳ್ವೆಯನ್ನು ನಡೆಸುತ್ತಿದ್ದಾಳೆ. ಆದರೆ ಅಯ್ಯಂಗಾರ್ಯರಿಗೆ ಮನಸ್ಸಿನಲ್ಲಿ

ಒಂದು ಕೊರಗು ಇದ್ದೇ ಇದ್ದಿತು. ಅವರು ಅದನ್ನು ಒಂದು ಕಳಂಕವಾಗಿ ಭಾವಿಸಿ ಪದೇ ಪದೇ ಅದರ ವಿಷಯ ಪ್ರಸ್ತಾಪಿಸುತ್ತಿದ್ದರೆಂದೂ ವದಂತಿ. "ಊರವರಿಗೆಲ್ಲಾ ಸಹಾಯ ಮಾಡಿ ಎಷ್ಟೋ ಕಳವುಗಳನ್ನು ಪತ್ತೆ ಮಾಡಿ ಕಳ್ಳರನ್ನು ಹಿಡಿದೆ. ಆದರೆ ನನ್ನ ಮನೆಯಲ್ಲಿಯೇ ನಡೆದ ಒಂದು ಸಣ್ಣ ಕಳವನ್ನು ಮಾತ್ರ ಕಂಡು ಹಿಡಿಯಲು ನನ್ನಿಂದ ಸಾಧ್ಯವಾಗಲಿಲ್ಲವಲ್ಲ" ಎಂದು ಅವರು ದುಃಖಪಡುತ್ತಿದ್ದರಂತೆ. ಆ ಕಳವಿನ ನಿಜಸ್ಥಿತಿಯನ್ನು ಅರಿತ ನಾನು, ಇದುವರೆಗೆ ಅದನ್ನು ಹೊರಗೆಡವದೆ ಇದ್ದು ಈಗ ಹೊರಗೆಡಹುತ್ತೇನೆ. ನನ್ನ ನಡತೆ ಸರಿಯಾದುದೇ ಎಂಬುದನ್ನು ಈ ಸಂಗತಿಯನ್ನು ವಾಚಿಸುವವರೇ ತೀರ್ಮಾನಿಸಲಿ. ಅದು ನನಗೆ ಸಮ್ಮತ.

* * * *

ಒಂದು ದಿನ ನನ್ನ ಮಿತ್ರ ಬಲರಾಮನು ನನ್ನಲ್ಲಿ ಬಂದು ಹೀಗೆ ಹೇಳಿದನು, "ಇಂದು ನನ್ನ ಚಂದ್ರಮತಿಯ ಬಂಗಲೆಯಲ್ಲಿ ನಮಗೆಲ್ಲಾ ಸ್ವಾಗತ, ಭೋಜನ" ಎಂದು.

ನಾನು "ಚಂದ್ರಮತಿ ಯಾರು"? ಎಂದು ಕೇಳಿದೆ.

"ಹರಟಬೇಡ. ಹತ್ತು ದಿನದಿಂದ ನಾನು ಹೇಳುತ್ತಿಲ್ಲವೆ? ಚಲನ ಚಿತ್ರ ಮಂದಿರದಲ್ಲಿ ಅವಳನ್ನೂ, ಅವಳ ತಾಯನ್ನೂ ಸಂಧಿಸಿದೆ. ಅದೇ ಮೊದಲಾಗಿ ಈಚೆಗೆ—"

"ಅವಳೇಯೆ, "ಒಬ್ಬ ಹೆಣ್ಣು ಇದ್ದಾಳೆ. ಅವಳನ್ನು ನೋಡಿದ ಕೂಡಲೇ ರಂಭೆಯೂ ಮೇನಕೆಯೂ ನಾಚಿಕೆಯಿಂದ ಮುಖ ಮುಚ್ಚಿಕೊಳ್ಳುವರು" ಎಂದು ಹೇಳಿದ್ದೆಯೇ ಹೊರತು, ಅವಳ ಹೆಸರು ಚಂದ್ರಮತಿ ಎಂದಾಗಲಿ, ನೀನು ಹರಿಶ್ಚಂದ್ರನೆಂದಾಗಲಿ ನನಗೆ ಇದುವರೆಗೆ ತಿಳಿಸಲಿಲ್ಲ—"

"ಅವರಿಬ್ಬರೂ ಸಮ್ಮತಿಸಿದ್ದಾರೆ."

"ಯಾತಕ್ಕೆ"

"ನನ್ನನ್ನು ಮದುವೆ ಮಾಡಿಕೊಳ್ಳಲು"

"ಇಬ್ಬರೂವೆ? ಎಂದಿಗೂ ಆಗದು. ನಾನು ಇದನ್ನು ನಂಬುವುದೇ ಇ—"

"ಹರಟಬೇಡ: ನನಗೂ ಚಂದ್ರಮತಿಗೂ ವಿವಾಹ. ಇದಕ್ಕೆ ಅವಳ ತಾಯಿಯೂ ಒಪ್ಪಿದ್ದಾರೆ. ಆದರೆ ಆಕೆಯ ತಂದೆ ಮಾತ್ರ....

"ತಂದೆಯನ್ನು ಕಟ್ಟಿಕೊಂಡು ಚಿಂತೆ ಯಾಕೆ? ಇದನ್ನೆಲ್ಲಾ ತಾಯಿ ತೀರ್ಮಾನಿಸಬೇಕು"

"ಅಯ್ಯೋ, ಇವರ ವಿಷಯದಲ್ಲಿ ಹಾಗೆ ಹೇಳಬೇಡ. ಇವರು ಯಾರು ಗೊತ್ತೆ? ಹಂಸರಾಜಯ್ಯಂಗಾರ್, ಅಸಿಸ್ಟೆಂಟ್ ಕಮಿಷನರ್ ಆಫ್ ಪೋಲೀಸ್."

"ಇರಲಿ. ಯಾವ ಹುದ್ದೆಯಲ್ಲಿದ್ದರೆ ತಾನೇ ಏನು? ಮನೆಗೆ ಬಂದ ಮೇಲೆ ಬುಟ್ಟಿಯ ಹಾವಾಗಿ ಅಡಗಿರಬೇಕಾದುದು ತಾನೆ?"

"ಅವರೆ? ನಿನಗೆ ಏನೂ ತಿಳಿಯದು. ಅವರ ಮಾತು ಸಿಡಿಲಿನಂತೆ ಜೋರಂತೆ. ಅವರ ಆಫೀಸಿನಲ್ಲಿ ವದಂತಿ ಏನೆಂಬುದು ಗೊತ್ತೆ? ಅವರ ಡ್ರೈವರು ಮೋಟಾರು ಕಾರಿಗೆ ಕೊಂಬು (ಹಾರ್ನ್) ಅನವಶ್ಯಕವೆಂದು ತೆಗೆದು ಇಟ್ಟಿದ್ದಾನಂತೆ. ಗಾಡಿಯಲ್ಲಿ ಹೋಗುವಾಗಲೆಲ್ಲಾ ಅವರು ಮಾತನಾಡುತ್ತಲೇ ಇರುವುದರಿಂದ, ಆ ಧ್ವನಿ ಕೇಳಿದ ದಾರಿಗರೆಲ್ಲಾ ರಸ್ತೆಯನ್ನು ಬಿಟ್ಟು ಮಗ್ಗಲಾಗುವರಂತೆ."

"ನೀನೂ ಪ್ರತಿಯಾಗಿ ಸಿಡಿಲಿಗೆ ಸಿಡಿಲಾಗಿ ಜವಾಬ್ ಕೊಡುವುದು ತಾನೆ?"

"ಅವರಿಗೆ ದಿವಾನ್ ಬಹದ್ದೂರ್ ಪಟ್ಟವು ದೊರೆತುದು ಹೇಗೆ ಗೊತ್ತೆ? ಒಂದು ದಿನ ಬಂದೂಕದ ಲೈಸೆನ್ಸಿಗಾಗಿ ಅವರ ಬಳಿಗೆ ಒಬ್ಬಾತ ಬಂದನಂತೆ. ಬಂದವನೇ ಹತ್ತು ರೂಪಾಯಿನ ಒಂದು ನೋಟನ್ನು ಮುಂದಕ್ಕೆ ನೀಡಿದನಂತೆ. ಆಗ ಇವರು ಗರ್ಜಿಸಿದುದನ್ನು ಕೇಳಿ ಅವನು ನಡುಗಿ "ನಾನು ಕೊಡುತ್ತಿರುವುದು ಫೋರ್ಜರಿ ನೋಟು" ಎಂದು ಹೇಳಿದುದು ಮಾತ್ರವಲ್ಲದೆ, ಅವರನ್ನು ಕರೆದುಕೊಂಡು ಹೋಗಿ ಹತ್ತು ಲಕ್ಷ ರೂಪಾಯಿ ಫೋರ್ಜರಿ ನೋಟುಗಳನ್ನಿಟ್ಟಿದ್ದ ಗುಪ್ತ ಸ್ಥಾನವನ್ನು ತೋರಿಸಿಬಿಟ್ಟನಂತೆ."

"ಭೇಷ್, ನಿನ್ನ ಹತ್ತಿರ ಫೋರ್ಜರಿ ನೋಟುಗಳು ಇಲ್ಲವಲ್ಲ. ಈಗ ಹೋಗುತ್ತಿರುವುದೂ ಸಹ ಅವರ ಬಂಗಲಿಗೆ."

"ಅವರು ಆಫೀಸು ಎಂದೂ, ಮನೆ ಎಂದೂ ವ್ಯತ್ಯಾಸವನ್ನಿಟ್ಟಿರಲಿಲ್ಲವಂತೆ. ಮನೆಯಲ್ಲಿಯೂ ನಾಲ್ಕು ಗಂಟೆಗಳಿಗೆ ಒಂದು ಸಲದಂತೆ ಸರ್ಕಾರದ ಜಿ. ಒ. (ಗವರ್ನ್ಮೆಂಟ್ ಆರ್ಡರ್) ರೀತಿಯಲ್ಲಿ ಅಪ್ಪಣೆಗಳನ್ನು ಬರೆದು

ಕಾನ್‌ಸ್ಟೆಬಲ್ ಮೂಲಕ ಹೆಂಡತಿಗೋ, ಅಡಿಗೆಯವನಿಗೋ, ತೋಟದ ಮಾಲಿಗೋ ನಕಲುಗಳನ್ನು ಕಳುಹಿಸುತ್ತಲೇ ಇರುತ್ತಾರಂತೆ.''

'' ಅದಕ್ಕೆ ನಾನೇನು ಮಾಡಲಿ. ಮಗಳೂ ತಂದೆಯನ್ನೇ ಹೊತ್ತು ಕೊಳ್ಳಲಿ, ಎಂದು ಆಶೀರ್ವದಿಸುತ್ತೇನೆ, ಗಣಪತಿಗೆ ತೆಂಗಿನಕಾಯಿ ಒಡೆ ಯುತ್ತೇನೆ.''

'' ನೀನು ಹಾಗೇನೂ ಮಾಡಬೇಡ. ಈ ಸಾಯಂಕಾಲ ನನ್ನೊಂದಿಗೆ ಬಾ''

'' ಎಲ್ಲಿಗೆ ?''

'' ಅವರ ಬಂಗಲೆಗೆ ''

'' ಏತಕ್ಕಾಗಿ ''

'' ಅವರು ನನ್ನನ್ನು ಆಹ್ವಾನಿಸಿದ್ದಾರೆ. ಅವರ ಹೆಂಡತಿಯವರ ಒತ್ತಾಯದಿಂದ ಅವರು ಕರೆದಿದ್ದಾರೆ. ಈ ಸಾಯಂಕಾಲ ಅವರ ಕೂಡ ಟೆನ್ನಿಸ್ ಆಡಿಬಿಟ್ಟು ರಾತ್ರಿ ಭೋಜನ ಮಾಡಿ ನಾಳೆ ಬೆಳಿಗ್ಗೆ ಅವರು ಆಫೀಸಿಗೆ ಹೋಗುವವರೆಗೆ ಅವರ ಜತೆಯಲ್ಲಿಯೇ ಇರಬೇಕೆಂದು ಕೇಳಿಕೊಂಡಿದ್ದಾರೆ.''

'' ಓಹೋ, ಸರಿಯಾಯಿತು. ಒಂದು ಹಸುವನ್ನು ಕೊಳ್ಳುವುದಕ್ಕೆ ಮುಂಚೆ, ಅದಕ್ಕೇನಾದರೂ ಕಾಲು ಕುಂಟೊ ಎಂದು ಅದನ್ನು ಓಡಿಸಿ ನೋಡುವಂತೆ; ನೀನು ಹೇಗೆ ನಡೆದುಕೊಳ್ಳುತ್ತೀ, ನಿನ್ನ ಮನಶ್ಶಕ್ತಿ ಎಷ್ಟು ಎಲ್ಲ ವನ್ನೂ ಪರೀಕ್ಷಿಸುವಂತಿದೆ ಅವರು. ಮಾಡಲಿ, ಅದಕ್ಕೆ ನಾನು ಯಾಕೆ?

'' ನನ್ನನ್ನು ಮಾತ್ರ ಆಹ್ವಾನಿಸಿದರೆ ನಿನ್ನಂತಹ ಮೂರ್ಖನಾದವ ನಾರಾದರೂ ಹೀಗೆ ಹೇಳಬಹುದೆಂದು ಅರಿತೇ ನನ್ನೊಂದಿಗೆ ಒಬ್ಬ ಗೆಳೆಯ ನನ್ನೂ ಕರೆದುಕೊಂಡು ಬರಬೇಕೆಂದು ಮರ್ಯಾದೆಗಾಗಿ ಬರೆದಿದ್ದಾರೆ. ನೀನು ನಿನ್ನ ಟೆನ್ನಿಸ್ ಬ್ಯಾಟನ್ನು ತೆಗೆದುಕೊಂಡು ಬಾ.''

'' ಈ ಮಾತಿಗೆ ಸರಿಯಾದ ಸಂದರ್ಭದಲ್ಲಿ ಸೇಡು ತೀರಿಸುತ್ತೇನೆ. ಅವರು ನಿನ್ನನ್ನು ಆಟವಾಡಿಸುವುದನ್ನು ನೋಡುವುದಕ್ಕಾಗಿಯಾದರೂ ನಾನು ಖಂಡಿತ ಬಂದೇ ಬರುತ್ತೇನೆ.''

ನನ್ನ ಸ್ನೇಹಿತ ಹಣವುಳ್ಳವನೇ. ಸುಂದರನೂ ಹೌದು. ಇರುವ ಬುದ್ಧಿಯನ್ನು ಹೊರಗೆ ತೋರಿಸಿ ಇತರರಿಗೆ ಹೊಟ್ಟೆ ಕಿಚ್ಚು ಉಂಟಾಗದಂತೆ ಮರೆಸಿಕೊಳ್ಳುವ ಸಾಮರ್ಥ್ಯವೂ ಅವನಿಗಿದೆ. ಇವನ ಇಷ್ಟವನ್ನು ವಿರೋಧಿ

ಸುವ ಬಂಧುಗಳು ಯಾರೂ ಇಲ್ಲ. ಆದುದರಿಂದ ನಾವು ಹೋಗುವ ಕಾರ್ಯ ಜಯವಾಗುವುದರಲ್ಲಿ ಸಂದೇಹವಿರಲಿಲ್ಲ. ಆದರೂ ಎಚ್ಚರಿಕೆಯಿಂದಲೇ ಇದ್ದೆವು. ನಾವು ಅಲ್ಲಿಗೆ ನಾಲ್ಕು ಗಂಟೆಗೆ ಹೋಗಬೇಕಾಗಿದ್ದವರು ಮುಕ್ಕಾಲು ಗಂಟೆ ಮುಂಚೆಯೇ ಬಂಗಲೆಗೆ ಕೂಗಿನ ದೂರದಲ್ಲಿ ಹೋಗಿ ನಿಂತೆವು. ಅಲ್ಲಿ ಬಂಡಿಯನ್ನು ನಿಲ್ಲಿಸಿಕೊಂಡಿದ್ದು ಎರಡು ನಿಮಿಷ ಇರುವಾಗಲೇ ಹೊರಟು, ನಾಲ್ಕು ಗಂಟೆ ಠಣಾರ್ ಎನ್ನುತ್ತಿರುವಾಗಲೇ ಬಂಗಲೆಯ ಬಳಿಗೆ ಹೋದೆವು.

ಅದನ್ನು ಕಂಡು ಹಂಸರಾಜಯ್ಯಂಗಾರ್ಯರಿಗೆ ಬಹು ಸಂತೋಷ "ಬನ್ನಿ ಬನ್ನಿ" ಎಂದು ದೊಡ್ಡ ಧ್ವನಿಯ ಸ್ವಾಗತ ಮಾಡಿದರು. "ನಾನು ಯಾವಾಗಲೂ ಹೇಳುವುದು ಸಣ್ಣ ವಿಷಯಗಳಲ್ಲಿ ದೊಡ್ಡ ಗುಣವನ್ನು ಕಂಡು ಹಿಡಿಯಬಹುದೆಂದು. ತಿಳುವಳಿಕಸ್ತರಿಗೆ ಮೊದಲ ಲಕ್ಷಣ, ಕಾಲಕ್ಕೆ ಸರಿಯಾಗಿ ನಡೆಯುವುದು. ಅದು ಕೂಡ ಕೈಲಾಗದ ಸೋಮಾರಿಗಳು ಹೇಗೆ ರಾಜ್ಯವಾಳುತ್ತಾರಂತೆ?"

ಅವರ ದೇವಿ ಮೃದುವಾದ ಮಾತುಗಳಿಂದ ನಮ್ಮನ್ನು ಬರ ಮಾಡಿಕೊಂಡು ಉಪಚರಿಸಿದಳು. ಆಕೆಯ ಮುಖದಲ್ಲಿ ಶಾಂತ ಗುಣವು ಪ್ರಕಾಶಿಸುತ್ತಿತ್ತು. ಹಾಗಿದ್ದರೂ ಏನು ಕಾರಣದಿಂದಲೋ ನನಗೆ ಆಕೆಯನ್ನೂ ಆಕೆಯ ಗಂಡನನ್ನೂ ನೋಡಿ, ಸರ್ಕಸ್ಸಿನಲ್ಲಿ ಹುಲಿಯ ಕತ್ತಿಗೆ ಹಗ್ಗವನ್ನು ಹಾಕಿಕೊಂಡು ಆಡಿಸುತ್ತಾ ಬರುವ ಸ್ತ್ರೀಯರ ಜ್ಞಾಪಕ ಬಂದಿತು.

ಚಂದ್ರಮತಿಯೂ ಸ್ವಲ್ಪ ನಾಚಿಕೆಯಿಂದಲೇ ನಮ್ಮೊಡನೆ ಸೇರಿ ಮಾತನಾಡುವುದರಲ್ಲಿ ತೊಡಗಿದಳು. ಹಿಂದೆ ನನ್ನೊಂದಿಗೆ ಹಸೆಮಣೆಯಲ್ಲಿ ಬಲ ಭಾಗದಲ್ಲಿ ಕುಳಿತು ಅಗ್ನಿ ಸಾಕ್ಷಿಯಾಗಿ ತಾಲಿ ಕಟ್ಟಿಸಿಕೊಂಡಿರುವ, ನಾನು ಬರೆಯುವ ಪ್ರತಿ ಮಾತನ್ನೂ ಓದುವವಳಾಗಿರುವುದರಿಂದ ಚಂದ್ರಮತಿಯನ್ನು ಕುರಿತು ನಾನು ಏನೂ ಹೆಚ್ಚಾಗಿ ವರ್ಣಿಸಲಾರೆ.

ಐದು ಗಂಟೆಗೆ ಟೆನ್ನಿಸ್ ಆಡತೊಡಗಿದೆವು. ನಾವಿಬ್ಬರೂ ಒಂದು ಕಡೆ, ಹಂಸರಾಜಯ್ಯಂಗಾರರೂ ಅವರ ಇನ್ಸ್‌ಪೆಕ್ಟರುಗಳ ಪೈಕಿ ಒಬ್ಬರೂ ಎದುರು ಕಡೆ. ಅಯ್ಯಂಗಾರ್ಯರು ಎಷ್ಟೇ ಗರಡಿ ಸಾಧನೆ ಮಾಡಿದ್ದರೂ ಐವತ್ತನಾಲ್ಕು ವಯಸ್ಸಿನ ಫಲವನ್ನು ತಪ್ಪಿಸಿಕೊಳ್ಳಲು ಅವರಿಂದ ಸಾಧ್ಯವಾಗಿರಲಿಲ್ಲ. ನಮಗೆ ಸಮನಾಗಿ ಓಡಲು ಅವರಿಗೆ ಸಾಧ್ಯವಾಗಲಿಲ್ಲ. ಆ ಕೋಪದಿಂದಲೋ

ಅಥವಾ ಮತ್ತಾವ ಕಾರಣದಿಂದಲೋ ಅವರ ಮುಖವು ಹಣ್ಣಾದ ಟೊಮೆಟೋ ವಿನಂತೆ ಕೆಂಪಾಗುತ್ತ ನಡೆಯಿತು. ಆದರೂ ಬಲರಾಮನೂ ಪದ್ಧತಿಯಂತೆ ಆಡಲಿಲ್ಲ. ಸುಲಭವಾಗಿ ಹೊಡೆಯಬಹುದಾಗಿದ್ದ ಚೆಂಡುಗಳನ್ನು ಅವನು ಅನೇಕ ವೇಳೆ ಹೊಡೆಯದೆಯೇ ಬಿಟ್ಟುಬಿಟ್ಟನು. ಕೊನೆಯಲ್ಲಿ ಎರಡು ಕಡೆಯೂ ಎಣಿಕೆ ಮಾಡುವಾಗ ಸಮನಾಗಿ "ಗೇಮ್", "ವಾಂಟೇಜ್" ಆಗಿ ಇದ್ದಿತು. ಅಯ್ಯಂಗಾರ್ರ ಮುಖದ ಹತ್ತಿರಕ್ಕೆ ಆಗ ಒಂದು ದೀಪದ ಕಡ್ಡಿಯನ್ನು ಹಿಡಿದಿದ್ದರೆ ಅದು ಹತ್ತಿಕೊಂಡು ಉರಿಯುವಂತಿತ್ತು. ಜಯವು ಅವರಿಗೋ ನಮಗೊ ಎಂಬುದನ್ನು ತೀರ್ಮಾನಿಸುವ ಆಟವನ್ನು ಅವರು "ಸರ್ವ್" ಮಾಡಿದರು. ಪಾಪ ಅವರ ಸುಸ್ತು ಆ ಚೆಂಡು ಬಂದ ನಿಧಾನದಲ್ಲಿಯೇ ಗೊತ್ತಾಗುತ್ತಿದ್ದಿತು. ಆ ಚೆಂಡಿಗೆ ನಾನು ಒಂದು ಬಡಿತ ಬಿಗಿದೆ–ನಾನೇ ಹೇಳಿಕೊಳ್ಳಬಾರದು.—ದ್ರೋಣಾಚಾರ್ಯರು ಬಿಟ್ಟ ಅಂಬು ಸಹ ಆ ವೇಗದಲ್ಲಿ ಹೋಗಿರಲಾರದು. ನಮ್ಮ ಎದುರಾಳಿಗಳಿಬ್ಬರೂ ಕೈ ಬೀಸಿದರೂ ಅವರಿಗೆ ಸಿಕ್ಕದೆ ಅದು ಭರ್ರೆಂದು ಅವರನ್ನು ದಾಟಿಕೊಂಡು ಹೋಗಿ ಕೋರ್ಟಿನ ಮೂಲೆಯ ಸಮೀಪದಲ್ಲಿ ಒಳಗಡೆಯೇ ಬಿದ್ದು ಹಾರಿ ಹೋಯಿತು. ಸೆಟ್ ಎಂದು ನಾನು ಕೂಗಿದೆ. ಅಷ್ಟರೊಳಗೆ ಬಲರಾಮನು "ಒಳ್ಳೆ ಗಟ್ಟಿಗನಯ್ಯ. ಈ ಕಡೆ ಆಟವನ್ನು ಔಟ್ ಆಡಿ ಅನ್ಯಾಯವಾಗಿ ಅವರಿಗೆ ಸೆಟ್ ಕೊಟ್ಟುಬಿಟ್ಟೆಯಲ್ಲ" ಎಂದು ಕೂಗಿದನು.

"ಔಟೇ" ಎಂದು ಅಯ್ಯಂಗಾರ್ರೂ ನಾನೂ ಒಂದೇ ಸಲ ಚೀರಿದೆವು.

"ಅನುಮಾನವೇ ಇಲ್ಲ. ಸ್ಪಷ್ಟವಾಗಿ ಒಂದೂವರೆ ಬೆಟ್ಟು ಅಗಲ ಔಟ್. ನಾನು ನೋಡಿಕೊಂಡೇ ಇದ್ದೆ. ಚೆಂಡು ಬಿದ್ದುದು ಇಲ್ಲಿ" ಎಂದು ಹೇಳಿಕೊಂಡು ಬಲರಾಮನು ಒಂದು ಗೆರೆ ಎಳೆದು ತೋರಿಸಿದನು. ಇಷ್ಟಾದ ಮೇಲೆ ಇನ್ನು ಸಂದೇಹವೇನು ಬಂತು! ಅಯ್ಯಂಗಾರ್ಯರ ಮುಖ ಅರಳಿತು."

"ಆಟ ಬಹಳ ಸ್ವಾರಸ್ಯವಾಗಿತ್ತು. ದಾಹಶಾಂತಿಗಾಗಿ ನಿಮ್ಮ ಕೊಠಡಿಗೆ ಲೆಮನೇಡ್ ಕಳುಹಿಸುತ್ತೇನೆ" ಎಂದು ಹೇಳಿಕೊಂಡು ಅವರು ನಗು ಮುಖದೊಂದಿಗೆ ಮನೆಯೊಳಕ್ಕೆ ಹೋದರು.

ಬಲರಾಮನು ನನ್ನ ಮುಖವನ್ನು ನೋಡದವನಂತೆ ನಮ್ಮ ಕೊಠಡಿಗೆ ಬಂದನು. ನಾನು ಅವನನ್ನು ಬಿಡಲಿಲ್ಲ. ಅವನ ಅಂಗಿ ಹಿಡಿದು ಎಳೆದು

"ಇದು ಬಹು ಸಾಮರ್ಥ್ಯವೋ. ನಾನು ಜಯಿಸಿದ ಆಟವನ್ನು ಕಿತ್ತು ನಿಮ್ಮ ಮಾವನವರಿಗೆ ದಾನ ಮಾಡಿಬಿಟ್ಟೆಯಲ್ಲ" ಎಂದು ಅವನ ಕಿವಿಯಲ್ಲಿ ಹೇಳಿದೆ.

"ಅವನು "ಉಷ್ ಸುಮ್ಮನಿರು" ಎಂದನು. ಅಷ್ಟರಲ್ಲಿ ಒಳಗೆ ಮಾತನಾಡುತ್ತಿದ್ದ ಅಯ್ಯಂಗಾರ್ಯರ ಧ್ವನಿ ಲೌಡ್‌ಸ್ಪೀಕರ್‌ನಂತೆ ಕೇಳಿಸಿತು. "ಪರವಾಯಿಲ್ಲ. ಪದೇ ಪದೇ ನನ್ನೊಂದಿಗೆ ಆಡುತ್ತಿದ್ದರೆ ಬೇಗ ಟೆನ್ನಿಸ್ ಛಾಂಪಿಯನ್ ಆಗಿಬಿಡುತ್ತಾರೆ. ಈಗಲೇ ಸುಮಾರಾಗಿ ಆಡುತ್ತಾರೆ" ಎಂದು. ಅಷ್ಟರಲ್ಲಿಯೇ ಯಾರೋ ಏನೋ ಹೇಳಿರಬೇಕು. ಅಯ್ಯಂಗಾರ್ಯರ ಘರ್ಜನೆ ಮತ್ತೆ ಕೇಳಿಸಿತು. "ಏನು? ಅವರ ಸ್ನೇಹಿತರು ಈಗಲೇ ಛಾಂಪಿಯನ್‌ರಾಗಿ ಆಡುತ್ತಾರೆಯೆ? ಅವರ ಆಟ ಯಾರಿಗೆ ಬೇಕಾಗಿದೆ? ವ್ಯಾಸಂಗ ಮಾಡ ಬೇಕಾದ ಕಾಲದಲ್ಲಿ ವ್ಯಾಸಂಗವನ್ನು ಚೆನ್ನಾಗಿ ಗಮನಿಸಿದ್ದರೆ ಟೆನ್ನಿಸನ್ನು ಇಷ್ಟು ಚೆನ್ನಾಗಿ ಆಡಲು ಸಾಧ್ಯವಾಗುತ್ತಿತ್ತೆ? ಹೇಳು?"—ಅಷ್ಟರಲ್ಲಿ ಅವರ ಬಾಯನ್ನು ಯಾರೋ ಮುಚ್ಚಿದುದರಿಂದ ಮಾತು ನಿಂತು ಹೋಯಿತು.

ನಾವು ಲೆಮನೇಡ್ ಕುಡಿಯುತ್ತಾ ಇರುವಾಗ ಒಬ್ಬ ಕಾನಸ್ಟೇಬಲ್ ಬಂದು ಸಲಾಮು ಮಾಡಿ ಒಂದು ಚೀಟಿಯನ್ನು ನಮ್ಮ ಕೈಗೆ ನೀಡಿದನು. ಅದರ ತಲೆಯ ಮೇಲೆ ಹೆಚ್. ಓ. ೪೩೬ ಎ. ಎಂದು ಬರೆದಿತ್ತು. ನಾನು ಹೆಚ್. ಓ. ಎಂದರೆ ಏನೆಂದು ಕೇಳಿದೆ. ಕಾನಸ್ಟೇಬಲ್, ಹೋಂ ಆರ್ಡರ್ ಎಂದನು. ಸರ್ಕಾರದಲ್ಲಿ ಹೊರಡುವುದು ಜಿ. ಓ; (ಗವರ್ನಮೆಂಟ್ ಆರ್ಡರ್) ಮನೆಯಿಂದ ಹೊರಡುವುದು ಹೆಚ್. ಓ; ಸರಿ, ಅವಕ್ಕಿಂತ ಇದು ಸ್ವಲ್ಪ ಹೆಚ್ಚಾದುದೇ ಎಂದು ಕೊಂಡೆ. ಆ ಕಾಗದವನ್ನು ಓದಿದೆ.

ಹೆಚ್. ಓ. ೪೩೬-ಎ.

"ಆರು ಗಂಟೆಯಿಂದ ಏಳು ಗಂಟೆಯವರೆಗೆ ಅತಿಥಿಗಳ ಸ್ನಾನ.

೭ರಿಂದ ೭-೫೫ರವರೆಗೆ ಅತಿಥಿಗಳ ಕೊಠಡಿಯಲ್ಲಿ ಗೃಹಿಣಿಯೂ, ಚಂದ್ರ ಮತಿಯೂ ಅತಿಥಿಗಳೊಡನೆ ಮಾತುಕಥೆಯಾಡುವರು. ಯಜಮಾನರು ಆಫೀಸ್ ಕೆಲಸಗಳನ್ನು ಗಮನಿಸುವರು.

೭-೫೫ಕ್ಕೆ ಗಂಟೆ ಶಬ್ದವಾಗುವುದು.

೮ ಗಂಟೆಗೆ ಭೋಜನ." ಜಿ. ಹೆಂ. ಐ.

ಎಂದು ಬರೆದಿತ್ತು. ಕಾನಸ್ಟೇಬಲ್‌ಗೆ ಕೇಳಿಸುವಂತೆ ನಾನು ಏನನ್ನಾದರೂ

ಹೇಳಿಬಿಡುತ್ತೀನೋ ಎಂದು ಬಲರಾಮನು ನನ್ನ ಕಾಲನ್ನು ಬಲವಾಗಿ ಅಮುಕಿದನು. ಎಲ್ಲಾ ಸ್ನೇಹವೆಂಬ ದೇವತೆಗೆ ಕೊಡುವ ಬಲಿ ಎಂದುಕೊಂಡು ನಾನು ನೋವನ್ನೂ ಆಶ್ಚರ್ಯವನ್ನೂ ತಡೆದುಕೊಂಡು ಮೌನವಾಂತೆ.

ನಾವು ಹೆಚ್ಚು ಬಟ್ಟೆಗಳನ್ನು ತೆಗೆದುಕೊಂಡು ಹೋಗಿದ್ದುದರಿಂದ ಹೆಚ್. ಒ. ಛತ್ರ ಎ. ನಲ್ಲಿ ಕಂಡಂತೆ ಸ್ನಾನ ಮಾಡಿ, ಟೆನ್ನಿಸ್ ಆಡಿದ ಆಯಾಸವನ್ನು ಕಳೆದುಕೊಂಡು ಉಲ್ಲಾಸವಾಗಿದ್ದೆವು. ಆ ಭವನದಲ್ಲಿ ಎಲ್ಲಾ ವಿಷಯಗಳೂ ಕೀಲು ಕೊಟ್ಟ ಗಡಿಯಾರದಂತೆ ನಡೆಯುವುದಾಗಿದ್ದವು. ಏಳು ಗಂಟೆ ಹೊಡೆಯಲು ಪ್ರಾರಂಭಿಸಿದ ಕೂಡಲೇ ಚಂದ್ರಮತಿಯೂ ಆಕೆಯ ತಾಯಿಯೂ ಬಂದರು. ನಾವು ನಾಲ್ವರೂ, ಕ್ರಿಕೆಟ್ ಮ್ಯಾಚ್, ಈಚಿನ ಚಲನ ಚಿತ್ರ ಇವುಗಳನ್ನು ಕುರಿತು ಸಂಭಾಷಿಸಿದೆವು. ಅನಂತರ "ಮಾಡಬೇಕಾದ ಕೆಲಸವಿದೆ" ಎಂದು ಚಂದ್ರಮತಿಯ ತಾಯಿ ಹೊರಟು ಹೋದರು.

ಅವರಿಬ್ಬರ ಸರಸ ಸಲ್ಲಾಪಕ್ಕೆ ಕಂಟಕನಾಗಿ ಆ ಕೊಠಡಿಯಲ್ಲಿರುವುದು ನನಗೆ ಸಂಕಟವಾಗಿತ್ತು. ಆದರೆ ಎಲ್ಲಿಗೆ ಹೋಗುವುದೆಂಬುದು ನನಗೆ ತಿಳಿಯಲಿಲ್ಲ. ನಾನು ಕೊಠಡಿಯಿಂದ ಏನಾದರೂ ಹೊರಗೆ ತಿರುಗಾಡಲು ಹೊರಟರೆ ಅಯ್ಯಂಗಾರರು ಕಣ್ಣಿಗೆ ಬಿದ್ದು "ಹೆಚ್.ಒ. ಛತ್ರ ಎ. ಯಲ್ಲಿ ಬರೆದಿರುವುದಕ್ಕೆ ವಿರೋಧವಾಗಿ ಇಲ್ಲಿ ಯಾಕೆ ಅಲೆದಾಡುತ್ತಿದ್ದಿ?" ಎಂದರೆ ಏನು ಬದಲು ಹೇಳುವುದು? ಅಷ್ಟರಲ್ಲಿ ಅವರ ಮಗಳು ನನ್ನ ಸಂಕಟವನ್ನು ಹೋಗಲಾಡಿಸುವ ಉದ್ದೇಶದಿಂದ "ನಮ್ಮ ತಂದೆ ಹೇಳಿದರು. ನೀವು ಟೆನ್ನಿಸನ್ನು ಛಾಂಪಿಯನರಂತೆ ಆಡುತ್ತೀರಂತೆ" ಎಂದಳು.

"ಆ–ಹೂಂ ಅವರು ಆ ರೀತಿ ಹೇಳಿದುದು ನನ್ನ ಕಿವಿಗೂ ಸ್ವಲ್ಪ ಬಿತ್ತು." ಎಂದೆ. "ನಮ್ಮ ತಂದೆ ಹೇಳಿದರು. ಇಷ್ಟು ಚೆನ್ನಾಗಿ ಟೆನ್ನಿಸ್ ಅಭ್ಯಾಸ ಮಾಡಿಕೊಂಡಲ್ಲಿ ವ್ಯಾಸಂಗಕ್ಕೆ ಸಹ ಕಾಲ ಸಾಲುವುದಿಲ್ಲ" ಎಂದರು.

"ಆ ಮಾತನ್ನು ಅವರು ಹೇಳಿದುದು ನನಗೆ ಚೆನ್ನಾಗಿ ಕೇಳಿಸಿತು" ಎಂದೆ.

ಚಂದ್ರಮತಿ ಮತ್ತೆ ಜೇನು ಸುರಿಯುವ ಮೃದುವಾದ ಕೊರಳಿನಲ್ಲಿ ಹೇಳಿದಳು "ನಮ್ಮ ತಂದೆ ಹೇಳುತ್ತಾರೆ. ಬೇರೆ ಯಾರಾದರೂ ಆಗಿದ್ದರೆ ವ್ಯಾಸಂಗವನ್ನೇ ಬಿಟ್ಟು ಟೆನ್ನಿಸನ್ನು ಮಾತ್ರವೇ ಆಡುತ್ತಾ, ಬರಿಯ ನಿರಕ್ಷರಕುಕ್ಷಿಗಳಾಗುತ್ತಿದ್ದರು" ಎಂದು.

ನಾನು ಎದ್ದು ನಿಂತೆ. ಆಕೆಗೆ ಸಮನಾಗಿ ತಲೆಬಾಗಿ ಹೀಗೆ ಹೇಳಿದೆ "ನಾನು ನಿರಕ್ಷರ ಕುಕ್ಷಿಯಾಗಿಯೇ ಇರಬಹುದು. ಆದರೂ ಈ ಸ್ಥಳವನ್ನು ಬಿಟ್ಟು ಬೇರೆ ಕಡೆ ಹೋಗು ಎಂದು ಯಾವ ಮಾತಿನಲ್ಲಿ ಹೇಳಿದರೂ ಅರ್ಥ ಮಾಡಿಕೊಳ್ಳುವ ಶಕ್ತಿ ನನಗೆ ಇದೆ. ನಾನು ಕಾಂಪೌಂಡ್ ಬಾಗಿಲ ಬಳಿ ನಿಂತು ನಕ್ಷತ್ರ ಶಾಸ್ತ್ರವನ್ನು ಅಭ್ಯಾಸ ಮಾಡುತ್ತೇನೆ. ೭-೫೫ಕ್ಕೆ ನನ್ನನ್ನು ಪರೀಕ್ಷಿಸಿ" ಹೀಗೆ ಹೇಳಿ ಮತ್ತೆ ತಲೆಬಾಗಿ ಹೊರಟು ಹೋದೆ.

ಹೆಜ್. ಒ. ಅಪ್ಪಣೆಯಂತೆ ೭-೫೫ಕ್ಕೆ ಸರಿಯಾಗಿ ಮತ್ತೆ ಆ ಕೊಠಡಿಗೆ ಹೋದೆ. ನನ್ನ ಹೆಜ್ಜೆಯ ಧ್ವನಿ ಕೇಳಿದ ಕೂಡಲೇ ಅವರಿಬ್ಬರ ಮಾತುಗಳೂ ನಿಂತವು. ಮುಂದೆ ಮಾತನಾಡಲು ತೋರದೆ ಸುಮ್ಮನೆ ಕುಳಿತರು.

ಅನಂತರ ಚಂದ್ರಮತಿಯು "ತಂದೆ ಬಹಳ ಆಚಾರವಂತರು. ಅಂಗಿ ಇಟ್ಟುಕೊಂಡು ಊಟ ಮಾಡುವುದು ಅವರಿಗೆ ಒಪ್ಪಿಗೆ ಇಲ್ಲ" ಎಂದಳು.

ನಾವಿಬ್ಬರೂ ತತ್‌ಕ್ಷಣ ಶರಟನ್ನು ಬಿಚ್ಚಿದೆವು. ಬಲರಾಮನ ಕತ್ತಿನಲ್ಲಿ ಜನಿವಾರ ಕಾಣಿಸಲಿಲ್ಲ. "ಎಲ್ಲಯ್ಯ ನಿನ್ನ ಜನಿವಾರ ?" ಎಂದು ಕೇಳಿದೆ.

"ಆಟವಾಡಿದ ನಂತರ ಸ್ನಾನ ಮಾಡುವಾಗ ತೆಗೆದಿಟ್ಟ ಶರಟಿನ ಜತೆ ಹೋಗಿರಬೇಕು" ಎಂದ. ಸ್ನಾನಗೃಹಕ್ಕೆ ಓಡಿದೆವು. ಬರಿಯ ಆಸೆ. ಗಡಿಯಾರ ದಂತೆ ಎಲ್ಲಾ ಕೆಲಸಗಳೂ ನಡೆಯುವ ಆ ಮನೆಯಲ್ಲಿ ನಾವು ಬಿಚ್ಚಿ ಹಾಕಿದ್ದ ಬಟ್ಟೆಗಳನ್ನು ಕೆಲಸಗಾರ ಕೂಡಲೇ ಒಗೆಯುವುದಕ್ಕೆ ತೆಗೆದುಕೊಂಡು ಹೋಗಿ ಬಿಟ್ಟಿದ್ದ. ಆ ವೇಳೆಗೆ ಅಯ್ಯಂಗಾರ್ರು ಬರುವ ಹೆಜ್ಜೆ ಧ್ವನಿ ಕೇಳಿಸಿತು. ಜನಿವಾರವಿಲ್ಲದ ಮೈಯನ್ನು ಮುಚ್ಚಿಕೊಳ್ಳುವುದಕ್ಕಾಗಿ ಬಲರಾಮನು ಮತ್ತೆ ಹೊಸ ಶರಟನ್ನು ಹಾಕಿಕೊಂಡನು.

ಅಯ್ಯಂಗಾರ್ಯರು "ಯಾಕೆ ಶರಟು ಬಿಚ್ಚಿ; ಊಟ ಮಾಡಬಹುದಲ್ಲ. ನಡೆಯಿರಿ" ಎಂದರು.

ಏನು ಬದಲು ಹೇಳಬೇಕೆಂಬುದು ಬಲರಾಮನಿಗೆ ತಿಳಿಯಲಿಲ್ಲ. ಮನಸ್ಸಿಗೆ ತೋರಿದ ಮೊದಲನೆಯ ಸಬೂಬನ್ನೇ ಹೇಳಿಬಿಟ್ಟನು.

"ನನಗೆ ಸ್ವಲ್ಪ ಹೊಟ್ಟೆ ನೋವು. ರಾತ್ರಿ ಊಟವೇ ಬೇಡ, ಎಂದು ಯೋಚಿಸುತ್ತಿದ್ದೇನೆ" ಎಂದು ಗೊಣಗುಟ್ಟಿದನು.

"ಅಯ್ಯಂಗಾರ್ರು "ಹೊಟ್ಟೆ ನೋವೇ" ಎಂದು ಗರ್ಜಿಸಿದರು. ಈ ವಯಸ್ಸಿನಲ್ಲಿ ಹೊಟ್ಟೆನೋವೆ? ಛೇ ಒಬ್ಬ ಹೊಟ್ಟೇ ನೋವಿನ ಹುಡುಗನೇ ನನ್ನ ಮಗಳಿಗೆ—"

ಅಷ್ಟರಲ್ಲಿ ಚಂದ್ರಮತಿ ಸಮಾಧಾನಪಡಿಸಿದಳು. "ಈ ಸಾಯಂಕಾಲ ಆಟವಾಡುವಾಗ ನೀವು ಅವರನ್ನು ಬಹಳ ಓಡಿಯಾಡಿಸಿಬಿಟ್ಟಿರಂತೆ. ಅದರಿಂದಲೇ ಇರಬೇಕು ಹೊಟ್ಟೆ ನೋವು. ನಿಮ್ಮೊಂದಿಗೆ ಸ್ವಲ್ಪ ಕಾಲ ಆಟ ಅಭ್ಯಾಸವಾದರೆ—"

ಅಯ್ಯಂಗಾರ್ರ ಮುಖ ಮತ್ತೆ ಶಾಂತವಾಯಿತು. ಸ್ವಲ್ಪ ಸಂತೋಷ ಉಂಟಾಯಿತೆಂದು ಸಹ ಹೇಳಬಹುದು.

ಆ ವೇಳೆಗೆ ಅಲ್ಲಿ ಬಂದ ಅವರ ಹೆಂಡತಿ ಸಮಾಚಾರವನ್ನು ಕೇಳಿ ಖಿನ್ನರಾದರು. "ನೀವು ಆಟವಾಡಿ ಸೋತಿದ್ದೀರಿ ಎಂದು ಜಿಲೇಬಿಯನ್ನೂ ವಡೆಯನ್ನೂ ಮಾಡಿದ್ದೆ. ಸ್ವಲ್ಪ ಗಂಜಿಯನ್ನಾದರೂ ಮಾಡಿ ಕೊಡಲೇ" ಎಂದು ಪರಿತಪಿಸಿದರು.

ಅಯ್ಯಂಗಾರ್ಯರು "ಗಂಜಿಯೋ? ಮಾತನಾಡಕೂಡದು. ಹೊಟ್ಟೇ ನೋವಿಗೆ ಒಂದೇ ಔಷಧಿ ಪೂರ್ಣ ಉಪವಾಸ, ಒಂದು ಉಪವಾಸ ಮಾಡಿಬಿಟ್ಟರೆ ನಾಳೆ ಸಂತೋಷವಾಗಿ ಊಟ ಮಾಡಬಹುದು" ಎಂದುಕೊಂಡು ನನ್ನನ್ನು ಮಾತ್ರ ಕರೆದುಕೊಂಡು ಊಟಕ್ಕೆ ಹೋದರು.

* * * *

ಆ ರಾತ್ರಿ ನಾನು ನಿದ್ರೆ ಹೋಗುವವರೆಗೆ ಬಲರಾಮನು ಹಸಿವಿನಲ್ಲಿ ನರಳಿದುದನ್ನು ಹೇಳಲು ಸಾಧ್ಯವಿಲ್ಲ. "ವಡೆ ಜಿಲೇಬಿ" ಎಂದು ಸಾವಿರ ಸಲ ಜಪಿಸುತ್ತಲೇ ಇದ್ದನು. ಹನ್ನೊಂದು ಗಂಟೆಯಾದ ನಂತರ ಆ ಜಪವನ್ನು ಲಕ್ಷ್ಯ ಮಾಡದೆ ನಾನು ನಿದ್ರೆ ಹೋಗಿಬಿಟ್ಟೆ.

ಅರ್ಧ ರಾತ್ರಿ ಮಿಾರಿತ್ತು. ನನಗೋ ಗಾಢ ನಿದ್ರೆ. ಬಲರಾಮನು ನನ್ನನ್ನು ಒರಟಾಗಿ ಅಲ್ಲಾಡಿಸಿದ. ನಾನು ಬಹಳ ಕಷ್ಟಪಟ್ಟು ಎಚ್ಚರ ಮಾಡಿಕೊಂಡೆ. ನನ್ನ ಕಿವಿಗೆ ಅವನು "ವಡೆ ಜಿಲೇಬಿ" ಎಂದು ಹೇಳಿದಂತೆ ಕೇಳಿಸಿತು.

"ಇನ್ನೂ ಆ ಜಪವೇಯೋ" ಎಂದು ಬೇಸರಪಟ್ಟುಕೊಂಡೆ.

"ಇಲ್ಲಿ ಕೇಳು. ಮತ್ತೆ ನಿದ್ರೆ ಹೋಗಿಬಿಡಬೇಡ. ಹಸಿವಿನ ಬಾಧೆ ನನಗೆ ಸಹಿಸಲು ಸಾಧ್ಯವಿಲ್ಲ. ಅಡಿಗೆ ಮನೆಗೆ ಹೋಗಿ ತಿನ್ನುವ ಪದಾರ್ಥ ಏನಾದರೂ ಇದೆಯೇ ಎಂದು ನೋಡೋಣ" ಎಂದ.

"ಈ ಹೊತ್ತಿನಲ್ಲಿ ಅಡಿಗೆ ಮನೆಯಲ್ಲಿ ಏನಿರುತ್ತೆ? ನಡುಪಟ್ಟಿಯನ್ನು (ಬೆಲ್ಟ್) ಬಿಗಿಯಾಗಿ ಬಿಗಿಕೊಂಡರೆ ಹಸಿವು ತೋರುವುದಿಲ್ಲ. ಕಣ್ಣು ಮುಚ್ಚಿಕೊಂಡರೆ ಒಂದೇ ಗಳಿಗೆಯಲ್ಲಿ ನಿದ್ರೆ ಬಂದುಬಿಡುವುದು" ಎಂದು ನನ್ನ ಕಣ್ಣು ಮುಚ್ಚಿಕೊಂಡು ತೋರಿಸಿದೆ.

ಬಲರಾಮನು ಕೇಳಲಿಲ್ಲ. "ಆ ವಡೆಯೂ ಜಿಲೇಬಿಯೂ—"

"ಯಾವ ವಡೆ ಜಿಲೇಬಿ"? ಎಂದೆ.

"ನನಗಾಗಿ ಮಾಡಿದ್ದು ಮಿಕ್ಕಿರಬೇಕು ತಾನೇ. ಅಲ್ಲದೆ ಇಂತಹ ದೊಡ್ಡ ಮನೆಯಲ್ಲಿ ಲೆಕ್ಕಾಚಾರವಾಗಿ ಅಡಿಗೆ ಮಾಡುವುದಿಲ್ಲ. ಏನಾದರೂ ಮಿಕ್ಕಿರಬೇಕು. ಅಡಿಗೆ ಮನೆಗೆ ನೀನು ದಾರಿ ತೋರಿಸಿದ ಹೊರತು ನಿನ್ನನ್ನು ಬಿಡುವುದಿಲ್ಲ" ಎಂದು ಬಲರಾಮನು ಮತ್ತೆ ನನ್ನನ್ನು ಕುಲುಕಾಡಿದನು.

ನಾನು ಏನು ಮಾಡಲಿ? ಅವನ ಕಾಟವನ್ನು ತಡೆಯಲಾರದೆ ನಾವು ರಾತ್ರಿ ಊಟ ಮಾಡಿದ ಸ್ಥಳಕ್ಕೆ ಕತ್ತಲೆಯಲ್ಲಿಯೇ ತಡವುತ್ತಾ ಅವನನ್ನು ಕರೆದುಕೊಂಡು ಹೋದೆ. ಅದರ ಮಗ್ಗುಲಲ್ಲಿ ಅಡಿಗೆ ಮನೆ ಇದ್ದಿರಬೇಕು. ಬಲರಾಮನಿಗೆ ಹಸಿವಿನ ದಾವಂತದಿಂದ ವಾಸನಾ ಶಕ್ತಿ ಎರಡರಷ್ಟಾಗಿ ಭಕ್ಷ್ಯಗಳನ್ನಿಟ್ಟಿದ್ದ ಅಲಮಾರುವಿನ ಬಳಿಗೆ ಅಂಬು ಎಸೆದಂತೆ ಆತ ಹೋಗಿ ನಿಂತನು. ಅವನ ಅದೃಷ್ಟ, ಅದಕ್ಕೆ ಬೀಗ ಹಾಕಿರಲಿಲ್ಲ. ಆ ನಿಶ್ಶಬ್ದದಲ್ಲಿ ಅವನ ದವಡೆಗಳು ಕೆಲಸ ಮಾಡುತ್ತಿದ್ದ ಶಬ್ದ ನನಗೆ ಕೇಳಿಸಿತು.

ಅವನು ಹಸಿವು ಅಡಗುವುದಕ್ಕೆ ಮಟ್ಟಿಗೆ ಏನನ್ನಾದರೂ ಸ್ವಲ್ಪ ತಿಂದು ಕೂಡಲೇ ಹಿಂದಿರುಗಿದ್ದರೆ ಎಲ್ಲವೂ ಸರಿಯಾಗಿ ಬಿಡುತ್ತಿತ್ತು

ಆದರೆ ಅವನೋ? ಅಲಮಾರಿನ ಪಕ್ಕವನ್ನು ಬಿಟ್ಟು ಹಿಂತಿರುಗುವಂತೆಯೇ ತೋರಲಿಲ್ಲ. ನಿದ್ರೆಯ ಭಾರದಿಂದ ನನಗೆ ನಿಂತಿರುವುದು ಕಷ್ಟವಾದುದರಿಂದ ಗೋಡೆಯ ಮಗ್ಗುಲಲ್ಲಿದ್ದ ಒಂದು ಮಣೆ ಹಾಕಿಕೊಂಡು ಅದರ ಮೇಲೆ ಕುಳಿತುಕೊಳ್ಳೋಣವೆಂದು ಅದಕ್ಕೆ ಕೈ ನೀಡಿದೆ. ತತ್‌ಕ್ಷಣ 'ಪಟಾರ್' ಎಂದು ಶಬ್ದ ಮಾಡುತ್ತಾ ಅದು ಕೆಳಕ್ಕೆ ಬಿತ್ತು.

"ಯಾರಾದರೂ ಬಂದುಬಿಟ್ಟಾರು ಬೇಗ ಬಾ" ಎಂದು ಬಲರಾಮನನ್ನು ಕರೆದೆ. ಆದರೆ ಅವನಿಗೆ ಆ ವೇಳೆಯಲ್ಲಿ ತನ್ನನ್ನು ಕಾಪಾಡಿಕೊಳ್ಳುವ ದೃಷ್ಟಿಯೇ ಇದ್ದಂತೆ ತೋರಲಿಲ್ಲ.

"ಇನ್ನು ನಾಲ್ಕೇ ಬಾಕಿ" ಎಂದು ತಿಂಡಿ ತುಂಬಿದ ಬಾಯಿಯಿಂದ ಹೇಳಿದ.

ಇನ್ನು ಕಾದಿದ್ದರೆ ಆಪತ್ತೇ ಎಂದುಕೊಂಡು ನಾನು ಬಂದ ದಾರಿಯಲ್ಲಿ ಹಿಂದಿರುಗಲು ಪ್ರಾರಂಭಿಸಿದೆ. ಎದುರುಗಡೆ ಜನ ಬರುತ್ತಿರುವ ಸದ್ದು ಕೇಳಿಸಿ ದುದರಿಂದ ಒಂದು ಕದದ ಹಿಂದ ಅವಿತುಕೊಂಡೆ. ನನ್ನ ದುರದೃಷ್ಟ. ವಿದ್ಯುತ್ ದೀಪದ ಸ್ವಿಚ್ ಇದ್ದುದು ಅಲ್ಲಿಯೇ. ಬಂದವನು ಕಾವಲುಗಾರನಂತೆ ತೋರಿತು. ಅವನು ಬಾಗಿಲಿನ ಬಳಿ ನಿಂತುಕೊಂಡೇ 'ಸ್ವಿಚ್' ಹಾಕಲು ಕೈ ನೀಡಿದನು. ಒಂದೇ ಕ್ಷಣ ತಡೆದರೂ ಎಲ್ಲಾ ಬೆಳಕಾಗುವುದರಲ್ಲಿ ಸಂದೇಹವಿರಲಿಲ್ಲ. ಚಂದ್ರ ಮತಿಗೆ ಅವಳ ಮನವೊಪ್ಪಿದ ಗಂಡ ದೊರೆಯಬೇಕಾದರೆ ಆವಳ ಮನೆಯ ಕಾವಲುಗಾರನಿಗೂ ಶ್ರಮವಾಗದಿರಲು ಸಾಧ್ಯವೇ? ಕಾಲೇಜಿನಲ್ಲಿ ಫುಟ್ ಬಾಲ್ ಆಡುವಾಗ ಎದುರಾಳಿಗೆ ತೊಡರು ಕೊಟ್ಟು ಅವನನ್ನು ಕೆಡಹುವುದು ಸಹಜ. ಆ ವಿದ್ಯೆಯನ್ನು ಇಲ್ಲಿ ಉಪಯೋಗಿಸಿದೆ. ಆಳು ನೀಡಿದ ಕೈ ಸ್ವಿಚ್ಚನ್ನು ಮುಟ್ಟುವುದಕ್ಕೆ ಮುಂಚೆ ಅವನು ಸಾಷ್ಟಾಂಗವಾಗಿ ಕೆಳಗೆ ಬಿದ್ದನು.

ಅವನು ಬಿದ್ದ ಸದ್ದು, ಕೂಗಿದ ಕೂಗು ಇವುಗಳಿಂದ ಮನೆಯೆಲ್ಲ ಬೊಬ್ಬೆ ಯಾಗಿ ಹೋಯಿತು. ನಾನು ಹತ್ತು ಹೆಜ್ಜೆ ಸರಸರನೆ ನಡೆದು ನನ್ನ ಕೊಠಡಿ ಯನ್ನು ಸೇರಿಕೊಂಡೆ. ಅನಂತರ ಆಗ ತಾನೆ ಕೋಣೆಯಿಂದ ಹೊರಟವನಂತೆ, 'ಏನು ಏನು' ಎನ್ನುತ್ತಾ ಹೋಗಿ ಬಿದ್ದವನನ್ನು ಏಳಿಸಿ ಕೂರಿಸಿದೆ.

ದೇವರ ದಯದಿಂದ ಆ ವೇಳೆಗೆ ಜಿಲೇಬಿಯೆಲ್ಲಾ ಮುಗಿದಿದ್ದುದರಿಂದ ಬಲರಾಮನು ಮತ್ತೆ ಮನುಷ್ಯ ಜಾತಿಗೆ ಸೇರಿಕೊಂಡು ಬಹಳ ಸಾಮರ್ಥ್ಯದಿಂದ ನಡೆದುಕೊಂಡನು. ಅವನು "ಕಳ್ಳ ಕಳ್ಳ" ಎಂದು ಕೂಗುತ್ತಲೇ ಆ ಕೊಠಡಿ ಯಲ್ಲಿದ್ದ ಸ್ವಿಚ್‌ನ್ನು ಹಾಕಿದನು. ಆ ಮನೆಯನ್ನು ಆಧುನಿಕ ಬಂಗಲೆಯ ಮಾದರಿಯಲ್ಲಿ ಕಟ್ಟಿದ್ದುದರಿಂದಲೂ, ಕಮಿಾಷನರ ಮನೆಗೆ ಯಾವ ಕಳ್ಳನೂ ನುಗ್ಗುವುದಿಲ್ಲವೆಂದು ಅವರಿಗೆ ನಂಬಿಕೆಯಿದ್ದುದರಿಂದಲೂ ಆ ಬಂಗಲೆಯ ಕಿಟಕಿ ಗಳಿಗೆ ಕಬ್ಬಿಣದ ಸಲಾಕಿಗಳನ್ನು ಹಾಕಿರಲಿಲ್ಲ. ಬಲರಾಮನು ಬಾಗಿಲು

ತೆರೆದು ಒಂದು ಕಿಟಕಿಯ ಕಡೆ ಕೈ ತೋರಿಸಿ "ನೋಡಿ ಕಳ್ಳನು ಓಡುತ್ತಾನೆ" ಎಂದು ಕಿಟಕಿಯ ಮೂಲಕ ಹೊರಕ್ಕೆ ಹಾರಿದನು. ಅಷ್ಟರಲ್ಲಿ ಅಲ್ಲಿ ಸೇರಿದ ಕೆಲವು ಕಾನಸ್ಟೇಬಲ್‌ಗಳು ತಮಗೂ ಮೆಡಲು ದೊರೆಯಬಹುದೆಂದು ತಾವೂ ಹಾಗೆಯೇ ಮಾಡಿದರು.

ಈ ಗದ್ದಲವೆಲ್ಲ ಅಡಗಲು ಸುಮಾರು ಕಾಲು ಗಂಟೆಯಾಯಿತು. ಚಂದ್ರ ಮತಿಯೂ, ಅವಳ ತಾಯಿಯೂ, ಅಯ್ಯಂಗಾರ್ಯರೂ, ನಾನೂ ಬಂಗಲೆಯಲ್ಲಿ ಕಾಯುತ್ತಿದ್ದೆವು. ಕಿಟಕಿಯಿಂದ ಹೊರಕ್ಕೆ ಹಾರಿದವರೆಲ್ಲಾ ತೋಟವನ್ನೆಲ್ಲಾ ಸುತ್ತಿ ಬರಿಯ ಕೈಯ್ಯಲ್ಲಿ ಹಿಂದಿರುಗಿದರು. ಬಲರಾಮನಿಗೆ ಅಂದಿನ ನಡು ರಾತ್ರಿಯಲ್ಲಿ ಯೋಗವು ಬದಲಾಯಿಸಿದ್ದಿರಬೇಕು. ವಡೆಯೂ ಜಿಲೇಬಿಯೂ ದೊರೆತಂತೆ ಅವನು ಹಾರಿದಾಗ ಅವನ ಕೈಯ್ಯಲ್ಲಿ ಒಂದು ಸಣ್ಣ ಗೀರು ಗಾಯ ಸಹ ಆಯಿತು. ಹೆದರದೆ ಕಳ್ಳನನ್ನು ಹಿಡಿದು ಕಟ್ಟಲು ಅವನು ಪ್ರಯತ್ನಿಸಿದ ನೆಂಬುದಕ್ಕೆ ಇದಕ್ಕಿಂತ ಬೇರೆ ರುಜುವಾತು ಏನು ಬೇಕು? ಭಾವಿ ಅಳಿಯ ನನ್ನು ಕಂಡು ಅಯ್ಯಂಗಾರ್ಯರಿಗೆ ಬಹು ಸಂತೋಷವಾಯಿತು.

ಅದರೆ ಅವರಿಗೆ ಒಂದು ಸಂದೇಹ "ಕಳ್ಳನು ಅಡಿಗೆ ಮನೆಗೆ ಯಾಕೆ ಬಂದ" ಎಂದು ತರ್ಕಿಸಿದರು.

ಅಷ್ಟರಲ್ಲಿ ಬಾಗಿಲು ತೆರೆದಿದ್ದ ಅಲಮಾರನ್ನು ಗಮನಿಸಿದ ಅವರ ಹೆಂಡತಿ "ಇದರಲ್ಲಿ ಹನ್ನೆರಡು ವಡೆಗಳನ್ನೂ, ಹದಿನಾರು ಜಿಲೇಬಿಗಳನ್ನೂ ಇಟ್ಟಿದ್ದೆ. ಒಂದೂ ಕಾಣುವುದಿಲ್ಲವಲ್ಲ"? ಎಂದು ಆಶ್ಚರ್ಯದಿಂದ ಕೇಳಿದಳು.

ಕೆಳಗೆ ಬಿದ್ದ ಕಾವಲುಗಾರನು ಏನನ್ನೂ ಹೇಳದೆ ತನ್ನ ಮುಖವನ್ನು ಸವರಿಕೊಳ್ಳುತ್ತಿದ್ದನು.

ಪದ್ಧತಿಯಂತೆ ಚಂದ್ರಮತಿಯೇ ಪ್ರಶ್ನೆಗಳಿಗೆಲ್ಲಾ ಉತ್ತರ ಕೊಟ್ಟಳು. "ಬೇರೇನೂ ಇಲ್ಲ ಅಪ್ಪ. ನಿಮ್ಮ ಆಫೀಸ್ ರೂಮಿನಿಂದ ಮುಖ್ಯವಾದ ಕಾಗದಗಳನ್ನು ಕದಿಯಲು ಒಬ್ಬ ಕಳ್ಳ ಬಂದಿದ್ದಿರಬೇಕು. ಒಳಗೆ ನುಗ್ಗಲು ಅನುಕೂಲವಾಗಿರುವ ಈ ಕಿಟಕಿಯಿಂದ ಅಡಿಗೆ ಮನೆ ಹೊಕ್ಕಿದ್ದಾನೆ. ಅಲ್ಲಿ ಅಮ್ಮ ಮಾಡಿಟ್ಟಿದ್ದ ಭಕ್ಷ್ಯಗಳ ವಾಸನೆ ಕಂಡು ಅವನ್ನು ತಿಂದುಬಿಟ್ಟಿದ್ದಾನೆ" ಎಂದಳು.

" ಆ ಕಳ್ಳನ ಕಾಲಿಗೆ ತಗಲಿ ಕೆಳಗೆ ಬಿದ್ದ ಮಣೆಯ ಸದ್ದು ಕೇಳಿ ನಾನು ಇಲ್ಲಿಗೆ ಓಡಿ ಬಂದೆ" ಎಂದ ಬಲರಾಮು.

" ನಾನು ಮಾತ್ರ ಸ್ವಲ್ಪ ಮುಂಚೆ ಇಲ್ಲಿಗೆ ಬಂದಿದ್ದರೆ ಆ ಭಕ್ಷ್ಯಕಳ್ಳ ನನ್ನ ಹೀಗೆ ತಪ್ಪಿಸಿಕೊಂಡು ಹೋಗಲು ಬಿಡುತ್ತಿದ್ದೆನೆ?" ಎಂದೆ ನಾನು.

ಹೀಗೆ ನಡೆದುದನ್ನ ನಾವು ಯುಕ್ತಿಯಿಂದ ಪತ್ತೆ ಮಾಡಿದಂತೆ ಆಯಿತು. ಕಳ್ಳನು ಸಿಕ್ಕಲಿಲ್ಲವಲ್ಲ ಎಂದು ಐಯ್ಯಂಗಾರ್‍ಯರು ಬಹಳ ಕೊರಗಿದರು. ಕಳ್ಳ ಸಿಕ್ಕಿದ್ದರೆ ಅವರು ಮತ್ತಷ್ಟು ಕೊರಗಬೇಕಾಗಿದ್ದಿತೆಂಬುದು ನನಗೂ ಬಲರಾಮು ನಿಗೂ ಮಾತ್ರವೇ ಗೊತ್ತು.

ಕಳ್ಳನನ್ನು ಕಂಡು ಹಿಡಿಯಲು ಅವರು ಇನ್‌ಸ್ಪೆಕ್ಟರ್ ಚಂದ್ರಶೇಖರ ನನ್ನು ತತ್‌ಕ್ಷಣ ಸ್ಪೆಷಲ್ ಡ್ಯೂಟಿಗೆ ನಿಯಮಿಸಿದರು.

ಚಂದ್ರಮತಿ ಏನನ್ನೂ ಹೇಳದೆ ಮುಗುಳುನಗೆ ಮಾತ್ರ ನಗುತ್ತಿದ್ದಳು. " ಕಳ್ಳ ಈಗಾಗಲೇ ನನ್ನ ಕೈಗೆ ಸಿಕ್ಕಿ ಆಯಿತೆಂದು" ಆಕೆ ಭಾವಿಸಿರಬಹುದು.

ನಾವು ನಮ್ಮ ಕೊಠಡಿಯನ್ನು ಸೇರಿ ಮಲಗಲು ಸಿದ್ಧರಾಗುತ್ತಿರುವಾಗ, ಕಾನಸ್ಟೇಬಲ್ ಬಂದು ಸಲಾಮು ಮಾಡಿ ಒಂದು ಚೀಟಿಯನ್ನು ನೀಡಿದನು. ಅದನ್ನು ತೆಗೆದುಕೊಂಡು ಓದಿದೆ.

ಹೆಚ್. ಒ ೨೦. ೪೩೬ ಬಿ.

"ಬೆಳಿಗ್ಗೆ ೮ ಗಂಟೆಗೆ ಸೌ|| ಚಂದ್ರಮತಿಗೆ ನಿಶ್ಚಿತಾರ್ಥ; ೧೦-೩೦ಕ್ಕೆ ಔತಣ."

ಇದರ ನಕಲು

೧) ಮನೆಯ ಯಜಮಾನಿಗೆ

೨) ಸೌ|| ಚಂದ್ರಮತಿಗೆ

೩) ಅತಿಥಿಗಳಿಗೆ

೪) ಪುರೋಹಿತ ಶಡಗೋಪಾಚಾರ್ಯರಿಗೆ

೫) ಇದರ ಜತೆಯ ಪಟ್ಟಿಯಲ್ಲಿರುವ ಸ್ನೇಹಿತರಿಗೆ ಜಿ. ಹಂ. ಐ.

ತನ್ನ ಮನಸ್ಸು ಸಮಾಧಾನವಾದ ನಂತರ ಬಲರಾಮನು " ಪುರೋಹಿತ ರಿಗೆ ತೆಗೆದುಕೊಂಡು ಹೋಗಿ ಕೊಡುವವರು ಯಾರು"? ಎಂದನು.

ಕಾನಸ್ಟೇಬಲ್ " ನಾನೆಯೇ" ಎಂದನು. ಬಲರಾಮನು " ಹಾಗಾ

ದರೆ—” ಎಂದು ಕೇಳಿಕೊಂಡು ಅಂಗಿಯ ಜೇಬಿನಿಂದ ಕಾನಸ್ಟೇಬಲ್ ಕೈಗೆ ಒಂದು ರೂಪಾಯಿಯನ್ನು ತೆಗೆದು ಕೊಟ್ಟು ಏನನ್ನೋ ಹೇಳಿ “ಮರೆಯ ಕೂಡದು. ಇದು ರಹಸ್ಯವಾಗಿರಲಿ” ಎಂದು ಮುಗಿಸಿದನು.

“ಮರೆಯುವುದಿಲ್ಲ. ಒಂದಲ್ಲ ಎರಡು ತರುವಂತೆ ಹೇಳುತ್ತೇನೆ” ಎಂದು ಕಾನಸ್ಟೇಬಲ್ ಪ್ರತ್ಯುತ್ತರವಿತ್ತನು.

“ಎರಡು ಏನು ಎಂದು ಕೇಳಿದೆ. ಎರಡು ಜನಿವಾರಗಳೇ? ಅಯ್ಯ ಕಾನಸ್ಟೇಬಲ್ ಅವಸರಪಡಬೇಡ. ಎರಡು ಜನಿವಾರ ಬೇಕಾಗಿರುವುದು ಮುಹೂರ್ತದ ದಿನ. ಆದರೆ ಅದಕ್ಕೆ ಇನ್ನೂ ಹೆಚ್. ಓ ಹುಟ್ಟಲಿಲ್ಲ. ನಿಶ್ಚಿತಾರ್ಥಕ್ಕೆ ಒಂದೇ ಜನಿವಾರ ಸಾಕು. ಅದು ನಡೆದರೆ ಮುಹೂರ್ತ, ಸೀಮಂತ ಮುಂತಾದುವೆಲ್ಲ ಒಂದಾದ ಮೇಲೆ ಒಂದು ಬಂದೇ ಬರುತ್ತವೆ” ಎಂದು ಆಶೀರ್ವದಿಸಿದೆ.

---

# ಕತೆ ಬರೆಯುವ ರೀತಿ

ನನ್ನ ಸ್ನೇಹಿತ ಬಲರಾಮನು ನಮ್ಮನ್ನು ನೋಡುವುದಕ್ಕೆ ಬಂದಿದ್ದ.

ಲಲಿತ ಸ್ವಲ್ಪ ಹೆಮ್ಮೆಯಿಂದಲೇ ಹೇಳತೊಡಗಿದಳು. “ಸ್ವರ್ಗದ ಬಾಗಿಲಿ”ನ ಸಂಪಾದಕರು ಬರೆದಿದ್ದಾರೆ. ಸಂಕ್ರಾಂತಿ ಸಂಚಿಕೆಗೆ ಒಳ್ಳೆಯ ಕತೆಗಳಾಗಬೇಕಂತೆ—”

“ಅದಕ್ಕೆ ಒಂದು ಕತೆ ಬರೆದು ಕಳುಹಿಸಿ. ಎಂದು ನನ್ನನ್ನು ಕೇಳಿಕೊಂಡಿದ್ದಾರೆ” ಎಂದು ನಾನು ಪೂರ್ಣಗೊಳಿಸಿದೆ.

“ಚೆನ್ನಾಗಿದೆ! ಅವರು ಕತೆ ಬರೆದು ಕೊಡಿ ಎಂದು ಕೇಳಿರುವುದು ನನ್ನನ್ನಲ್ಲವೆ? ನಿಮ್ಮ ಕತೆಯನ್ನು ಯಾರು ಕೇಳಿದರು? ನಾನೊಬ್ಬಳೇ ದಿನವೆಲ್ಲ ಅವುಗಳನ್ನು ಕೇಳಿಕೊಂಡಿರಬೇಕಾಗಿದೆಯಲ್ಲ; ಅದು ಸಾಲದೋ?

ಅವರು ಬರೆದಿರುವುದನ್ನು ನಾನು ಹೇಳಿದೆ. ಬೇಕಾದರೆ ಕಾಗದವನ್ನೇ ಬಲರಾಮನಿಗೆ ತೋರಿಸುವುದು ತಾನೇ?” ಎಂದೆ.

“ತೆಗೆದುಕೊಳ್ಳಿ” ಎಂದು ಹೇಳಿ ಮೇಜಿನ ಮೇಲಿದ್ದ ಕಟ್ಟನಿಂದ ಒಂದು ಕಾಗದವನ್ನು ಅವಳು ಆರಿಸಿ ನೀಡಿದಳು.

"ಮೊದಲು ನೀನೇ ಅದನ್ನು ಓದಿ ನೋಡು. ಅವಸರಪಡದೆ ಪೂರ್ಣವಾಗಿ ಓದು" ಎಂದೆ.

ಅದರಲ್ಲಿ ಮುಂದೆ ಕಾಣುವಂತೆ ಮುದ್ರಿಸಿತ್ತು.

ಮಾನ್ಯರೇ

ಶ್ರೀಮತಿಯವರೇ,

"ಸ್ವರ್ಗದ ಬಾಗಿಲಿ"ನ ಸಂಕ್ರಾಂತಿ ಸಂಚಿಕೆಯನ್ನು ವಿಶೇಷವಾದ ಕತೆಗಳೊಡನೆ ಹೊರಡಿಸಬೇಕೆಂದು ಯೋಚಿಸಿದ್ದೇವೆ. ಅದಕ್ಕೆ ದಯವಿಟ್ಟು ಒಂದು ಕತೆಯನ್ನು ಬರೆದು ಕೊಟ್ಟು ಸಹಾಯ ಮಾಡಬೇಕೆಂದು ಬೇಡುತ್ತೇವೆ. ಶ್ರಮವನ್ನು ಸಹಿಸಿ ನಿರ್ವಹಿಸುವಿರೆಂದು ನಂಬಿದ್ದೇವೆ.

ಇತಿ– ಸಂಪಾದಕರು.

"ಓಹೋ ಈಗ ತಿಳಿಯಿತು. ಮೇಲುಗಡೆ "ಮಾನ್ಯರೇ" ಎಂದಿರುವುದನ್ನಿಟ್ಟುಕೊಂಡು ಸುಮ್ಮನೆ ಹೊಂದಿಸಿಕೊಂಡು ವಾದಿಸುತ್ತಿದ್ದೀರಿ ಅಲ್ಲವೆ? ಮುದ್ರಿಸುವಾಗ, ಸಾಮಾನ್ಯವಾಗಿ ಉಪಯೋಗಕ್ಕೆ ಅನುಕೂಲವಾಗುವಂತೆ, ಮಾನ್ಯರೇ, ಶ್ರೀಮತಿಯವರೇ, ಎಂದು ಎರಡನ್ನೂ ಮುದ್ರಿಸುತ್ತಾರೆ. ಅದರಲ್ಲಿ ಮೇಲಿನ ಪದವನ್ನು ಹೊಡೆದು ಹಾಕುವುದನ್ನು ಮರೆತುಬಿಟ್ಟ ಮಾತ್ರಕ್ಕೆ ಕಾಗದವೇ ನಿಮ್ಮದಾಗಿಬಿಡುವುದೇ?

"ಮೇಲಿನ ಪದವನ್ನು ಯಾತಕ್ಕೆ ಹೊಡಿಯಬೇಕು? ಒಂದು ಗುರುತೂ ಇಲ್ಲದಿದ್ದರೆ "ಕೆಳಗಿನದು ಕೆಳಗೆ, ಮೇಲಿನದು ಕೆಳಗಿನದರ ಮೇಲೆ, ಎಂಬ ನ್ಯಾಯದಂತೆ ಅಡಿಯಲ್ಲಿರುವುದನ್ನೇ ಹೊಡೆಯಬೇಕು. ಬೇಕಾದರೆ ಬಲರಾಮನನ್ನು ಕೇಳು. ಅವನು ಸಾಹಿತ್ಯ ವಿದ್ವಾಂಸ" ಎಂದೆ.

"ಸಾಕು! ಈ ಅದ್ಭುತವಾದ ನ್ಯಾಯಕ್ಕೆ ನನ್ನನ್ನು ಎಳೆಯಬೇಡಿ. ಈ ಕಾಗದ ಬಂದ ಕವರು ಎಲ್ಲಿ? ಅದರಲ್ಲಿ ಯಾರ ಹೆಸರು ಬರೆದಿದ್ದಿತು?" ಎಂದು ಅವನು ಕೇಳಿದನು.

ಲಲಿತ ಉತ್ತರವಿತ್ತಳು: "ಕವರೇ? ಅದನ್ನು ಎಲ್ಲಿಯೋ ಹರಿದು ಹಾಕಿಬಿಟ್ಟೆ. ಅದರಲ್ಲಿ ಈ ಕಾಲದ ಪದ್ಧತಿಯ ಪ್ರಕಾರ ಇವರ ಹೆಸರನ್ನೇ ಬರೆದಿದ್ದರು. ಅದನ್ನೂ ಇಲ್ಲ ಎಂದು ಹೇಳುತ್ತಾರೋ ಕೇಳಿ."

"ಹೌದು, ಸ್ಪಷ್ಟವಾಗಿಯೇ ಹೇಳುತ್ತೇನೆ. ಶ್ರೀಮತಿ ಎಂದು ಇಲ್ಲ.

ಶ್ರೀಯುತ ಎಂದು ಬರೆದಿದ್ದಿತು. ಯಾವಾಗಲೂ ಇಂಗ್ಲೀಷ್ ಕಾದಂಬರಿಗಳನ್ನೇ ಓದುವುದರಲ್ಲಿ ತಮಿಳು ಕೈ ಬರಹವನ್ನು ಓದುವ ಶಕ್ತಿಯನ್ನೇ ಕೆಲವರು ಕಳೆದುಕೊಂಡುಬಿಟ್ಟಿರುತ್ತಾರೆ. ಅದಕ್ಕೆ ಸ್ತ್ರೀ ವಿದ್ಯಾಭ್ಯಾಸ ಎಂದು ಹೆಸರಂತೆ."

"ಅದೇನೂ ಕೈ ಬರಹವಲ್ಲ. ಚೆನ್ನಾಗಿ 'ಟೈಪ್‌ರೈಟ್' ಮಾಡಿತ್ತು" ಎಂದಳು ಲಲಿತಾ.

"ಹಾಗೆ ತಿಳಿಯಾಗಿದ್ದರೆ ಶ್ರೀಯುತ ಎನ್ನುವುದನ್ನು ಶ್ರೀಮತಿ ಎಂದು ಏಕೆ ಓದಬೇಕಾಗಿತ್ತು? ಅದಕ್ಕೆ ಕಾರಣವನ್ನು ನೀನೇ ಹೇಳಬೇಕಲ್ಲವೆ?" ಎಂದು ನಾನು ನ್ಯಾಯವಾಗಿ ಕೇಳಿದೆ.

ಅಷ್ಟರಲ್ಲಿ ಬಲರಾಮನು, "ನಿಮ್ಮಿಬ್ಬರ ತರ್ಕವನ್ನೂ ಕೇಳಿದರೆ ನನಗೆ ತಲೆಯೇ ಸುತ್ತು ಬರುತ್ತೆ. ಇದರ ಬದಲು ನಾನು ಒಂದು ದಾರಿ ಹೇಳುತ್ತೇನೆ. ಒಬ್ಬೊಬ್ಬರು ಒಂದೊಂದು ಕತೆಯನ್ನು ಬರೆಯಿರಿ. ಅವುಗಳಲ್ಲಿ ಒಂದನ್ನು ಆರಿಸಿಕೊಳ್ಳುವುದು ಸಂಪಾದಕನ ಪಾಡು. ಇಷ್ಟರ ಮೇಲೆ ಪತ್ರಿಕೆಯನ್ನು ಓದುವವರ ಹಣೆಯ ಬರಹವಿದ್ದಂತೆ ಆಗುತ್ತದೆ" ಎಂದು ಮಧ್ಯಸ್ಥಿಕೆ ಮಾಡಿಬಿಟ್ಟು ಎದ್ದು ಹೋದ.

* * * *

ಎರಡು ದಿನ ಕಳೆದ ಮೇಲೆ, ಒಂದು ಬಾರಿ ನಾನು ಲಲಿತಳನ್ನು, "ಕತೆಯನ್ನು ಪ್ರಾರಂಭಿಸಿಬಿಟ್ಟೆಯಾ?" ಎಂದು ಕೇಳಿದೆ.

"ಓ! ಪ್ರಾರಂಭಿಸಿ ಹತ್ತು ಪುಟ ಬರೆದಾಗಿ ಹೋಯಿತು" ಎಂದಳು.

"ಕಥಾ ನಾಯಕಿಯನ್ನು ಕುರಿತು ನಿಶ್ಚಯ ಮಾಡಿಬಿಟ್ಟೆಯಾ? ಅದು ತಾನೇ ಮುಖ್ಯ. ಆ ಹತ್ತು ಪುಟಗಳಲ್ಲೇ ಅವಳು ಬರುತ್ತಾಳೋ? ಅವಳನ್ನು ಯಾವ ರೀತಿ ವರ್ಣಿಸುವೆ?"

"ಪ್ರಾರಂಭದಲ್ಲಿಯೇ ಬಂದುಬಿಡುತ್ತಾಳೆ. ವರ್ಣನೆ ಎಲ್ಲಾ ನನಗೆ ತಿಳಿಯದು. ಆದರೆ ಒಂದು ಕಡೆ, "ಇವಳನ್ನೂ ಇವಳ ತಂದೆಯನ್ನೂ ಒಟ್ಟಿಗೆ ಕಾಣುವಾಗ, ಇಷ್ಟು ಅಪೂರ್ವ ಗುಣಗಳೂ, ಲಾವಣ್ಯವೂ ಇರುವವಳು ಇಂತಹವರ ಮಗಳಾಗಿ ಹೇಗೆ ಹುಟ್ಟಿದಳು ಎಂದು ಸಂದೇಹ ಉಂಟಾಗಬಹುದು. ಆದರೆ ಸ್ವಲ್ಪ ಆಲೋಚಿಸಿದರೆ ಸಂದೇಹ ನಿವಾರಣೆಯಾಗುವುದು. ಏಕೆಂದರೆ ಮುಳ್ಳಿನ

ಗಿಡದಲ್ಲಿ ತಾನೇ ಗುಲಾಬಿ ಹೂವು ಅರಳುವುದು? ಎಂದು ಬರೆದಿದ್ದೇನೆ."

"ನನ್ನನ್ನು ಕೇಳಿದರೆ, ತಂದೆಯನ್ನು ಮುಳ್ಳಿನ ಗಿಡಕ್ಕೆ ಸಮಾನವೆಂದು ಹೇಳಕೂಡದೆಂದು ತೋರುವುದು."

"ಏಕೆ? ತುಂಬ ಅವಮಾನವೆಂದೋ?"

"ಅದಲ್ಲ; ತಂದೆಯನ್ನೇ ಹೂವಿಗೆ ಜತೆಯಾದ ಮುಳ್ಳು ಎಂದು ಹೇಳಿಬಿಟ್ಟರೆ, ಮುಂದೆ ಅವಳಿಗೆ ವಿವಾಹವಾದಾಗ ಅವಳ ಗಂಡನನ್ನು ವರ್ಣಿಸುವುದಕ್ಕೆ ಸರಿಯಾದ ಉಪಮಾನ ಬೇರೆ ಸಿಕ್ಕುವುದಿಲ್ಲವಲ್ಲಾ ಎಂಬ ಯೋಚನೆ."

"ಏನೂ ಯೋಚನೆ ಮಾಡಬೇಡಿ. ಅವಶ್ಯಕತೆಯುಂಟಾದರೆ ಸರಿಯಾದ ಪದವನ್ನು ಅವಳು ಹೇಗಾದರೂ ಕಂಡು ಹಿಡಿದುಬಿಡುತ್ತಾಳೆ. ಆದರೆ ಒಂದು, ಅವಳು ವಿವಾಹ ಮಾಡಿಕೊಳ್ಳುವುದಿಲ್ಲವೆಂದು ತೀರ್ಮಾನಿಸಿದ್ದಾಳೆ. ಅದು ಹೋಗಲಿ. ನಿಮ್ಮ ಕತೆಯನ್ನು ಎಲ್ಲಿಯವರೆಗೆ ಬರೆದಿದ್ದೀರಿ?

"ಈಗ ತಾನೇ ಪ್ರಾರಂಭಿಸಿದ್ದೇನೆ. ಒಂದು ಸಂಸಾರದಲ್ಲಿ ತಂದೆಯೂ ಮಗನೂ ಇರುತ್ತಾರೆ. ಮಗನಿಗೆ ಮದುವೆಯಾಗುವ ವಯಸ್ಸು ಬಂದುಬಿಟ್ಟಿತು. ಆದರೆ ತಂದೆ ಶುದ್ಧ ಮಂಕು. ದೃಷ್ಟಿ ಮಾಂದ್ಯದವರು ಕನ್ನಡಕವನ್ನು ಹಾಕಿಕೊಂಡು ಅದರ ಮೂಲಕ ನೋಡುವಂತೆ, ಅವರು ಪುಸ್ತಕಗಳನ್ನು ಓದಿ ಅವರ ಮೂಲಕ ಪ್ರಪಂಚವನ್ನು ನೋಡುವರು. ಪುಸ್ತಕಗಳಲ್ಲಿ ಬರೆದಿರುವುದು ಮಾತ್ರವೇ ವಾಸ್ತವ ಎಂದು ತಿಳಿದವರು. ಯಾವುದೋ ಒಂದು ಪುಸ್ತಕವನ್ನು ಓದಿಬಿಟ್ಟು ಮಗನಿಗೆ ಸದಾ ಕಾಲವೂ ಬುದ್ಧಿಯನ್ನು ಹೇಳುತ್ತಲೇ ಇರುತ್ತಾರೆ. "ಮಗನೇ! ನೀನು ಏನು ಬೇಕಾದರೂ ಮಾಡು. ಆದರೆ ವಿವಾಹವನ್ನು ಮಾತ್ರ ಮಾಡಿಕೊಳ್ಳಬೇಡ! ವಿವಾಹವೆನ್ನುವುದು ಮನುಷ್ಯನಿಗೆ ಸೌಖ್ಯವನ್ನುಂಟು ಮಾಡುವುದಕ್ಕೋಸ್ಕರ ಮಾಡಿರುವ ಏರ್ಪಾಡಲ್ಲ. ಈ ದುಃಖ ಸಾಗರದಲ್ಲಿ ಯಾವುದೊಂದು ಸುಖವನ್ನೂ ಎದುರು ನೋಡದೆ, ಬಾಳಿನ ದಿನಗಳನ್ನು ಕಳೆಯುವುದಕ್ಕೆ, ಅವಳನ್ನು ಪಳಗಿಸಿ ಇಡುವ ಒಂದೇ ಉಪಾಯವು—"

"ನಿಮ್ಮ ಅಭಿಪ್ರಾಯ ಹೀಗೆಲ್ಲಾ ಇದ್ದರೆ ನನ್ನನ್ನು ಏಕೆ ಮದುವೆ ಮಾಡಿಕೊಳ್ಳಬೇಕಾಗಿತ್ತು?"

"ಅಯ್ಯೋ ದೇವರೆ! ನಾನೇ ಹಾಗೆ ಯೋಚಿಸುವವನು? ಆ ಮಂಕ ಮುದುಕನಲ್ಲವೇ ಆ ರೀತಿ ಯೋಚಿಸಿದ್ದು?"

" ಈ ನಿಮ್ಮ ವೇಷವೆಲ್ಲ ನನ್ನ ಬಳಿ ನಡೆಯದು. ನನ್ನ ಕಥಾನಾಯಕಿ ವಿವಾಹ ಮಾಡಿಕೊಳ್ಳುವುದಿಲ್ಲವೆಂದು ನಾನು ಹೇಳಿದೊಡನೆ ಆ ಮಾತಿನ ಸೇಡು ತೀರಿಸಿಕೊಳ್ಳುವುದಕ್ಕಾಗಿ ಈ ರೀತಿ ಹೇಳುತ್ತಿದ್ದೀರಿ."

" ಇಲ್ಲವೇ ಇಲ್ಲ. ನಾನು ನಿಜ ಸಂಗತಿಯನ್ನು ಹೇಳಲೋ ?"

" ಹೇಳಿ ನೋಡೋಣ. ಆದರೆ ಅದನ್ನು ನಾನು ನಂಬುತ್ತೇನೆಯೋ ಇಲ್ಲವೋ ಅದು ಅನಂತರವೇ ತಿಳಿಯುವುದು."

" ವಿವಾಹದ ವಿಷಯದಲ್ಲಿ ಮೇಲೆ ಹೇಳಿದ ವಾಕ್ಯವನ್ನು ಒಬ್ಬ ಫ್ರೆಂಚ್ ತಾರೆ ಬರೆದಿರುವುದನ್ನು ನಾನು ನಿನ್ನೆಯ ದಿವಸ ತಾನೇ ಓದಿದೆ. ಅದು ಬಹಳ ಚೆನ್ನಾಗಿದ್ದುದರಿಂದ, ಆ ವಾಕ್ಯವನ್ನು ನನ್ನ ಕತೆಯಲ್ಲಿ ಹೇಗಾದರೂ ಉಪ ಯೋಗಿಸಬೇಕೆಂದು ಅದಕ್ಕೆ ತಕ್ಕ ಹಾಗೆ ಈ ಮಂಕು ತಂದೆಯನ್ನು ಸೃಷ್ಟಿಸಿದೆ."

" ಇದೇನೋ ನಿಜಸಂಗತಿ ಹೇಳುವುದು ?........ಮೇಲು ಪಂಗ್ತಿಯಾದ ಒಂದು ವಾಕ್ಯಕ್ಕೋಸ್ಕರ ಒಬ್ಬ ಮನುಷ್ಯನನ್ನು ಸೃಷ್ಟಿಸಿದೆ" ಎಂದು ಹೇಳುವುದು ?

" ಇಲ್ಲದೆ ಹೋದರೆ ಸಾಲಾಗಿ ಎಂಟು ಮರದ ಗೊಂಬೆಗಳನ್ನು ಕತೆಯ ಪಾತ್ರಗಳಾಗಿ ಒಂದಕ್ಕೊಂದು ವ್ಯತ್ಯಾಸ ಇಲ್ಲದಂತೆ ಸೃಷ್ಟಿಸಿಬಿಟ್ಟು, ಅನಂತರ ಅವುಗಳ ಗುಣಗಳನ್ನು ವರ್ಣಿಸುವುದಕ್ಕೆ ತಕ್ಕ ವಾಕ್ಯಗಳು ಸಿಕ್ಕದೆ ಒದ್ದಾಡ ಬೇಕಾಗುವುದು. ನಾನು ಅನುಸರಿಸುವ ರೀತಿಯೇ ಸರಿ. ಅನುಭವದ ಮೇಲೆ ನಿರೂಪಿಸುವುದು" ಎಂದು ಸಾಧಿಸಿದೆ.

" ಅದಕ್ಕೋಸ್ಕರ ಯಾವ ಪುಸ್ತಕದಿಂದ ಯಾವ ವಾಕ್ಯವನ್ನು ಕದಿ ಯೋಣವೆಂದು ಹುಡುಕುತ್ತಲೇ ಇರುವುದೋ ?"

" ಬೇಕಿಲ್ಲ. ಒಂದು ಪಾತ್ರವನ್ನು ಘನವಾದ " ಕೊಂಬು "ಗಳೊಂದಿಗೆ ವರ್ಣಿಸಿಬಿಟ್ಟರೆ ಅದಕ್ಕೆ ಜೀವ ಉಂಟಾಗಿಬಿಡುತ್ತದೆ............ಮುಂದಿನ ವಾಕ್ಯ ಗಳು ನಮಗೇ ಹೊಳೆದುಬಿಡುವುವು. ಅದಕ್ಕೆ ಉದಾಹರಣೆ: ಆ ಮಂಕು ತಂದೆ ತಮ್ಮ ಮಗನೊಡನೆ ಮುಂದೆ ಏನು ಹೇಳುತ್ತಾರೆ ಗೊತ್ತೇ ? ಮಗನೇ, ಮಾತನಾಡುವುದಿಲ್ಲವೆಂದು ಹಟ ಹಿಡಿದಿದ್ದ ಹೆಣ್ಣೊಬ್ಬಳು ಇದ್ದಳೆಂದು ನಾವು ಕೇಳಿರುವುದು ಕತೆಯಲ್ಲಿ ಮಾತ್ರ. ಅವಳನ್ನು ಮಾತನಾಡುವಂತೆ ಮಾಡಿದುದಕ್ಕಾಗಿ ವಿಕ್ರಮಾದಿತ್ಯನು ಅವಳನ್ನೇ ಮದುವೆ ಮಾಡಿಕೊಳ್ಳಬೇಕಾಗಿ

ಬಂತು. ಆದರೆ ಮಾತನಾಡುವ ಹೆಂಗಸನ್ನು ಮಾತನಾಡದ ಹೆಂಗಸನ್ನಾಗಿ ಮಾಡಿದ ರಾಜನನ್ನಾಗಲಿ ದೈವವನ್ನಾಗಲಿ ನಾವು ಕತೆಯಲ್ಲಿ ಕೂಡ ಓದಿದುದಿಲ್ಲ" ಎನ್ನುತ್ತಾರೆ.

ಆಗ, ಲಲಿತ ಈ ಎರಡು ರೀತಿಯ ಹೆಂಗಸರಲ್ಲಿ ಯಾವ ರೀತಿಯ ಹೆಂಗಸಾಗಿ ನಟಿಸಬೇಕೆಂದು ಸ್ವಲ್ಪ ಯೋಚಿಸಿಬಿಟ್ಟು ಮುಖವನ್ನು ತಿರುಗಿಸಿಕೊಂಡು ಮೌನವಾಗಿಯೇ ಎದ್ದು ಹೋಗಿಬಿಟ್ಟಳು.

* * * *

ನಾಲ್ಕು ದಿವಸ ಬಿಡದಂತೆ ಮಳೆ ಹೊಯ್ದು ಎಲ್ಲೂ ಹೊರಡದಂತಾದುದರಿಂದ ಕತೆಯ ವಿಷಯವನ್ನು ಕುರಿತು ನಾನು ಮತ್ತೆ ಮಾತನಾಡತೊಡಗಿದೆ.

"ನಿನ್ನ ಕಥಾನಾಯಕಿ ಈಗ ಏನು ಮಾಡುತ್ತಿದ್ದಾಳೆ" ಎಂದು ಮೆಲ್ಲಗೆ ಕೇಳಿದೆ.

"ಅವಳು ಲೇಡಿ ಡಾಕ್ಟರ್ ಪದವೀಧರಳಾಗಿ ವೈದ್ಯ ವೃತ್ತಿ ಮಾಡುತ್ತಿದ್ದಾಳೆ."

"ಯಾವ ಊರಿನಲ್ಲಿ?"

"ಮದರಾಸನಲ್ಲಿಯೇ........ಯಾತಕ್ಕೆ?"

"ನನ್ನ ಕಥಾನಾಯಕನೂ ಮದರಾಸಿನಲ್ಲಿಯೇ ವಾಸಿಸುತ್ತಾನೆ. ಮದುವೆ ಮಾಡಿಕೊಳ್ಳುವುದಿಲ್ಲವೆಂದು ಶಪಥ ಮಾಡಿದ ಹುಡುಗಿಯೂ, ಮದುವೆ ಮಾಡಿಕೊಳ್ಳಕೂಡದು ಎನ್ನುವ ತಂದೆಯ ಬೋಧನೆಯಿಂದ ಮನಸ್ಸಿನ ಕ್ಷೋಭೆಗೆ ಒಳಗಾಗಿರುವ ಕುಮಾರನೂ ಸಂಧಿಸಿದರೆ ಏನಾಗುತ್ತದೆ ಹೇಳು ನೋಡೋಣ. ಲೋಕಾನುಭವಕ್ಕನುಸಾರವಾಗಿಯೂ, ಕಾವ್ಯನಿಯಮಕ್ಕನುಸಾರವಾಗಿಯೂ ಅವರಿಬ್ಬರ ಶಪಥವೂ ಚೂರು ಚೂರಾಗಿ ಹಾರಿ ಹೋಗಿಬಿಡಬೇಡವೇ?

"ಹಾಗದರೆ ನಾನು ಅವಳನ್ನು ಬೇರೆ ಯಾವುದಾದರೂ ಊರಿಗೆ ಕಳುಹಿಸಿಬಿಡುತ್ತೇನೆ."

"ಅವಳು ಎಲ್ಲಿ ಬೇಕಾದರೂ ಹೋಗಲಿ, ರೈಲು ಗಾಡಿ, ಮೋಟಾರ್ ಕಾರು, ಏರೋಪ್ಲೇನ್ ಇವುಗಳೆಲ್ಲಾ ಇರುವಾಗ ಅವಳನ್ನು ಬೆನ್ನುಹತ್ತಿ ಹೋಗಿ ಅವಳ ಕೈಯ್ಯಲ್ಲಿಯೇ ಔಷಧಿ ತೆಗೆದುಕೊಳ್ಳುವುದರಲ್ಲಿ ಕಥಾನಾಯಕನಿಗೆ ಕಷ್ಟವೇನು? ನಡೆಯುವುದೂ ಹಾಗೆಯೇ.

" ಇದೇನು ಅಕ್ರಮ ! ನಾನು ಒಂದು ಕತೆ ಬರೆದರೆ, ಅದರೊಳಕ್ಕೆ ನಿಮ್ಮ ಕಥಾನಾಯಕ ಬಂದು ಬಲಾತ್ಕಾರವಾಗಿ ಪ್ರವೇಶಿಸುವುದು ! ಇದನ್ನು ಯಾರು ಸಹಿಸುತ್ತಾರೆ ?"

" ನೀನು ಕೋಪಿಸಿಕೊಳ್ಳುವುದು ಇರಲಿ. ಆದರೆ, ಈ ವಿಷಯದಲ್ಲಿ ನಿನ್ನ ಕಥಾ ನಾಯಕಿಯು ಏನು ಯೋಚಿಸುತ್ತಾಳೆ ಎಂಬುದನ್ನು ತಿಳಿದು ಕೊಳ್ಳಬೇಡವೇ ?"

ಲಲಿತ ಸ್ವಲ್ಪ ಹೊತ್ತು ಮೌನವಾಗಿದ್ದುಬಿಟ್ಟು ಸ್ವಲ್ಪ ತವಕದಿಂದ ಹೇಳಿದಳು : " ವಾಸ್ತವವಾಗಿ ಅವಳು ಕೆಲಸ ಮಾಡುವ ವೈದ್ಯಶಾಲೆಯಲ್ಲಿ ಒಬ್ಬ ಬ್ರಹ್ಮಚಾರಿ ಡಾಕ್ಟರ್ ಇದ್ದಾರೆ. ಅವರನ್ನು ಕಂಡಾಗಲೆಲ್ಲ ಅವಳ ಮನಸ್ಸಿನಲ್ಲಿ ಏನೋ ಚಂಚಲತೆ ಉಂಟಾಗುವುದು—"

" ನಾನು ನಿನಗೆ ಮೊದಲೇ ಹೇಳಿದೆನೋ ಇಲ್ಲವೋ ? ನನ್ನ ಕಥಾ ನಾಯಕ ಒಬ್ಬ ಡಾಕ್ಟರ್" ಎಂದು.

" ಡಾಕ್ಟರೇ ? ಇವಳ ಹತ್ತಿರ ಔಷಧಿ ತೆಗೆದುಕೊಳ್ಳುವುದಕ್ಕೆ ಬರುತ್ತಾನೆಂದು ಹೇಳಿದಿರಲ್ಲ ?"

" ಹೌದು ಹೌದು. ಡಾಕ್ಟರೇ ! ಡಾಕ್ಟರುಗಳಿಗೆ ವ್ಯಾಧಿ ಉಂಟಾಗುವುದಿಲ್ಲವೇ ? ಔಷಧಿ ಬೇಡವೇ ?"

" ಅವನಿಗೆ ಏನು ವ್ಯಾಧಿಯಂತೆ ?

" ಹೃದಯ ವ್ಯಾಧಿ. ಮಿಕ್ಕ ವೇಳೆಗಳಲ್ಲೆಲ್ಲಾ ಸ್ವಸ್ಥವಾಗಿರುವ ಅವನ ಹೃದಯ, ಒಬ್ಬ ಸ್ತ್ರೀಯನ್ನು ಕಂಡಾಗ ಮಾತ್ರ ಎರಡರಷ್ಟು ವೇಗದಿಂದಲೂ ಜೋರಿನಿಂದಲೂ ಹೊಡೆದುಕೊಳ್ಳುವುದು. ಅದರಿಂದ ಕಣ್ಣಿಗೆ ಭ್ರಮೆ ಬಂದು ಅವಳಿಗೂ ರಂಭೆಗೂ ಇರುವ ವ್ಯತ್ಯಾಸಗಳು ಒಂದೂ ತಿಳಿಯಲಾರದೆ ಹೋಗುವುದು. ಇನ್ನೂ ಇಂತಹ ಕೆಲವು ಸೂಚನೆಗಳು.

" ಆ ವ್ಯಾಧಿಗೆ ಔಷಧಿ ಯಾವುದೋ ?"

" ಬೇರೆ ಯಾವ ವಿಧದಲ್ಲಿಯೂ ತತ್ಕಾಲನಾದ ಶಾಂತಿ ಕೂಡ ದೊರೆಯುವುದಿಲ್ಲ. ವ್ಯಾಧಿಗೆ ಕಾರಣಗಳಾದ ಸ್ತ್ರೀಯನ್ನು ಮದುವೆ ಮಾಡಿಕೊಳ್ಳುವುದೇ ಔಷಧಿ ಎಂದು ಎಲ್ಲ ಪಂಡಿತರುಗಳೂ ಒಪ್ಪಿಕೊಳ್ಳುತ್ತಾರೆ. ಅಲ್ಲದೆ........"

" ಅಲ್ಲದೆ ಏನು ?"

" ಅಲ್ಲದೆ ನನ್ನ ಕಥಾನಾಯಕರುಗಳೆಲ್ಲ ತಪ್ಪದೆ ಕೊನೆಯ ಪುಟದಲ್ಲಿ

ಕಥಾನಾಯಕಿಯನ್ನು ಮದುವೆ ಮಾಡಿಕೊಳ್ಳುವುದೇ ಸಿದ್ಧಾಂತ. ಅದನ್ನು ನಾನು ಬದಲಾಯಿಸುವುದಕ್ಕಾಗುವುದಿಲ್ಲ."

"ಆದ್ದರಿಂದ ನೀವು ಹೇಳುವುದು........"

"ನಾನು ಹೇಳುವುದು : ಮೊದಲು ಇಬ್ಬರೂ ತಮ್ಮ ತಮ್ಮ ಶಪಥಗಳನ್ನು ಕಟ್ಟಿ ಒರಳಿನಲ್ಲಿ ಕುಟ್ಟಿ ಗಾಳಿಯಲ್ಲಿ ತೂರಿಬಿಡಲಿ; ಎರಡನೆಯದು, ಆ ಮಂಕು ತಂದೆಯನ್ನು ತಮ್ಮ ನೀತಿಯೆಲ್ಲವನ್ನೂ ಆ ಮುಳ್ಳು ಗುತ್ತಿಯಂತಹ ಸಂಬಂಧಿಯ (ಕಥಾನಾಯಕಿಯ ತಂದೆ) ಜೊತೆಯಲ್ಲಿ ಚರ್ಚಿಸುವುದಕ್ಕೆ ಬಿಟ್ಟು, ಇವರಿಬ್ಬರೂ ಮುಂದಲ ಮುಹೂರ್ತದಲ್ಲೇ ಮದುವೆ ಮಾಡಿಕೊಂಡುಬಿಡಲಿ—"

"ಚೆನ್ನಾಗಿ ಮಾಡಿಕೊಳ್ಳಲಂತೇ! ನನಗೇನು? ಆ ರೀತಿ ಏನಾದರೂ ಒಂದು ನಡೆಯುತ್ತದಲ್ಲ ಎಂಬ ಭಯದಿಂದಲೇ ಅವಳನ್ನು ಆಸ್ಪತ್ರೆ ಕೆಲಸದಲ್ಲಿ ಸೇರಿಸುವುದು ನನಗೆ ಇಷ್ಟವಿರಲಿಲ್ಲ. ಆದರೆ ನಾನು ಏನು ಮಾಡಲಿ? ನನ್ನ ಕನಸಿನಲ್ಲೂ ಅರನಿದ್ದೆಯಲ್ಲೂ ಹತ್ತಿರ ಬಂದು ನಿಂತುಕೊಂಡು, "ನನ್ನನ್ನು ಓದಿಸು. ನನಗೆ ಯಾವುದಾದರೂ ಒಂದು ಉದ್ಯೋಗವನ್ನು ಕಲ್ಪಿಸು. ಆಗಲೇ ಸ್ತ್ರೀಗೆ ಗೌರವ ಎಂದು ಹಟ ಹಿಡಿದಳು. ಆ ತರಹದ ಕಟ್ಟಿಗೆ ಸಿಲುಕದ ಒಬ್ಬಳು ಪುಂಡ ಕಥಾನಾಯಕಿಯನ್ನು ಕಟ್ಟಿಕೊಂಡು ನಾನೇನು ಮಾಡಲಿ?"

"ಹೋಗಲಿ, ಇಬ್ಬರೂ ಡಾಕ್ಟರುಗಳು ತಾನೇ. ಒಬ್ಬರಿಗೊಬ್ಬರು ವೈದ್ಯ ಮಾಡಿಕೊಳ್ಳುತ್ತಿದ್ದರೆ ಹೊತ್ತು ಹೋಗಿಬಿಡುವುದು."

"ಈ ರೀತಿ, ನಾನು ಅರ್ಧ ಬರೆದು, ನೀವು ಅರ್ಧ ಬರೆದರೆ 'ಒಂದು ಕತೆಯ ನಾಯಕಿ ಇನ್ನೊಂದು ಕತೆಯ ನಾಯಕನನ್ನು ವಿವಾಹವಾಗಬೇಕಾಗುವುದು! ಈ ರೀತಿ ಇದುವರೆಗೆ ಕಂಡುದೂ ಇಲ್ಲ. ಕೇಳಿದ್ದೂ ಇಲ್ಲ' ಎಂದು ಪತ್ರಿಕೆಯ ಸಂಪಾದಕರು ಆಕ್ಷೇಪಿಸಿದರೋ?"

"ಏನೂ ಆಕ್ಷೇಪಿಸುವುದಿಲ್ಲ. ಅವರು ತಿಳಿದವರು. 'ಸಂಕ್ರಾಂತಿ ಬಂದು ತೈ (ಮಾಘ–ಫಾಲ್ಗುಣ) ಮಾಸ ಹುಟ್ಟಿಬಿಟ್ಟಿತು. ಊರಲ್ಲೆಲ್ಲಾ ಮದುವೆ ಮುಂಜಿ ಇರುವ ಸಮಯದಲ್ಲಿ ಈ ಎರಡು ಕತೆಗಳಿಗೇ ಒಂದು ವಿಧವಾದ ಮದುವೆ ನಡೆದು ಹೋಯಿತು' ಎಂದು ಹೇಳಿದರೆ ಅವರು ಒಪ್ಪಿಕೊಳ್ಳುತ್ತಾರೆ" ಎಂದು ಹೇಳಿದೆ.

ಮೇಲೆ ಹೇಳಿದಂತೆ ಕತೆಗಳನ್ನು ಬರೆದು ಮುಗಿಸಿ ಆಗಿದೆ. ಅವು ಶೀಘ್ರದಲ್ಲೇ ಹೊರಗೆ ಬರುತ್ತವೆ.

# ಅರುವತ್ತು ಮೂವರು

ನನ್ನ ಮನೆ ಮೈಲಾಪುರದಲ್ಲಿ ಪಶ್ಚಿಮ ದಿಕ್ಕಿನ ದೊಡ್ಡ ಮಹಡಿ ಮನೆಗಳ ಬೀದಿಯಲ್ಲಿ ಇರುವುದರಿಂದ ವನಿತಾ ತನ್ನ ಸ್ನೇಹಿತೆ ಲಲಿತಾಂಗಿಯೊಡನೆ ಅಲ್ಲಿಗೆ ಬಂದು ಅಲ್ಲಿ ಇದ್ದು "ಅರುವತ್ತು ಮೂವರು" ಉತ್ಸವ ಬರುವ ವೇಳೆಯಲ್ಲಿ ದರ್ಶನ ಮಾಡುವುದಾಗಿ ಹೇಳಿ ಕಳುಹಿಸಿದಳು. ವನಿತಾ ನನ್ನ ಸ್ನೇಹಿತನ ಸಹೋದರಿ. ಹೆಂಗಸರ ಕಾಲೇಜಿನಲ್ಲಿ ಓದುವುದಕ್ಕೆ ಸೇರಲು ಸ್ವಲ್ಪ ದಿವಸ ಮುಂಚೆ ತಾನೇ ಮದರಾಸಿಗೆ ಬಂದಿದ್ದಳು.

ಅವರನ್ನು ಬರಮಾಡಿಕೊಳ್ಳುವುದಕ್ಕೆ ನಾನು ಆರ್ಭಟದ ಏರ್ಪಾಡುಗಳನ್ನು ಮಾಡಿದೆ; ವನಿತಾವಿಗೆ ಮಾವಿನ ಹಣ್ಣು ಕಂಡರೆ ಬಹಳ ಆಸೆ. ಮೋಹ ಎಂದೇ ಹೇಳಬಹುದು. ಆದುದರಿಂದ ಇನ್ನೂ ಮಾರ್ಚಿ ತಿಂಗಳಾದರೂ ಎಲ್ಲೆಲ್ಲಿಯೋ ಹುಡುಕಿ ಒಂದು ಬುಟ್ಟಿ ತುಂಬ ಹಣ್ಣುಗಳನ್ನು ತೆಗೆದು ಇಟ್ಟೆ. ಸ್ತ್ರೀ ಪುರುಷರ ಸಂಖ್ಯೆ ಸಮವಾಗಿರಲೆಂದು ನನ್ನ ಸ್ನೇಹಿತ ಅಭಿರಾಮನಿಗೆ ಹೇಳಿ ಕಳುಹಿಸಿದೆ. ಅವನು ಬಂದ ಕೂಡಲೇ ಅವನಿಗೆ ಒಂದು ಎಚ್ಚರಿಕೆ ಕೊಟ್ಟೆ. "ಲಲಿತಾಂಗಿಯೂ ವನಿತಾವೂ ಬರುತ್ತಾರೆ. ಈ ಮನೆ ನನ್ನದೆಂದು ಲಲಿತಾಂಗಿಗೆ ತಿಳಿಯದು. ನಿನ್ನದೆಂದು ತಿಳಿದುಕೊಂಡೇ ಇಲ್ಲಿಗೆ ಬರುತ್ತಾಳೆ. ನೀನು ಏನೂ ಹೇಳಬೇಡ. ಅವಳೊಡನೆ ಮಾತನಾಡಲೇಬೇಡ. ವನಿತಾಳೊಡನೆ ಮಾತನಾಡುತ್ತಿರು. ಹಾಗಿಲ್ಲದೆ ನಮ್ಮಿಬ್ಬರ ಮಾತಿನ ಮಧ್ಯದಲ್ಲಿ ತಲೆಹೊಕ್ಕೆಯಾದರೆ ಜೋಕೆ! ಹೆಣ ಬಿದ್ದು ಹೋಗುತ್ತೆ. ಮತ್ತೆ ನಿನ್ನ ಮುಂದಿನ ಜನ್ಮದಲ್ಲೇ ನೀನು ನನ್ನ ಬಳಿ ಕ್ಷಮೆ ಕೇಳಬೇಕು" ಎಂದೆ. ಅವನು ತಲೆ ಅಲ್ಲಾಡಿಸಿದ.

ಸುಮಾರು ನಾಲ್ಕು ಗಂಟೆ ವೇಳೆಗೆ ಅವರಿಬ್ಬರೂ ಬಂದರು. ಲಲಿತಾಂಗಿ ಈ ಸ್ಥಳದಲ್ಲಿ ನನ್ನನ್ನು ನಿರೀಕ್ಷಿಸಿರಲಿಲ್ಲ. ನನ್ನನ್ನು ಕಂಡ ಕೂಡಲೇ ಅವಳ ಮುಖಚರ್ಯೆ ಬದಲಾಯಿಸಿತು. ಸ್ವಲ್ಪ ತುಟಿ ಕಡಿದುಕೊಂಡಳು.

ಲಲಿತಾಂಗಿಯ ಮನಸ್ಸನ್ನು ಕೈಯ್ಯಲ್ಲಿರುವ ನೆಲ್ಲಿಯ ಕಾಯನ್ನು ತಿಳಿಯುವಂತೆ ತಿಳಿಯಬಹುದು.

ನಾನು ಯಾವುದೋ ತಪ್ಪು ಮಾಡಿಬಿಟ್ಟೆನೆಂದೂ ಅದಕ್ಕೋಸ್ಕರ ಇನ್ನು ನನ್ನೊಡನೆ ಮಾತನಾಡಬಾರದೆಂದೂ ಅವಳ ತೀರ್ಮಾನ. ಆದರೆ ನಾಲ್ಕು ಜನ ಸೇರಿರುವ ಸ್ಥಳದಲ್ಲಿ ತನ್ನ ಸಿಟ್ಟನ್ನು ತೋರಿಸಿ ನನ್ನೊಡನೆ ಮಾತ್ರ ಮಾತನಾಡದೆ ಇದ್ದು ನನ್ನನ್ನು ಅವಮಾನಪಡಿಸುವುದು ಅವಳಿಗೆ ಇಷ್ಟವಿಲ್ಲ. ಅಲ್ಲದೆ, ಒಂದು ಕಡೆ ಸಿಟ್ಟು ಇದ್ದರೂ ನನ್ನನ್ನು ಮತ್ತೆ ಸಂಧಿಸುವುದರಲ್ಲಿ ಅವಳಿಗೆ ಸಂತೋಷವೇ ಎಂಬುದನ್ನು ಅವಳಿಂದ ಮುಚ್ಚಿಟ್ಟುಕೊಳ್ಳಲಾಗಲಿಲ್ಲ.

"ದೇವರು ಬರುವ ಹೊತ್ತಿಗೆ ಬಾಗಿಲಿಗೆ ಬಂದು ನೋಡಬಹುದು. ಈಗ ಒಳಕ್ಕೆ ಹೋಗೋಣ" ಎಂದು ಅವರುಗಳನ್ನು ಒಳಕ್ಕೆ ಕರೆದುಕೊಂಡು ಹೋದೆ.

"ಈ 'ಹಾಲ್' ಒಳ್ಳೆ ಶೃಂಗಾರವಾಗಿದೆಯಲ್ಲ! ಇದು ನಿಮ್ಮ ಸ್ವಂತ ಮನೆಯೋ, ಬಾಡಿಗೆ ಮನೆಯೋ?" ಎಂದು ಲಲಿತಾಂಗಿ ಅಭಿರಾಮನನ್ನು ಕೇಳಿದಳು.

ದಢಂ ಎಂದು ಅವಳು ಹೀಗೆ ಒಂದು ಪ್ರಶ್ನೆಯನ್ನು ಹಾಕುತ್ತಲೂ ನನಗೆ ಸಂಕಟವಾಯಿತು. ಅಭಿರಾಮನು, "ಮನೆ ತನ್ನದಲ್ಲ. ನನ್ನದೆಂದು" ಹೇಳಿಬಿಟ್ಟರೆ ಲಲಿತಾಂಗಿ ಏನಾದರೂ ನೆಪ ಹೇಳಿಬಿಟ್ಟು ಒಡನೆ ಹೋಗಿಬಿಡುತ್ತಾಳೋ ಎಂದು ನಾನು ಹೆದರಿದೆ. ಆದುದರಿಂದ ಎರಡು ಅರ್ಥಗಳೂ ಬರುವ ಹಾಗೆ ಮಹಾಸಭೆಗಳಲ್ಲಿನ ಸಂಪ್ರದಾಯದಂತೆ ನಿಜ ಹೇಳುವ ಭಾವನೆಯಿಂದ ತಕ್ಷಣ ನಾನೇ ಉತ್ತರವಿತ್ತೆ.

"ಒಂದು ವಸ್ತುವನ್ನು ಹೊಗಳಿದ ಮೇಲೆ ಅದರ ಒಡೆಯನು ಯಾರೆಂದು ಕೇಳಿದರೆ ಅವನು ಏನು ತಾನೆ ಹೇಳಬಲ್ಲ? ಒಬ್ಬ ಆಂಗ್ಲ ಕವಿ ಬರೆದಿರುವಂತೆ 'ಮೂಗೇನೋ ಸಾಧಾರಣವಾದ ಮೂಗೇ. ಆದರೆ ಅದು ನನ್ನದೇ ಮೂಗು' ಎಂದು ಹೇಳಬಹುದು" ಎಂದೆ.

"ಯಾವ ಮೂಗು?" ಎಂದು ವನಿತಾ ಕೇಳಿದಳು.

ವನಿತಾ ಚಿನ್ನದಂತಹ ಹುಡುಗಿ. ಲಲಿತಾಂಗಿ ಪಕ್ಕದಲ್ಲಿಲ್ಲದೆ ಹೋದರೆ ರೂಪವತಿ ಎಂದೇ ಹೇಳಬಹುದು. ಆದರೆ ಬುದ್ಧಿವಂತಿಕೆಗಾಗಿ ಅವಳು ಎಂದೂ ಬಹುಮಾನವನ್ನು ಹೊಂದಿದುದಿಲ್ಲ.

"ಯಾವ ಮೂಗೇ? ಗಿಳಿ ಮೂಗು" ಎಂದು ಹೇಳಿದೆ. ಅಷ್ಟಕ್ಕೆ ನಿಲ್ಲಿಸಲಿಲ್ಲ. "ಯಾವ ಗಿಳಿ? 'ಪಚ್ಚೆ ಗಿಳಿ' ಯಾವ ಪಚ್ಚೆ? ಎಲೆ ಪಚ್ಚೆ.

ಯಾವ ಎಲೆ? ಅಗೋ ಮಾವಿನ ಹಣ್ಣುಗಳನ್ನು ತುಂಬಿ ಒಂದು ಎಲೆಯಲ್ಲಿ ಇಟ್ಟಿದೆಯಲ್ಲಾ ಆ ಎಲೆ" ಎಂದು ಮುಗಿಸಿ ದೂರದಲ್ಲಿ ಒಂದು ಮೂಲೆಯಲ್ಲಿ ಇದ್ದ ಮೇಜನ್ನು ತೋರಿಸಿದೆ.

ವನಿತಾ "ಮಾವಿನಹಣ್ಣೇ"? ಎಂದು ನಗುತ್ತಾ ಆ ಮೂಲೆಗೆ ಅಂಬಿನಂತೆ ಹೋದಳು. ಅಭಿರಾಮನು, ಅವನಿಗೆ ಕೊಟ್ಟಿದ್ದ ಪಾತ್ರಕ್ಕನುಸಾರವಾಗಿ ನಮ್ಮನ್ನು ಬಿಟ್ಟುಬಿಟ್ಟು ಅವಳನ್ನನುಸರಿಸಿ ಹೋದನು. ನಾವಿಬ್ಬರೇ ಸೋಫಾದಲ್ಲಿ ಕುಳಿತಿರುವಂತಾಯಿತು. ಇಲ್ಲಿಯವರೆಗೆ ನನ್ನ ಅಭಿಲಾಷೆ ನೆರವೇರಿತ್ತು.

* * * *

ಲಲಿತಾ ಸ್ವಲ್ಪ ಹೊತ್ತು ಮಾತನಾಡದೆ ಕುಳಿತಿದ್ದಳು. "ಏನಾಗುತ್ತದೋ ನೋಡೋಣ" ಎಂದು ನಾನೂ ಬಾಯಿ ತೆರೆಯಲಿಲ್ಲ. ಹೆಂಗಸಾದುದರಿಂದ ಈ ಮೌನವನ್ನು ಸಹಿಸಲಾರದ ಕಾರಣದಿಂದಲೋ ಅಥವಾ "ನಿನ್ನ ಜತೆ ಬಿಟ್ಟುಬಿಟ್ಟೆ ಟೂಟೂ" ಎನ್ನುವ ಮಕ್ಕಳತನದ ಭಾವನೆಯಲ್ಲಿರಕೂಡದೆಂಬ ಯೋಚನೆಯಿಂದಲೋ ಅವಳೇ ಮಾತಿಗಾರಂಭಿಸಿದಳು.

"ವನಿತಾ, ಪಾಪ! ಒಂದು ಸಣ್ಣ ಪ್ರಶ್ನೆ ಕೇಳಿದರೆ ಅವಳ ಮೇಲೆ ಯಾತಕ್ಕೆ ಅಷ್ಟೊಂದು ಮಾತು ಬೀಸಿದಿರಿ?"

"ಅವಳು ಏಕೆ ಮಾತನಾಡಬೇಕಾಗಿತ್ತು?" ಎಂದು ನಾನೂ ಪ್ರತಿಯಾಗಿ ಕೇಳಿದೆ.

"ಮಾತನಾಡುವುದೂ ತಪ್ಪೇ?"

"ಹೌದು. ಅದರಿಂದ ನಾನು ನಿನ್ನನ್ನೇ ನೋಡುತ್ತಿರುವುದನ್ನು ಬಿಟ್ಟು ಅವಳ ಕಡೆಗೆ ನನ್ನ ಮುಖವನ್ನು ತಿರುಗಿಸಬೇಕಾಯಿತಲ್ಲವೇ?"

"ಹೌದು ಹೌದು; ನನ್ನನ್ನೇ ನೋಡಬೇಕೆಂದು ಅಷ್ಟು ಆಸೆ ಇರುವವರಾಗಿದ್ದರೇ........" ಎಂದು ಹೇಳಿ ತಟಕ್ಕನೆ ನಿಲ್ಲಿಸಿದಳು.

"ಇದ್ದರೆ........? ಮುಂದಕ್ಕೆ ಹೇಳು" ಎಂದೆ.

"ಏನೂ ಇಲ್ಲ" ಎಂದು ಮಾತನ್ನು ಬದಲಿಸಿದಳು. "ವನಿತಾಗೆ ಮಾತ್ರ ಮಾವಿನ ಹಣ್ಣು. ನನ್ನ ಮೇಜಿನಲ್ಲಿ ಹೂವು ಮಾತ್ರವೋ"?

ಈ ಮೇಜಿನ ಮೇಲೆಯೂ ಮಾವಿನ ಹಣ್ಣುಗಳನ್ನು ಇಟ್ಟಿದ್ದರೆ ವನಿತಾವನ್ನು ಈ ಸ್ಥಳ ಬಿಟ್ಟು ಹೇಗೆ ಕಳುಹಿಸುವುದಕ್ಕಾಗುತ್ತಿತ್ತು? ನಾವುಗಳಿಬ್ಬರೇ

ಬೇರೆಯಾಗಿ ಹೇಗೆ ಮಾತನಾಡಲು ಸಾಧ್ಯವಾಗುತ್ತಿತ್ತು ? ಆದರೆ ಆ ಕಾರಣ ವನ್ನು ಲಲಿತೆಗೆ ಹೇಗೆ ಹೇಳುವುದು ?

" ಹಣ್ಣನ್ನು ಒಂದು ಚಿಕ್ಕ ಮಗುವಿಗೂ ಕೊಡಬಹುದು. ಸ್ನೇಹಿತರಿಗೂ ಕೊಡಬಹುದು. ಆದರೆ ದೇವತೆಯನ್ನು ಪೂಜಿಸಬೇಕಾದರೆ ಅದಕ್ಕೆ ಹೂವು ತಾನೇ ಸರಿಯಾದುದು ?" ಎಂದೆ.

" ನನಗೆ ಸ್ತೋತ್ರವೇ ಸೇರುವುದಿಲ್ಲ " ಎಂದಳು.

" ನನಗೂ ಹಾಗೆಯೇ ! ಯಾರಾದರೂ ನನ್ನನ್ನು ಸುಂದರನೆಂದಾಗಲೀ ಬುದ್ಧಿಶಾಲಿ ಎಂದಾಗಲೀ ಹೇಳಿದರೆ, ಸ್ತೋತ್ರ ಕೇಳುವುದರಲ್ಲಿ ನನಗೆ ಕೋಪ ಎಂದು ತಕ್ಷಣ ಅವರಿಗೆ ತಿಳಿಸಿಬಿಡಬೇಕೆಂದು ನಿಶ್ಚಯಿಸಿಕೊಂಡಿದ್ದೇನೆ. ಆದರೆ—" ಎಂದು ನಿಟ್ಟುಸಿರು ಬಿಟ್ಟೆ.

" ಆದರೆ ಏನು ?"

" ಆದರೆ ಒಬ್ಬರಾಗಲೀ ನನಗೆ ಆ ರೀತಿ ಹೇಳುವುದೇ ಇಲ್ಲವಲ್ಲ ! ನಾನೇನು ಮಾಡಲಿ !" ಎಂದು ಮತ್ತೊಂದು ನಿಟ್ಟುಸಿರು ಬಿಟ್ಟೆ.

" ಅಯ್ಯೋ ಪಾಪ !" ಎಂದು ಅವಳು ನಕ್ಕುಬಿಟ್ಟಳು. ಹಾಗೆ ಬೇಕಾದರೆ ನಾನು ಆ ರೀತಿ ಹೇಳುತ್ತೇನೆ " ಎಂದಳು.

" ಬರಿಯ ಕನಿಕರದಿಂದ ಹೇಳಿದರೆ ಏನು ಪ್ರಯೋಜನ ? ಮಂತ್ರಗಳನ್ನು ಉಚ್ಚರಿಸುವ ರೀತಿಯಲ್ಲಿ ಹೇಳಿದರಲ್ಲವೇ ಉಪಯೋಗ ಉಂಟು ?"

" ಅದು ಯಾವ ರೀತಿ ? ನನಗೆ ತಿಳಿಯದಲ್ಲ !"

" ಮನಃಪೂರ್ವಕವಾಗಿ ನಂಬಿಕೆಯಿಂದ ಹೇಳಬೇಕು. ಉದಾಹರಣೆಗೆ, ' ಇನ್ನು ಸ್ವಲ್ಪ ಹೊತ್ತಿಗೆಲ್ಲ ದೇವರು ಬೀದಿಯಲ್ಲಿ ಬರುತ್ತದೆ. ಆದರೆ ಈಗಲೇ ಈ ಮನೆಗೆ ಒಬ್ಬಳು ದೇವತೆ ಪ್ರವೇಶಿಸಿ ಆಯಿತು' ಎಂದು ನಾನು ಹೇಳುವುದು ಮನಃಪೂರ್ವಕವಾಗಿ. "

" ಇದೆಲ್ಲ ಸ್ತೋತ್ರವಲ್ಲದೆ ಮತ್ತೇನೋ ? ಮೋಸಗೊಳಿಸುವುದಕ್ಕೆ ಹೇಳುವ ಸುಳ್ಳು ಮಾತುಗಳು ತಾನೇ ? ಈ ಸುಳ್ಳು ಮಾತುಗಳನ್ನೆಲ್ಲ ಅದೋ ವನಿತಾವಿಗೆ ಹೋಗಿ ಹೇಳಿ !"

" ಮೊದಲು ಅವಳು ಮಾವಿನ ಹಣ್ಣು ನುಂಗುವುದು ಬಿಟ್ಟು ನನ್ನ ಹೊಗಳಿಕೆಯನ್ನು ಕಿವಿ ಕೊಟ್ಟು ಕೇಳಬೇಕಲ್ಲಾ !"

" ಆದ್ದರಿಂದ ಸುಳ್ಳೇ ಎಂದು ಒಪ್ಪಿಕೊಳ್ಳುತ್ತಿದ್ದೀರಲ್ಲವೇ ?"

" ಅವಳನ್ನು ಕುರಿತು ಆ ಮಾತುಗಳನ್ನೆಲ್ಲಾ ಹೇಳಿದ್ದರೆ ಸುಳ್ಳೇ ; ಎರಡ ನೆಯದು, ಹೇಳುವವರಿಗೆ ಉತ್ಸಾಹ ಬೇಡವೇ ? ಅವಳು ನನ್ನ ಕನಸಿನ ಹುಡುಗಿಯಲ್ಲ."

" ಅವಳಲ್ಲೇನು ಕೊರತೆಯಿದೆ ?"

ನಾನು ಉತ್ತರ ಹೇಳದೆ ಲಲಿತಾಂಗಿಯನ್ನೂ ವನಿತಾವನ್ನೂ ಮತ್ತೆ ಮತ್ತೆ ನೋಡಿದೆ.

" ಆಕಾಶದಲ್ಲಿ ಕೋಟೆ ಕಟ್ಟಿಕೊಂಡು, ಪ್ರಪಂಚದಲ್ಲಿ ಕಾಣದೆ ಇರುವ ವಳು ತಾನೇ ನಿಮ್ಮ ಕನಸಿನ ಹುಡುಗಿಯೋ ಏನೋ ?"

" ಹಾಗೇನೂ ಇಲ್ಲ. ಅವಳನ್ನು ನೀನು ಸುಲಭವಾಗಿ ನೂರಾರು ಕಡೆ ಗಳಲ್ಲಿ ನೋಡಬಹುದು."

" ನೂರಾರು ಕಡೆಯೇ ? ಸಿನಿಮಾ 'ಸ್ಟಾರ್' ಇರಬಹುದು" ಎಂದು ಸ್ವಲ್ಪ ಬೇಸರಿಕೆಯಿಂದಲೇ ಲಲಿತಾ ಕೇಳಿದಳು-

" ನನ್ನ ಕನಸಿನ ಹೆಣ್ಣನ್ನು ಕಾಣಬೇಕಾದರೆ ' ಸ್ಟಾರ್ 'ಗಳನ್ನೂ ನಕ್ಷತ್ರಗಳನ್ನೂ ಹುಡುಕುವುದಕ್ಕಾಗಿ ನೀನು ತಲೆ ಎತ್ತಿ ನೋಡಬೇಕಾದುದಿಲ್ಲ."

"ನನಗೆ ಗೊತ್ತು, ನಿಮ್ಮ ಸ್ತೋತ್ರ ಪಾಠ. ಹೋಗಿ ಒಂದು ಕನ್ನಡಿಯಲ್ಲಿ ನೋಡು ಎಂದು ತಾನೇ ಹೇಳುತ್ತೀರಿ ?''

'' ಇಲ್ಲ, ಇಲ್ಲ. ತಲೆ ಬಗ್ಗಿಸಿ ಬಾವಿಯ ನೀರಿನಲ್ಲಿ ನೋಡು ಎಂದು ಮುಗಿಸುತ್ತಿದ್ದೆ."

'' ನಾನೇನು ಶ್ರೀ ವಿಲ್ಲಿಪುತ್ತೂರು ಆಂಡಾಳೇ ಬಾವಿಯಲ್ಲಿ ಚೆಲುವು ನೋಡಿಕೊಳ್ಳುವುದಕ್ಕೆ ?''

'' ಆದರೆ ತುಂಬ ಬಗ್ಗಬೇಡ. ಬಿದ್ದುಬಿಡುತ್ತೀ.''

"ಅಬ್ಬ !"

" ಹಾಗೇನಾದರೂ ಚೆನ್ನಾಗಿ ಬಗ್ಗಿ ನೋಡಬೇಕಾದರೆ ನನಗೆ ಹೇಳಿ ಕಳುಹಿಸಿದರೆ ನನ್ನಿಂದಾಗುವ ಸಹಾಯ ಮಾಡುತ್ತೇನೆ.''

'' ಏನು ಸಹಾಯ ?''

'' ಬಿದ್ದುಬಿಡದಂತೆ ನಿನ್ನನ್ನು ಹಿಡಿದುಕೊಳ್ಳುತ್ತೇನೆ.''

" ಬಹಳ ವಂದನೆ. ನಾನು ಹೇಗಾದರೂ ನೋಡಿಕೊಳ್ಳುತ್ತೇನೆ."

" ಈ ದಿನವೇ ನೋಡಿಕೊಳ್ಳುವುದಾದರೆ, ಈ ಮನೆಯಲ್ಲೇ ಒಂದು ಬಾವಿ ಇದೆ. ಹೋಗಿ ನೋಡೋಣವೇ? ನಾನು ಶ್ರಮವನ್ನ ಲೆಕ್ಕಿಸದೆ ಬರಲು ಸಿದ್ಧನಾಗಿದ್ದೇನೆ."

" ಈ ಕೊನಷ್ಟೈ ಮಾತುಗಳನ್ನೆಲ್ಲ ಯಾವ ಶಾಲೆಯಲ್ಲಿ ಕಲಿತು ಕೊಂಡಿರಿ?"

" ಎಲ್ಲಾ ಮನೆಯಲ್ಲೆ. ವಿರಾಮ ವೇಳೆಗಳಲ್ಲೆಲ್ಲಾ, ಯಾರು ಏನು ಹೇಳಿದರೆ ಅದಕ್ಕೆ ಏನು ಉತ್ತರ ಹೇಳುವುದು ಎಂದು ಒಂದು ಸಾವಿರ ಬಗೆಯ ಕೇಳಿಕೆಗಳಿಗೆ ಮೊದಲೇ ಯೋಚಿಸಿ ಉತ್ತರ ಬರೆದು ಬರೆದು ಕಂಠಪಾಠ ಮಾಡಿ ಬಿಟ್ಟದ್ದೇನೆ. ಆದ್ದರಿಂದ ಈ ರೀತಿ ಸರಸರನೆ ಹೇಳಿ ಕೇಳುವವರನ್ನು ಭ್ರಮಿಸುವಂತೆ ಮಾಡುವುದು ನನಗೆ ಬಹಳ ಸುಲಭ. ಆದರೆ ಕೆಲವು ವೇಳೆ, ತಪ್ಪಿ ಹೋಗಿ ಒಂದು ಪಾಠಕ್ಕೆ ಬದಲಾಗಿ ಬೇರೆ ಒಂದು ಪಾಠವನ್ನ ಒಪ್ಪಿಸಿ ಬಿಡುತ್ತೇನೆ. ಆಗ ಕೇಳುವವರು ಹತ್ತರಷ್ಟು ಭ್ರಮಿಸಿ ಓಡಿಯೇಬಿಡುತ್ತಾರೆ."

" ಏನೇನೋ ಕತೆಯನ್ನೆಲ್ಲಾ ಹೇಳುತ್ತೀರಲ್ಲಾ!"

" ಇದೆಲ್ಲಾ ಕತೆಯೇ? ಹಾಗಾದರೆ ಒಂದು ಕತೆಯನ್ನು ಹೇಳಿದರೆ ಮಾತ್ರ ನಿಜ ಎಂದು ಒಪ್ಪಿಕೊಳ್ಳುವೆಯೆಂದು ತೋರುತ್ತದೆ. ನಾನು ನಿನಗೊಂದು ಕತೆ ಹೇಳಲೇ?"

" ಯಾವ ಕತೆ?"

" ಬಹಳ ಸ್ವಾರಸ್ಯವಾದ ಕತೆ. ಎಲ್ಲದಕ್ಕಿಂತ ಪುರಾತನ ಕತೆಯಾಗಿ ಮೊದಲು ಮೊದಲು ಪ್ರಪಂಚದಲ್ಲಿ ಹುಟ್ಟಿದುದು. ಬಹಳ ಉದ್ದವಾದುದು. ಅದರಲ್ಲಿ ಮೊದಲನೆಯ ಅಧ್ಯಾಯದಲ್ಲಿ ಒಬ್ಬ ಪುರುಷನು ಒಬ್ಬ ಸ್ತ್ರೀಗೆ 'ನನಗೆ ನಿನ್ನ ಮೇಲೆ ಪ್ರೀತಿ' ಎಂದು ತಿಳಿಸಬಯಸುತ್ತಾನೆ. ಎರಡನೆಯ ಅಧ್ಯಾಯದಲ್ಲಿ..........."

" ನನಗೇನೂ ಬೇಕಿಲ್ಲ ಈ ಕತೆ" ಎಂದು ಅವಸರದಿಂದ ಹೇಳಿದಳು. " ಈ ರೀತಿ ಏನೂ ಇಲ್ಲದ ಒಂದು ನವೀನ ಕತೆಯೇ ಸಾಕು" ಎಂದಳು.

ಅಷ್ಟು ಹೊತ್ತಿಗೆ ಅಭಿರಾಮ ತಾನಿದ್ದ ಮೂಲೆಯಿಂದಲೇ ಏನೋ ಗೊಣಗುಟ್ಟಿದನು. ನಾನು ಅವನನ್ನು ನೋಡಿ ಹುಬ್ಬಿನಿಂದ ಸನ್ನೆ ಮಾಡಿದೆ.

ಅವನು ಮಾತನಾಡದೆ 'ಹಾಲ್' ಬಿಟ್ಟು ಹೊರಗೆ ಹೋಗಿಬಿಟ್ಟ. ವನಿತೆಯೂ ಅವನನ್ನು ಅನುಸರಿಸಿದಳು.

* * * *

ನಾನು ನನ್ನ ಕತೆಯನ್ನು ಪ್ರಾರಂಭಿಸಿದೆ: "ಒಂದಾನೊಂದು ಊರಿನಲ್ಲಿ ವಾಸುದೇವನೆಂಬ ಒಬ್ಬ ಯುವಕನಿದ್ದನು. ಒಂದು ದಿನ ಅವನು ಪುಸ್ತಕದ ಅಂಗಡಿಗೆ ಹೋದನು. ಅಲ್ಲಿ ಹೊಸ ವರುಷದ ಅಭಿನಂದನೆಯ ಪತ್ರವೊಂದನ್ನು ತೆಗೆದುಕೊಂಡು ಅದರ ಹಿಂದುಗಡೆ ತನ್ನ ಮನಃಪೂರ್ತಿಯಾಗಿ ಬರೆದು ತನ್ನ ಪ್ರೇಯಸಿಗೆ ಆ ಕಾಗದವನ್ನು ಟಪಾಲಿನಲ್ಲಿ ಕಳುಹಿಸಿದನು.

"ಇದೇ ಕತೆಯೋ! ಬರಿಯ ಸುಳ್ಳು ಸುಳ್ಳು.........ನೀವೇ ನನ್ನ ಸ್ನೇಹಿತೆ ವಿಶಾಲಾಕ್ಷಿಗೆ ಹಾಗೆ ಬರೆದು ಕಳುಹಿಸಿದಿರಿ."

ಈ ಮಾತಿನಿಂದ ನನಗೆ ಸಿಡಿಲು ಬಡಿದಂತಾಯಿತು.

"ಅಯ್ಯೋ ದೇವರೇ! ಅವಳಿಗೆ ನಾನು ಯಾತಕ್ಕೆ ಕಳುಹಿಸುತ್ತೇನೆ? ನೀನು ಹಾಗೆ ತಿಳಿದುಕೊಂಡಿದ್ದೀಯಾ?" ಎಂದು ಕೇಳಿದೆ.

"ನನಗೆಲ್ಲಾ ಗೊತ್ತು. ಅವಳಿಗೆ ನೀವು ಕಳುಹಿಸಿದ್ದ ಕಾಗದವನ್ನು ಅವಳೇ ನನಗೆ ಓದಿ ತೋರಿಸಿದಳು."

"ಹರ ಹರಾ! ಅವಳಿಗೆ ಬಂದ ಕಾಗದವೇ! ನನಗೇನೂ ತೋರುವು ದಿಲ್ಲವಲ್ಲ! ಆ ವಾಸುದೇವ ಎಲ್ಲಾದರೂ ಹಾಳಾಗಲಿ. ನನ್ನ ಸ್ವಂತ ಸಂಕಟ ವನ್ನಲ್ಲವೇ ಮೊದಲು ಪರಿಹರಿಸಿಕೊಳ್ಳಬೇಕಾದುದು!"

"ಒಂದು ಸಂಕಟವೂ ಇಲ್ಲ. ನೀವು ಮಾಡಿರುವುದೆಲ್ಲ ನನಗೆ ಚೆನ್ನಾಗಿ ಗೊತ್ತು."

"ನಾನು ಸತ್ಯವಾಗಿ ಹೇಳುತ್ತೇನೆ ಲಲಿತಾ! ಆ ಕಾಗದ ನಿನಗೇ ನಾನು ಆ ರೀತಿ ಬರೆದು ಕಳುಹಿಸಿದುದು. ಕವರಿನ ಮೇಲಿನ ವಿಳಾಸವನ್ನು ನೀನು ನೋಡಲಿಲ್ಲವೇ?"

"ಅವಳು ಅದನ್ನು ಹರಿದು ಎಸೆದುಬಿಟ್ಟಳು."

"ನಿನಗೆ ಬಂದ ಕವರನ್ನು ಅವಳು ಹೇಗೆ ಹರಿದಳು? ಪೋಲೀಸರನ್ನು ಕರೆಯಬೇಕೆನ್ನುವಂತಿದೆಯಲ್ಲಾ! ಅಂಚೆಯವನು ಬಂದಾಗ ನೀನೂ ಇರಲಿಲ್ಲವೋ?"

ನಾವಿಬ್ಬರೂ ಒಂದೇ ಕೊಠಡಿಯಲ್ಲಿ ಇರುವುದರಿಂದ ನಮ್ಮ ಕಾಗದಗಳನ್ನೆಲ್ಲಾ ಕೆಲಸದವಳು ತೆಗೆದು ಮೇಜಿನ ಮೇಲೆ ಇಡುವುದು ಪದ್ಧತಿ. ನಾವು ರೂಮಿಗೆ ಬಂದಾಗ ತೆಗೆದುಕೊಳ್ಳುತ್ತೇವೆ."

"ನೀವು ತರಗತಿ ಬಿಟ್ಟ ಮೇಲೆ ಒಟ್ಟಿಗೆ ತಾನೇ ಕೊಠಡಿಗೆ ಬರುತ್ತೀರಿ?"

"ಇಲ್ಲ. ವಿಶಾಲಾಕ್ಷಿಗೆ ಮೂರು ಗಂಟೆಯಾದ ಮೇಲೆ ಪಾಠವೇ ಇಲ್ಲ. ನನಗೆ ಪ್ರತಿ ದಿನವೂ ನಾಲ್ಕು ಗಂಟೆಯವರೆಗೆ ಪಾಠ ಉಂಟು."

"ಆದ್ದರಿಂದ ನಿತ್ಯವೂ ನಿಮ್ಮ ಕೊಠಡಿಗೆ ಮೊದಲು ಬರುವಳು ಅವಳೇಯೋ"

"ಹೌದು."

"ಹೋಗಲಿ. ಕವಚೇನೋ ಹಾಳಾಯಿತು. ಕಾಗದದಲ್ಲಿಟ್ಟ ಈ ಚಿತ್ರ ಕವಿತೆಯನ್ನು ಓದಿದಳೋ?? ಎಂದು ಕೇಳಗಿರುವಂತೆ ಬರೆದು ಓದಿದೆ:–

* "ಲತೈಯೈಪ್ಪೋಲ್ ಲಾವಣ್ಯಮಾಯ್ ಎನ್
ಲಿಪಿಯುನ್‌ರನ್ ಪೊನ್‌ತಾಳಡಿ ಕೀಳ್
ತೇವಿಯೇ ನೀ ತೆಂಬೆನ ಕೀವಾಯ್"

"ಎಲ್ಲಾ ಓದಿ ತೋರಿಸಿದಳು. ನನಗೆ ಯಾವುದೂ ಬೇಕಾಗಲಿಲ್ಲ. ಅವಳಿಗೆ ಬರೆದುದನ್ನು ಈಗ ನನಗೇ ಬರೆದುದಾಗಿ ಬದಲಾಯಿಸುವುದಕ್ಕೆ ಪ್ರಯತ್ನಿಸುತ್ತಿದ್ದೀರೋ?"

ಲಲಿತಾಂಗಿ ಬಾಯಲ್ಲಿ ಹಾಗೆ ಹೇಳಿದರೂ ತನ್ನ ಮನಸ್ಸಿನಲ್ಲಿ ಸಂದೇಹ ಹುಟ್ಟಿಬಿಟ್ಟಿತು ಎಂಬುದನ್ನು ಮುಚ್ಚಿಟ್ಟುಕೊಳ್ಳಲಾಗಲಿಲ್ಲ.

"ನನ್ನ ಮಾತಿನಲ್ಲಿ ಯಾಕೆ ಹೀಗೆ ಅಪನಂಬಿಕೆ? ನಾನು ವಿಶಾಲಾಕ್ಷಿಯೊಡನೆ ನಿಂತು ಎಂದಾದರೂ ಮಾತನಾಡಿರುವುದನ್ನು ನೋಡಿರುವೆಯಾ? ಪ್ರಮಾಣವಾಗಿ ಹೇಳುತ್ತೇನೆ! ಅದಿರಲಿ. ಈ ಮೂರು ಸಾಲುಗಳನ್ನು ದಯವಿಟ್ಟು ಗಮನಿಸಿ ನೋಡು. ಇದನ್ನು ನೀನೇ ಓದಿದ್ದರೆ, ಸಾಲುಗಳ ಮೊದಲಕ್ಷರಗಳನ್ನು ಕೂಡಿಸಿದಾಗ ಯಾವ ಮಾತು ಆಗುವುದೆಂಬುದು ನಿನಗೆ ಗೊತ್ತಾಗುತ್ತಿದ್ದಿತು."

ನಾನು ಅಲ್ಲಿಯೇ ಬರೆದು ತೋರಿಸಿದುದನ್ನು ಅವಳು ಗಮನಿಸಿ ನೋಡಿದಳು. 'ಲಲಿತೇ' ಎಂದು ಗೊಣಗುಟ್ಟಿದಳು. ಅವಳಿಗೆ ಸ್ವಾಭಾವಿಕವಾದ

---

* ಹೇ ದೇವಿ ಲತೆಯಂತೆ ಲಾವಣ್ಯಮಯವಾದ ನಿನ್ನ ಸ್ಪೃಹಣೀಯ ಚರಣ ನನ್ನ ಲಿಪಿಗೆ ಏಳಿಗೆ ಕೊಡಲಿ

ಮುಗಳು ನಗೆ ಉದಯವಾಯಿತು. ಆ ಮುಗುಳು ನಗೆಯಿಂದ ಅವಳ ಕೆನ್ನೆಗಳಲ್ಲೂ ಸಣ್ಣ ಗುಳಿಗಳು ಕಾಣ ಬಂದುವು. ನಾನು ಅವುಗಳನ್ನೇ ನೋಡುತ್ತಿದ್ದೆ.

ಲಲಿತ ನಿಟ್ಟುಸಿರು ಬಿಟ್ಟಳು. ದುಃಖದ ನಿಟ್ಟುಸಿರಲ್ಲ. ಯಾವುದೋ ಒಂದು ಅಸಾಧ್ಯ ಭಾರವನ್ನು ತಲೆಯ ಮೇಲಿಂದ ಇಳಿಸಿದಂತೆ ತೋರುತ್ತಿತ್ತು.

ಮುಗ್ಧೆಯಾದ ನನ್ನ ಲಲಿತ! "ಎರಡು ಮೂರು ತಿಂಗಳಿಂದ ನಾನು ಎಷ್ಟು ಸಂಕಟಪಟ್ಟಿದ್ದೇನೆಂಬುದು ನಿಮಗೆ ಗೊತ್ತೇ? ಸರಿ, ಆ ಕಾಗದಕ್ಕೆ ನನ್ನಿಂದ ನಿಮಗೆ ಉತ್ತರ ಬರದೆ ಹೋಗಲು ನೀವು ಮತ್ತೆ ಯಾಕೆ ಬರೆಯದೆ ಇದ್ದುಬಿಟ್ಟರಿ?"

"ಒಂದೇ ಎರಡೇ, ಗೊತ್ತೇ? ಎಷ್ಟು ಕಾಗದಗಳನ್ನು ಬರೆದೆ? ಎಲ್ಲಾ ಅವಳ ಕೈಯ್ಯಲ್ಲೇ ಸೇರಿರಬೇಕು. ನೀನೂ ಸಮುದ್ರ ತೀರಕ್ಕೆ ಬರುವುದನ್ನು ನಿಲ್ಲಿಸಿಬಿಟ್ಟೆ. ಹುಡುಗಿಯರ ಹಾಸ್ಟೆಲಿಗೆ ನಾನು ಬರುವಂತಿಲ್ಲ. ನಿನ್ನ ಅಜ್ಜಿಯ ಮನೆಯಲ್ಲಿ ಹೋಗಿ ವಿಚಾರಿಸಿದರೋ, "ಪರೀಕ್ಷೆಯ ಸಮಯ ಹತ್ತಿರ ಬಂದುಬಿಟ್ಟುದರಿಂದ, ರಜಾ ದಿವಸಗಳಲ್ಲಿ ಈ ಮನೆಗೆ ಬರುವ ಅಭ್ಯಾಸವನ್ನೇ ಬಿಟ್ಟುಬಿಟ್ಟಳು." ಎಂದು ಒಂದೇ ಸಮನೆ ಜವಾಬು ಬಂತು. ನೀನು ನನ್ನ ಮೇಲೆ ಕೋಪಿಸಿಕೊಂಡಿದ್ದೀ ಎಂಬುದು ಸ್ಪಷ್ಟವಾಯಿತೇ ವಿನಃ, ಕಾರಣವನ್ನು ಕಂಡು ಹಿಡಿಯುವುದಕ್ಕಾಗಲೀ, ನಿನ್ನನ್ನು ಸಂಧಿಸಿ ಸಮಾಧಾನ ಪಡಿಸುವುದಕ್ಕಾಗಲೀ ಮಾರ್ಗವಿರಲಿಲ್ಲ."

"ಎಲ್ಲಾ ಅವಳೇ ಈ ರೀತಿ ಮಾಡುವಂತೆ ನನಗೆ ಹೇಳಿ ಕೊಟ್ಟಳು. 'ನಿನ್ನೊಡನೆ ಪ್ರೇಮ ನಟಿಸಿಬಿಟ್ಟು ನನಗೆ ಹೀಗೆ ಪ್ರೇಮ ಪತ್ರ ಬರೆದಿದ್ದಾರಲ್ಲ, ನೋಡು. ಇನ್ನು ಆ ವಂಚಕರ ಮುಖವನ್ನೇ ನೋಡಬೇಡ' ಎಂದು ಹೇಳಿ ಈ ಉಪಾಯಗಳನ್ನೆಲ್ಲಾ ಹೇಳಿಕೊಟ್ಟಳು. ಆ ದುಷ್ಟರಾಕ್ಷಸಿ ಹೀಗೆ ದ್ರೋಹ ಮಾಡುತ್ತಾಳೆಂದು ನಾನು ಖಂಡಿತ ಭಾವಿಸಿರಲಿಲ್ಲ."

"ಹೋದುದು ಹೋಗಲಿ; ಈ ದಿನ ನಿನ್ನ ಉದಾರಬುದ್ಧಿ ಹೊರಬಿತ್ತು. ನನ್ನನ್ನು ಈ ಮನೆಯಲ್ಲಿ ಕಂಡೊಡನೆ ನೀನು ಓಡಿ ಹೋಗದೆ ನನ್ನ ತಪ್ಪುಗಳನ್ನು ಮನ್ನಿಸಿ ಮೊದಲಿನಂತೆ ಸಹಜವಾಗಿ ಮಾತನಾಡಿಸಿದೆಯಲ್ಲ!"

"ಪರವಾಗಿಲ್ಲ. ನಿಮ್ಮೊಡನೆ ಮಾತನಾಡುತ್ತಿರಬೇಕೆಂದರೆ ಅದು ಅಷ್ಟು ಕಠಿಯಾದ ಕೆಲಸವೇ? ಆದರೂ ಆ ರಾಕ್ಷಸಿ ನನ್ನನ್ನು ಹೀಗೆ ಕಷ್ಟಪಡಿಸಬೇಕಾದುದಿರಲಿಲ್ಲ."

"ತುಲಸೀ ಎಲೆಯನ್ನೂ, ಕಕ್ಕೆಪತ್ರೆಯನ್ನೂ ಹೊಸಕಿದರೇನೇ ಅವುಗಳ ಸ್ವಭಾವ ಗುಣವಾದ ವಾಸನೆಯನ್ನು ಹೊರಗೆಡಹುತ್ತವೆಯಂತೆ; ಹೆಂಗಸರೂ ಹಾಗೇಯೋ?" ಎಂದು ಹೇಳುತ್ತಲೇ ಅವಳ ಎರಡು ಕೈಗಳನ್ನೂ ಹಿಡಿದು ಕೊಂಡೆ.

"ನನ್ನ ಕೈ ಏನು ತುಲಸೀ ಎಲೆಯೋ ಅಥವಾ ಕಕ್ಕೆಪತ್ರೆಯೋ" ಎಂದು ಕೇಳಿದಳು.

"ನನ್ನ ಅಂತರಂಗದ ಅಭಿಪ್ರಾಯ ಬೇಕೆಂದರೆ ಎರಡೂ ಅಲ್ಲ. ಗುಲಾಬಿ ಮೊಗ್ಗು ಎಂದು ನನ್ನ ಭಾವನೆ" ಎಂದೆ.

* * * *

ವನಿತಾ ಓಡುತ್ತ ಹಾಲಿನೊಳಕ್ಕೆ ಪ್ರವೇಶಿಸಿದಳು. ಅಭಿರಾಮನೂ ಅವಳ ಹಿಂದೆಯೇ ಬಂದನು.

"ಬಾ, ಹೋಗೋಣ, ಹಾಸ್ಟೆಲಿಗೆ. ಹೊತ್ತಾಗಿ ಹೋಯಿತು" ಎಂದು ವನಿತಾ ಲಲಿತೆಯನ್ನು ಕರೆದಳು.

"ದೇವರು ಬರುವುದನ್ನು ನೋಡಬೇಡವೆ?" ಎಂದು ಲಲಿತಾ ಕೇಳಿದಳು.

"ಓ ಹೊ ಹೋ!" ಎಂದು ವನಿತಾ ಗಟ್ಟಿಯಾಗಿ ನಕ್ಕಳು. "ನಿಮ್ಮಿಬ್ಬರ ಮಾತಿನ ಸ್ವಾರಸ್ಯದಲ್ಲಿ ದೇವರು ಬಂದು ಹೋದುದು ಕೂಡ ತಿಳಿಯಲಿಲ್ಲವೇ? ದೇವರನ್ನು ನೋಡದೇ ಒಳಗೆ ಕುಳಿತುಬಿಟ್ಟಿರಾ?"

"ಓಹೊ ಹೋ!" ಎಂದು ನಾನೂ ಪ್ರತಿಯಾಗಿ ನಕ್ಕು ಬಿಟ್ಟೆ; "ನಿಮ್ಮಿಬ್ಬರಿಗೂ ನಡೆದ ಮಾತಿನ ಸ್ವಾರಸ್ಯದಲ್ಲಿ ನಾವು ಪಕ್ಕದಲ್ಲಿ ಬಂದು ನಿಲ್ಲಲಿಲ್ಲವಲ್ಲಾ ಎಂದು ಕೂಡ ಗಮನಿಸದೆ, ಈಗ ನೀವು ಮಾತ್ರ ಸ್ವಾಮಿಯನ್ನು ನೋಡಿದಿರೆಂದು ವಾದಿಸುತ್ತಿದ್ದೀರಾ? ಎಲ್ಲವನ್ನೂ ನಿಮ್ಮಣ್ಣನ ಹತ್ತಿರ ಹೇಳಿ ಬಿಡುತ್ತೇನೆ, ನೋಡು."

"ಸರಿ, ಬಾ ಲಲಿತಾ, ಇವರು ಯಾವಾಗಲೂ ಈ ರೀತಿ ಏನಾದರೂ ಹೇಳುತ್ತಲೇ ಇರುತ್ತಾರೆ. ಈ ಗಲಾಟೆಯಲ್ಲಿ ಹೇಗೆ ಹೋಗಿ ಹಾಸ್ಟೆಲ್ ಸೇರುವುದು. ಹೊತ್ತಾಗಿಬಿಟ್ಟರೆ ರಾತ್ರಿ ಊಟವೂ ಸಿಕ್ಕುವುದಿಲ್ಲವಲ್ಲ."

"ಬೇಡ" ಎಂದೆ ನಾನು; "ನಿಮಗೆಲ್ಲಾ ಈ ದಿವಸ ರಾತ್ರಿ ಈ ಮನೆ ಯಲ್ಲೇ ಔತಣದ ಊಟ. ಲಲಿತೆಯ ಅಜ್ಜಿಯೂ ಬರುತ್ತಾರೆ."

"ಏನು ವಿಶೇಷ?" ಎಂದಳು ವನಿತಾ.

"ಸಣ್ಣದಾಗಿ ಒಂದು ನಿಶ್ಚಿತಾರ್ಥ" ಎಂದೆ. ಅವರಿಬ್ಬರೂ ತಮ್ಮ ಆನಂದವನ್ನು ಸೂಚಿಸಿದರು.

"ಔತಣವನ್ನು ಅಭಿರಾಮನ ಮನೆಯಲ್ಲಿ ಯಾಕೆ ಇಟ್ಟುಕೊಳ್ಳಬೇಕು?" ಎಂದಳು ಲಲಿತಾ.

"ಅಭಿರಾಮನ ಮನೆಯೇ? ಇದು ನನ್ನ ಮನೆಯಲ್ಲ!"

"ಅಭಿರಾಮನ ಮನೆಗೆ ಹೋಗೋಣ ಎಂದು ಹೇಳಿಕೊಂಡು ವನಿತಾ ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದಳಲ್ಲಾ?"

"ಅಯ್ಯಯ್ಯೋ, ನಿನ್ನ ಸ್ನೇಹಿತೆ ವಿಶಾಲಾಕ್ಷಿ ಒಂದು ವಿಧದಲ್ಲಿ ಮೋಸ ಮಾಡಿದಳು. ನಿನ್ನ ಮತ್ತೊಬ್ಬಳು ಸ್ನೇಹಿತೆ ವನಿತಾ ನನ್ನ ಮನೆಯನ್ನೇ ಕಿತ್ತು ಕೊಡುವುದಕ್ಕೇ ನೋಡುತ್ತಾಳೆ. ಏನಾದರೂ ಅಭಿರಾಮನನ್ನು ವಿವಾಹ ಮಾಡಿಕೊಳ್ಳಬೇಕೆಂದು ಯೋಚಿಸಿದ್ದಾಳೋ ಏನೋ? ಅವನಿಗೆ ಆಸ್ತಿ ಸೇರಿಸುವ ತಂತ್ರ ಮಾಡುತ್ತಾಳೆ."

"ಏನು ಪಟಿಂಗತನ! ಏನು ಪಟಿಂಗತನ!" ಎಂದು ವನಿತಾ ಆರಂಭಿಸಿ ಬಿಟ್ಟಳು; "ನೀವೇ ಅಲ್ಲವೆ? ಲಲಿತೆಗೆ ಹೀಗೆ ಹೇಳಿ ಅವಳನ್ನು ಹೇಗಾದರೂ ಇಲ್ಲಿಗೆ ಕರೆದುಕೊಂಡು ಬರಬೇಕೆಂದು ನನ್ನನ್ನು ನಿರ್ಬಂಧಿಸಿದ್ದು"

"ನಾನು ನನ್ನ ಆತುರಕ್ಕಾಗಿ ಏನಾದರೂ ಹೇಳಿದರೂ ಕೂಡ, ನಿನ್ನನ್ನೇ ನಂಬಿರುವ ಸ್ನೇಹಿತೆಯನ್ನು ನೀನು ಮೋಸಗೊಳಿಸುವುದೇ? ಈ ಬಾಲ್ಯದಲ್ಲೇ ಇಷ್ಟು ಮೋಸವೇ? ಕಲಿಕಾಲದ ಮಹಿಮೆ!" ಎಂದು ತಲೆ ಅಲ್ಲಾಡಿಸಿದೆ.

ವನಿತಾ ಏನೂ ಉತ್ತರ ಹೇಳದೆ ಎಳೆಯ ಮಗುವಿನಂತೆ ನನ್ನನ್ನು "ವೆವ್ವೆ ವ್ವೆ ವ್ವೇ" ಎಂದು ಹಾಸ್ಯ ಮಾಡಿದಳು.

"ಚಿಂತೆಯಿಲ್ಲ, ವನಿತಾ, ಆ ಮೋಸವನ್ನು ನಾನು ಕ್ಷಮಿಸಿಬಿಟ್ಟಿದ್ದೇನೆ" ಎಂದು ಲಲಿತೆ ಹೇಳಿದಳು.

"ಅವಳ ಮಾತನ್ನು ನಂಬಬೇಡ, ವನಿತಾ" "ನಾವಿಬ್ಬರೂ ಬೆಳಿಗ್ಗೆ ಚಿನ್ನ ಬೆಳ್ಳಿ ಅಂಗಡಿಗೆ ಹೋಗುವಾಗ ನಿನ್ನನ್ನು ಕಟ್ಟಿ ಎಳೆದುಕೊಂಡು ಹೋಗಿ ನಿನ್ನ ಎರಡು ಕೈಗಳಿಗೂ ಚಿನ್ನದ ಬಳೆಗಳನ್ನು ತೊಡಿಸುತ್ತಾಳೋ ಇಲ್ಲವೋ ನೀನೇ ನೋಡುವಿಯಂತೆ" ಎಂದೆ.

---

# ಅರ್ಧ ಮುಗಿದ ಕತೆಗಳು

ಮಿತ್ರ ಬಲರಾಮು— ಏನು ಅರ್ಧ ಮುಗಿದ ಕತೆಗಳೆ? ಅವುಗಳಿಂದ ಯಾರಿಗೆ ಏನು ಉಪಯೋಗ?

ಕೊನಷ್ಟೈ— ಈಗ ಅರ್ದಂಬರ್ದವಾಗಿಲ್ಲ. ಪುರಾಣಗಳಲ್ಲಿ ಸರಿಯಾಗಿ ವಿವರಿಸದೆ, ಮುಗಿಸದೆ ಬಿಟ್ಟುಬಿಟ್ಟರು. ಈಗ ಅವುಗಳನ್ನು—

ಬಲರಾಮು— ಅವುಗಳನ್ನು ನೀನು ಪುರಾಣಕ್ಕೆ ಸಮನಾಗಿ ಪೂರ್ತಿ ಮಾಡಿಬಿಟ್ಟಿರುವೆನೆಂಬುದು ನಿನ್ನ ಭಾವನೆಯೋ?

ಕೊನಷ್ಟೈ—ಆಗಿ,ಹೋಗಿ ಪುರಾಣಕ್ಕೇ ಸಮನಾಗಿರಬೇಕೇ? ಅದಕ್ಕಿಂತ ಮೇಲಾಗಿಯೇ—

ಬಲರಾಮು— ಆಹಾ! ನಿನ್ನ ವಿನಯವೇ!

ಕೊನಷ್ಟೈ— ಆಧುನಿಕ ರಸಭರಿತ ಕಾದಂಬರಿಗೇ ಸಮವಾಗಿರುತ್ತೆ. ಓದಿ ನೋಡಿದರೆ ತಿಳಿಯುತ್ತೆ.

## ಯಯಾತಿಯ ಯೌವನ

ಅಸುರರುಗಳಿಗೆಲ್ಲಾ ಗುರುಗಳು ಶುಕ್ರಾಚಾರ್ಯರು. ಅವರ ಮಗಳು ದೇವಯಾನಿ. ಕೆಲವು ವಿಷಯಗಳಲ್ಲಿ ತಂದೆಯಂತೆಯೇ. ಮೊದಲನೆಯದಾಗಿ ಸೌಂದರ್ಯದಲ್ಲಿ. ಶುಕ್ರಾಚಾರ್ಯರಿಗೆ ಅವರ ಚಿಕ್ಕಂದಿನಲ್ಲಿ ಯಾವುದೋ ಒಂದು ಆಪತ್ತಿನಿಂದ ಒಂದು ಕಣ್ಣು ಹೋಯಿತೇ ವಿನಹ ಅವರು ಇನ್ನೆಲ್ಲ ವಿಧದಲ್ಲಿಯೂ ತುಂಬು ರೂಪುಳ್ಳವರು. ಆ ಕಾಲದಲ್ಲಿಯೇ ಅವರು ಒಂದು "ತಾರೆ"ಯಾಗಿ ಹೊಗಳಲ್ಪಟ್ಟವರು. ಅವರ ಅಪೂರ್ವ ಶೋಭೆಯನ್ನು ನಾವು ಪ್ರತಿ ದಿನವೂ ಆಕಾಶದಲ್ಲಿ ನೋಡುತ್ತೇವೆ. ಲಾವಣ್ಯದಲ್ಲಿ ಅವರಿಗೆ ತಕ್ಕ ಹೆಣ್ಣು ದೇವಯಾನಿ. ಶುಕ್ರಾಚಾರ್ಯರಿಗೆ ಯಾವಾಗಲಾದರೊಮ್ಮೆ ಕೋಪಾವೇಶ ಬಂದುಬಿಡುವುದುಂಟು. ಬಂದು ಬಿಟ್ಟರೆ ಕೋಪವನ್ನು ಅಡಗಿಸುವ ಯೋಚನೆಯನ್ನೇ ಅವರು ಅರಿಯರು. "ಹಿಡಿ ಶಾಪವನ್ನು!" ಎಂದೇ ಗರ್ಜಿಸುವರು. ಈ ವಿಷಯದಲ್ಲಿಯೂ ಕೂಡ ಹೆಣ್ಣು ದೇವಯಾನಿ ತಂದೆಯಂತೆಯೇ.

ದೇವಯಾನಿಗೆ, 'ದಿನಕ್ಕೊಂದು ಕೋಪ 'ಎನ್ನುವುದೇ ಸಂಪ್ರದಾಯವಾಗಿ ಬಿಟ್ಟಿತ್ತು. ಕೆಲವು ಸಮಯಗಳಲ್ಲಿ ತಂದೆಯಂತೆ ಶಪಿಸಿಯೂ ಶಪಿಸುವಳು.

ದೇವಯಾನಿ ಎಳೆಯ ವಯಸ್ಸಿನಲ್ಲಿಯೇ, ಶುಕ್ರಾಚಾರ್ಯರ ಶಿಷ್ಯನಾದ ಕಚನಲ್ಲಿ ಪ್ರೇಮಗೊಂಡಳು. ತನ್ನ ಸೌಂದರ್ಯದಲ್ಲಿ ಪೂರ್ಣ ನಂಬಿಕೆ ಉಳ್ಳವಳಾಗಿದ್ದುದರಿಂದ, ತನ್ನನ್ನು ವಿವಾಹ ಮಾಡಿಕೊಳ್ಳುವಂತೆ ಅವನನ್ನು ಕೇಳಿ ಆತುರಿಸಿದಳು. ಅವನಾದರೋ, "ನೀನು ನನ್ನ ಗುರುಪುತ್ರಿಯಾದುದರಿಂದ ನನ್ನ ಸಹೋದರಿಗೆ ಸಮಾನ. ನಿನ್ನನ್ನು ನಾನು ಮದುವೆ ಮಾಡಿಕೊಳ್ಳಲಾರೆ" ಎಂದು ಪ್ರತ್ಯುತ್ತರ ಕೊಟ್ಟನು. ಹೀಗೆ ತನ್ನ ಬೇಡಿಕೆಯನ್ನು ತಿರಸ್ಕರಿಸಿ, ತನ್ನನ್ನು ಅವಮಾನಪಡಿಸಿದ್ದಕ್ಕಾಗಿ, ದೇವಯಾನಿ ಒಡನೆ ಅವನನ್ನು ಶಪಿಸಿದಳು. ಅವನೂ, ಶುಕ್ರಾಚಾರ್ಯರಿಗಿದ್ದ ಪ್ರಭಾವವುಳ್ಳವನಾದುದರಿಂದ, ಪ್ರತಿಯಾಗಿ ಅವಳನ್ನು ಶಪಿಸಿದನು. "ನೀನು ಬ್ರಾಹ್ಮಣ ಕನ್ಯೆಯಾಗಿದ್ದೂ, ಇಷ್ಟು ಅಹಂಕಾರ ತೋರಿಸುತ್ತಿದ್ದೀ. ಒಬ್ಬ ಕ್ಷತ್ರಿಯನನ್ನೇ ಗಂಡನನ್ನಾಗಿ ಪಡೆ" ಎಂದು ಶಾಪ ಕೊಟ್ಟನು.

ಅಂದು ಮೊದಲು, ದೇವಯಾನಿಗೆ ದೇವಸ್ಥಾನದಲ್ಲಿನ ಪೂಜೆಯಂತೆ ದಿವಸವೂ ಮೂರು ಬಾರಿ ಕೋಪಿಸಿಕೊಳ್ಳುವುದು ಅಭ್ಯಾಸವಾಯಿತು.

ಅಸುರರುಗಳಿಗೆ ಗುರುವಲ್ಲವೇ ಶುಕ್ರಾಚಾರ್ಯರು? ಅವರುಗಳಿಗೆಲ್ಲಾ ಅರಸ ಒಬ್ಬನಿರುವನಲ್ಲಾ; ಅವನ ಹೆಸರು ವೃಷಪರ್ವ. ಅವನ ಮಗಳು ಶರ್ಮಿಷ್ಟೆ. ಅವಳಿಗೂ ದೇವಯಾನಿಯಷ್ಟೇ ವಯಸ್ಸು. ರೂಪದಲ್ಲಿಯೂ ಕೋಪದಲ್ಲಿಯೂ ಒಂದು ಕೈ ಹೆಚ್ಚೇ ಸರಿ. ನೋಡುವುದಕ್ಕೇನೋ ಇಬ್ಬರೂ ಸ್ನೇಹಿತೆಯರಂತಿದ್ದರು.

ದೇವತೆಗಳು ಯಾವ ಸಮಯದಲ್ಲಿ ಎಲ್ಲಿ ಬೇಕಾದರೂ ಹೋಗಬಹುದಲ್ಲವೇ? ಒಂದು ದಿನ ಇಬ್ಬರೂ ಸ್ನಾನ ಮಾಡುತ್ತಿದ್ದಾಗ, ವಾಯುದೇವನು ನದೀ ತೀರಕ್ಕೆ ಬಂದು, ಅವರುಗಳು ಬೇರೆಬೇರೆಯಾಗಿ ಬಿಚ್ಚಿ ಇಟ್ಟಿದ್ದ ಉಡುಪುಗಳನ್ನು ಚದುರಿಸಿ, ಕೆಲವನ್ನು ಸ್ಥಳ ಬದಲಾಯಿಸಿ ಇಟ್ಟುಬಿಟ್ಟನು. ಕೇವಲ ಒಬ್ಬ ಮನುಷ್ಯ ಆ ರೀತಿ ಮಾಡಿದರೆ, ಅದಕ್ಕೆ ಸರಿಯಾದ ದೂಷಣೆ, ಫಲ ಉಂಟೇ ಉಂಟು. ಒಬ್ಬ ದೇವತೆ ಆ ರೀತಿ ಮಾಡಿದರೋ,—ಆದರೆ ಅದನ್ನು ನಾನು ಯಾಕೆ ಹೇಳಬೇಕು? ನಾಳೆ ನನ್ನ ತಲೆಯ ಮೇಲೆ 'ಸ್ವಾಭಾವಿಕ

ವಾಗಿ' ಒಂದು ತೆಂಗಿನ ಮರವನ್ನು ಬೀಳಿಸುವ ಶಕ್ತಿಯುಳ್ಳವರು ವಾಯು ದೇವರು. "ಏನೋ ಅವರ ಕ್ರೀಡೆ, ಹುಡುಗಾಟ, ಹೀಗೆ ನಡೆಯಿತು" ಎಂದು ಮಾತ್ರ ಮರ್ಯಾದೆಯಾಗಿ ಹೇಳಿಬಿಡುತ್ತೇನೆ.

ವಾಯುದೇವನ ಈ ಕ್ರೀಡೆಯ ಫಲ ಏನಾಯಿತೆಂದರೆ, ತೀರಕ್ಕೆ ಬಂದೊಡನೆ ಶರ್ಮಿಷ್ಠೆ ದೇವಯಾನಿಯ ಉಡುಪುಗಳನ್ನು ತನ್ನದೆಂದು ತಿಳಿದು ಅದನ್ನು ಧರಿಸಲು ತೆಗೆದುಕೊಂಡಳು. ಒಡನೆಯೇ, ದೇವಯಾನಿಯು ಕೋಪಾಗ್ನಿ ಹತ್ತಿಕೊಂಡುಬಿಟ್ಟಿತು. ಶರ್ಮಿಷ್ಠೆಯನ್ನು ಬೈದಳು. ಪ್ರತಿಯಾಗಿ ಶರ್ಮಿಷ್ಠೆಯೂ ಬೈದಳು. ಒಬ್ಬರನ್ನೊಬ್ಬರು ಬಾಯಿಗೆ ಬಂದಂತೆ ಬೈದಾಡಿದರು. ಅನೇಕ ವಿಷಯಗಳಲ್ಲಿ ದೇವಯಾನಿ ಶರ್ಮಿಷ್ಠೆಗೆ ಸಮಾನಳಾದರೂ ಒಂದು ವಿಚಾರದಲ್ಲಿ ಶರ್ಮಿಷ್ಠೆಯೇ ಹೆಚ್ಚು. ಅವಳಿಗೆ ದೇಹಬಲ ಜಾಸ್ತಿ. ದೇವಯಾನಿಗೆ ಬಾಲ್ಯ ದಲ್ಲಿಯೇ ಶುಕ್ರಾಚಾರ್ಯರು ಮಾಡಿರಬೇಕಾಗಿದ್ದ ಚಿಕಿತ್ಸೆಯನ್ನು ಅಂದು ಶರ್ಮಿಷ್ಠೆ ನೆರವೇರಿಸಿದಳು. ಕಪಾಲಕ್ಕೆ ಎತ್ತಿ ಎತ್ತಿ ಬಾರಿಸಿದಳು. ಅಷ್ಟಕ್ಕೇ ನಿಲ್ಲಿಸಲಿಲ್ಲ. ಅಲ್ಲಿಯೇ ಒಂದು ಬಾವಿಯಲ್ಲಿ ಕೈ ಕಾಲು ಕಟ್ಟಿ ತಳ್ಳಿಬಿಟ್ಟಳು.

ಅದೃಷ್ಟವಶಾತ್, ಬಾವಿಯಲ್ಲಿ ಮುಂಡಿಯುದ್ದ ಮಾತ್ರ ನೀರು ಇತ್ತು. ಬಾವಿಯೊಳಗಿನಿಂದ ದೇವಯಾನಿ ಕೂಗಿಕೊಂಡಳು. ಅವಳ ಧ್ವನಿಗೆ ಸರಿಯಾಗಿ ಶರ್ಮಿಷ್ಠೆ ಮೇಲುಗಡೆ ನಿಂತುಕೊಂಡು ತಾನೂ ಕೂಗಿದಳು. "ಹೇ ತಾತ, ಹೇ ತಾತ!" (ಅಪ್ಪಾ ಅಪ್ಪಾ) ಎಂದು ದೇವಯಾನಿ ಕೂಗಿಕೊಂಡಳು. "ರೇ ರೇ ಪಾಂಥ" (ಎಲೈ ದಾರಿಗನೇ) ಎಂದು ಶರ್ಮಿಷ್ಠೆ ಕೂಗಿದಳು. ಇಬ್ಬರಲ್ಲಿ ಶರ್ಮಿಷ್ಠೆಯೇ ಜೋರಾಗಿ ಕೂಗಿದಳು. ಅವಳ ಕೂಗೇ ಫಲ ಕೊಟ್ಟಿತು.

ಚಂದ್ರವಂಶದ ಅರಸರುಗಳಲ್ಲಿ ಐದನೆಯ ರಾಜನಾದ ಯಯಾತಿ ಮಹಾ ರಾಜನು, ವಿಧಿವಶದಿಂದ ಸಮೀಪದಲ್ಲೇ ಬೇಟೆಯಾಡುತ್ತಿದ್ದವನು, ಈ ಕೂಗನ್ನು ಕೇಳಿ ಓಡಿ ಬಂದನು. ತತ್‌ಕ್ಷಣ ವಿಷಯವನ್ನು ಅರಿತುಕೊಂಡನು. ಒಳ್ಳೆಯ ಯೌವನ, ಬಲ ಎಲ್ಲವೂ ಇತ್ತು. ಬಾವಿಯೊಳಕ್ಕೆ ಕೈ ನೀಡಿ ದೇವಯಾನಿ ಯನ್ನು ಹೊರಕ್ಕೆ ಎತ್ತಿ ಕರೆದುಕೊಂಡನು.

ಈ ಕಾಲದ ಸಿನಿಮಾ 'ತಾರೆ' ಯಾಗಿದ್ದರೆ ದೇವಯಾನಿ ಅವರ ಮೈ ಮೇಲೆಯೇ ಒರಗಿ ಮೂರ್ಛೆ ಹೋಗಿಬಿಡುತ್ತಿದ್ದಳು. ನಾಟಕ ರಂಗದಲ್ಲಿ ರಾಣಿ ಯಾಗಿದ್ದರೆ, ಅವಳು ಮೂರ್ಛೆ ಹೋಗದೆ, ಪಕ್ಕದಲ್ಲಿದ್ದ ಸಖಿಯೊಡನೆ,

"ಇವರು ಯಾರೋ ? ಯಾವ ಊರೋ ? ಹೆಸರೇನೋ?'' ಎಂದು ಪದ ಹಾಡಿ ಕೇಳುತ್ತಿದ್ದಳು. ದೇವಯಾನಿ ಇವೆರಡನ್ನೂ ಮಾಡಲಿಲ್ಲ. ಯಯಾತಿಯನ್ನು ಕುರಿತು, '' ನಾನು ಅನ್ಯ ಸ್ತ್ರೀ. ನೀನು ಯಾವ ಮನಸ್ಸಿನಿಂದ ನನ್ನನ್ನು ಮುಟ್ಟಿ ಹೊರಕ್ಕೆ ಎಳೆದೆ ?'' ಎಂದು ಕೇಳಿದಳು. ಆ ಅದ್ಭುತ ಪ್ರಶ್ನೆಗೆ ಉತ್ತರವನ್ನು ಹೇಳಲಾಗದೆ, ಕೈಕೈ ಹಿಸುಕಿಕೊಳ್ಳುತ್ತಾ ಯಯಾತಿ ಮಿಟಮಿಟನೆ ನೋಡುತ್ತ ನಿಂತುಕೊಂಡನು.

ಸ್ವಲ್ಪ ಹೊತ್ತಿನೊಳಗೆ ಗುಂಪು ಸೇರಿಬಿಟ್ಟಿತು. ಶುಕ್ರಾಚಾರ್ಯರು, ವೃಷಪರ್ವ, ಮಂತ್ರಿಗಳು ಎಲ್ಲಾ ಸೇರಿದರು. ನ್ಯಾಯ ತೀರ್ಮಾನಿಸಿ ದೇವ ಯಾನಿಯನ್ನು ಸಮಾಧಾನಪಡಿಸಿದರು. ಅವಳನ್ನು ಯಯಾತಿಯೇ ಮದುವೆ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದರು. ಈ ರೀತಿ ಕಚ ಇತ್ತ ಶಾಪ ನೆರ ವೇರಿತು. ಶರ್ಮಿಷ್ಠೆ ಮಾಡಿದ ಅಪರಾಧಕ್ಕೆ ದಂಡನೆಯಾಗಿ, ಅವಳು ಸ್ವಲ್ಪ ಕಾಲ ದೇವಯಾನಿಯ ದಾಸಿಯಾಗಿ ಕೆಲಸ ಮಾಡಬೇಕೆಂದೂ ವಿಧಿಸಿದರು. ಯಯಾತಿ ತನ್ನ ಕುದುರೆಯ ಮೇಲೆ ದೇವಯಾನಿಯನ್ನು ಎತ್ತಿ ಕುಳ್ಳಿರಿಸಿ ಕೊಂಡು, ಶುಕ್ರಾಚಾರ್ಯರ ಆಶೀರ್ವಾದವನ್ನು ಪಡೆದು ತನ್ನ ದೇಶಕ್ಕೆ ಹೊರ ಟನು. ಇನ್ನೊಂದು ಕುದುರೆಯ ಮೇಲೆ ಶರ್ಮಿಷ್ಠೆ ಹಿಂಬಾಲಿಸಿದಳು.

ಶುಕ್ರಾಚಾರ್ಯರು ತಮ್ಮ ಆಶ್ರಮಕ್ಕೆ ಹಿಂತಿರುಗಿದರು. 'ದೇವಯಾನಿ ಇಲ್ಲದೆ ಆಶ್ರಮವೆಲ್ಲ ಶೂನ್ಯವಾಗಿದೆ' ಎಂದು ಅವರ ಮನಸ್ಸಿನಲ್ಲಿ ಒಂದು ಯೋಚನೆ; ಅವರ ಜತೆಯಲ್ಲಿಯೇ 'ಈಗ ತಾನೇ ಬಿರುಗಾಳಿ ಬೀಸಿ ನಿಂತಂತಾಗಿ ಶಾಂತವಾಗಿದೆ' ಎಂದು ಮತ್ತೊಂದು ಬಾರಿ ಸಮಾಧಾನ. ಈ ರೀತಿ ಚಂಚಲ ವಾದ ಮನಸ್ಸನ್ನು ಹಿಡಿತದಲ್ಲಿಡುವುದಕ್ಕಾಗಿ ಅವರು ಕಟುವಾದ ತಪಸ್ಸು ಮಾಡಲು ಕುಳಿತುಬಿಟ್ಟರು.

ದೇವಯಾನಿಯು ಯಯಾತಿಯ ಪಟ್ಟಮಹಿಷಿಯಾಗಿ ಬೆಳಗಿದಳು. ರಾಜ್ಯದಲ್ಲಿ ಎಲ್ಲರಿಗೂ (ದೊರೆಗೆ ಸಹ) ಅವಳನ್ನು ಕಂಡರೆ ಸ್ವಲ್ಪ ಭೀತಿ. ಇನ್ನು ಮೇಲೆ, ಬಾವಿಯಲ್ಲಿ ಬಿದ್ದವರನ್ನು, ಆಳುಗಳನ್ನು ಬಿಟ್ಟು ಮೇಲಕ್ಕೆ ಎತ್ತಿಸುವುದೇ ಹೊರತು, ತಾನೇ ನೇರವಾಗಿ ಬದುಕಿಸುವುದಿಲ್ಲವೆಂದು ಯಯಾತಿ ಪ್ರತಿನಿತ್ಯವೂ ದಿನಕ್ಕೆ ಒಂದು ಬಾರಿಯಾದರೂ ಮನಸ್ಸಿನಲ್ಲಿ ಶಪಥ ಮಾಡಿ ಕೊಳ್ಳುವನು.

ಹಿರಿಯರ ತೀರ್ಪಿನ ಪ್ರಕಾರ, ನಿರ್ದಿಷ್ಟ ಕಾಲದವರೆಗೆ ಶರ್ಮಿಷ್ಠೆ ದಾಸಿಯ ಕೆಲಸ ಮಾಡಿದಳು. ಸೌಂದರ್ಯದಲ್ಲಿ ಅವಳು ದೇವಯಾನಿಗೆ ಸಮಾನಳಾದವಳೆಂದು ಮೊದಲೇ ಹೇಳಿದೆನಲ್ಲವೇ ? ಈ ಸತ್ಯವನ್ನು ಯಯಾತಿಯೂ ಒಂದು ದಿನ ಕಂಡನು. ಅವಳ ದಂಡನೆಯ ಕಾಲ ಕಳೆಯುತ್ತಲೂ, ಶರ್ಮಿಷ್ಠೆಯನ್ನು ರಹಸ್ಯವಾಗಿ ಒಲಿಸಿಕೊಂಡನು. ಬಹು ದೂರದಲ್ಲಿ, ತಾನು ಬೇಟೆಯಾಡಲು ಹೋಗುತ್ತಿದ್ದ ಒಂದು ಕಾಡಿನ ಮಧ್ಯದಲ್ಲಿ, ನಂದನವನವನ್ನೂ ಒಂದು ಲತಾಗೃಹವನ್ನೂ ನಿರ್ಮಿಸಿ ಅವಳ ವಾಸಕ್ಕೆ ಅಣಿ ಮಾಡಿ ಕೊಟ್ಟನು.

ದಿನ ಕಳೆದ ಹಾಗೆಲ್ಲಾ, ದೇವಯಾನಿಗೆ ಎರಡು ಮಕ್ಕಳೂ, ಶರ್ಮಿಷ್ಠೆಗೆ ಮೂರು ಮಕ್ಕಳೂ ಆದವು. ಐದೂ ಗಂಡುಗಳೇ.

“ ಕಳ್ಳನ ಹೆಂಡತಿ ಎಂದಿದ್ದರೂ ವಿಧವೆಯೇ ” ಎಂಬ ಮಾತು ಸುಳ್ಳಾಗುತ್ತದೆಯೇ ? ಒಂದು ಬಾರಿ ಬೇಟೆಗೆ ಹೋದ ಅರಸನನ್ನು ದೇವಯಾನಿ ಅನುಸರಿಸಿ ಹೋದಳು. ಮೃಗಗಳನ್ನು ಕೊಲ್ಲುವ ಬೇಟೆಯಾಟವನ್ನೂ ಗಮನಿಸದೆ ಹಟ ಹಿಡಿದು ಆ ನಂದವನದಲ್ಲಿ ಹೂ ಕೊಯ್ಯಬೇಕೆಂದು ಹೋದಳು. ಶರ್ಮಿಷ್ಠೆಯ ಮೂರು ಮಕ್ಕಳನ್ನೂ ಕಂಡಳು. ಮುಖದ ಹೋಲಿಕೆಯಿಂದಲೇ ಸಂದೇಹ ಹುಟ್ಟಿಬಿಟ್ಟಿತು. “ ನೀವು ಯಾರು ?” ಎಂದು ಕೇಳಿದಳು. “ ನಾವು ಯಯಾತಿ ಮಹಾರಾಜನ ಎರಡನೆಯ ಹೆಂಡತಿಯಾದ ಶರ್ಮಿಷ್ಠೆಯ ಮಕ್ಕಳು. ಪಟ್ಟಮಹಿಷಿಯಾದ ದೇವಯಾನಿ ಎಂಬುವಳು ಬಹಳ ಕೆಟ್ಟವಳಂತೆ. ಆದ್ದರಿಂದ ನಮ್ಮ ತಂದೆ ನಮ್ಮಗಳ ಕ್ಷೇಮಕ್ಕಾಗಿ ಇಲ್ಲಿ ಬೇರೆಯಾಗಿ ನಮ್ಮನ್ನು ಇಟ್ಟಿದ್ದಾರೆ ” ಎಂದು ಹೇಳಿ ಅವಳ ಸಂದೇಹವನ್ನು ನಿವಾರಿಸಿದರು.

ದೇವಯಾನಿಯು ಮನಸ್ಸಿನಲ್ಲಿ ಉಂಟಾದ ಗೊಂದಲವನ್ನು ನಾವೇ ಊಹಿಸಿಕೊಳ್ಳಬಹುದು. ತಂದೆಯ ಬಳಿಗೆ ಓಡಿದಳು. ಅವಳು ಓಡುತ್ತಲೂ, ಈ ವಿಷಯವನ್ನು ತಿಳಿದ ಅರಸನು ಅವಳ ಹಿಂದೆ ಓಡುತ್ತಲೂ, ಇಬ್ಬರೂ ಏಕಕಾಲದಲ್ಲಿ ಶುಕ್ರಾಚಾರ್ಯರ ಆಶ್ರಮವನ್ನು ಸೇರಿದರು.

ತನ್ನ ಪತಿಯ ನಡತೆ, ಶರ್ಮಿಷ್ಠೆಯ ದುಷ್ಟತನ, ತನ್ನ ದುಃಖ, ಇವುಗಳನ್ನು ದೇವಯಾನಿ ತನ್ನ ತಂದೆಯೊಡನೆ ಸಾಂಗೋಪಾಂಗವಾಗಿ ತಿಳಿಸಿದಳು. ಶುಕ್ರಾಚಾರ್ಯರು ತನಕಗೊಂಡರು.

ರಾಜರು ಇಬ್ಬರು ಮೂವರು ಪತ್ನಿಯರನ್ನು ಮದುವೆ ಮಾಡಿಕೊಳ್ಳುವುದು

ಪ್ರಪಂಚದಲ್ಲಿ ಸಾಮಾನ್ಯವಾದುದು. ಯಯಾತಿಯೂ ಅದೇ ರೀತಿ ಮಾಡಿದರೆ ಅದನ್ನು ಹೇಗೆ ತಪ್ಪು ಎಂದು ಹೇಳುವುದು? ಅಲ್ಲದೆ, "ಶರ್ಮಿಷ್ಠೆಯನ್ನು ಸ್ವಲ್ಪ ಕಾಲ ದಾಸಿಯಾಗಿ ಹೋಗುವಂತೆ ತಾವು ಮೊದಲೇ ವಿಧಿಸಿದುದು ಅತಿ ಕ್ರೂರವಾದ ದಂಡನೆಯಲ್ಲವೇ?" ಎಂದು ಶುಕ್ರಾಚಾರ್ಯರ ಮನಸ್ಸಾಕ್ಷಿ ಕೆಲವು ವೇಳೆ ಅವರನ್ನು ಪೀಡಿಸಿದುದುಂಟು. ಅವಳು ಇಷ್ಟಾದರೂ ಯಯಾತಿಯ ಗೌರವಕ್ಕೆ ಪಾತ್ರಳಾಗಿ ಸುಖ ಹೊಂದಿದಳು ಎಂಬ ಮಾತನ್ನು ಕೇಳಿದಾಗ ಅವರಿಗೆ ಸಮಾಧಾನವಾಯಿತೇ ಹೊರತು ಕೋಪ ಬರಲಿಲ್ಲ. ಶರ್ಮಿಷ್ಠೆಯ ಮೇಲೆ ಕೋಪಿಸಿಕೊಳ್ಳುವುದು ಯಾವ ನ್ಯಾಯ ? ಆ ಸುಂದರಿಯನ್ನು ತಾವೇ ತಾನೇ ಅರಸನ ಬಳಿಗೆ ಕಳುಹಿಸಿದುದು! ಎಂದೆಲ್ಲ ಅವರು ಯೋಚಿಸಿದರು. ಆದರೆ ತಮ್ಮ ಮಗಳ ಸ್ವಭಾವವನ್ನು ಚೆನ್ನಾಗಿ ಅರಿತವರಾದುದರಿಂದ, ಈ ಧರ್ಮ ಗಳನ್ನೆಲ್ಲಾ ಅವಳು ಒಪ್ಪಿಕೊಳ್ಳುವುದಿಲ್ಲವೆಂದು ಅವರಿಗೆ ನಿಶ್ಚಯವಾಗಿತ್ತು. ಅವಳಿಗೆ ಏನು ಉತ್ತರ ಹೇಳುವುದು ಎಂದು ತಿಳಿಯದೆ ತಮ್ಮ ಗಡ್ಡವನ್ನು ನೀವಿ ಕೊಳ್ಳುತ್ತಾ ನಿಂತಿರಲು, ಅವಳು ಹೊಸದಾಗಿ ಹೇಳಿದ ಮತ್ತೊಂದು ವಾದ ಕಿವಿಯ ಮೇಲೆ ಬಿತ್ತು. ಇದನ್ನು ಪೌರಾಣಿಕರು ಎತ್ತಿ ಹೇಳಿ ಚೆನ್ನಾಗಿ ತೋರಿಸಿದ್ದಾರೆ. ಏಕೆಂದರೆ, ಅದು ಮೊದಲನೆಯ ದರ್ಜೆಯ ವಾದ; ಋಷಿಗಳೂ ಒಪ್ಪಿಕೊಳ್ಳು ವಂತಹುದು.

"ಅವರ ಪಕ್ಷಪಾತವನ್ನು ನೋಡಪ್ಪಾ! ನನಗೆ ಮಾತ್ರ ಎರಡೇ ಮಕ್ಕಳು. ಶರ್ಮಿಷ್ಠೆಗೆ ಮೂರು ಮಕ್ಕಳು."

'ಹಾ! ಪಕ್ಷಪಾತವೇ! ಪತ್ನಿಯರ ನಡುವೆ ಗಂಡನು ವ್ಯತ್ಯಾಸ ಮಾಡ ಬಹುದೇ? ಏನು ದುರ್ನಡತೆ! ಈ ಯಯಾತಿಯ ಮುತ್ತಾತನಾದ ಚಂದ್ರನು ತನ್ನ ಇಪ್ಪತ್ತೇಳು ಪತ್ನಿಯರ ನಡುವೆ ರೋಹಿಣಿಗೆ ಮಾತ್ರ ಪಕ್ಷಪಾತವನ್ನು ತೋರಿಸಿದುದರಿಂದ ಅವನ ಮಾವ ಅವನನ್ನು ಶಪಿಸಲಿಲ್ಲವೇ? ಅವರು ಏನು ಶಾಪ ಕೊಟ್ಟರು? "ದಿನ ದಿನಕ್ಕೆ ನೀನು ಕ್ಷಯ ರೋಗದಿಂದ ನರಳು" ಎಂದಲ್ಲವೇ? ಅಂದಿನಿಂದಲೇ ಅಲ್ಲವೇ ದಿನವೂ ಪೂರ್ಣಚಂದ್ರನಾಗಿದ್ದವನಿಗೆ ಕ್ಷಯರೋಗ ವೃದ್ಧಿಗಳು ಅಂಟಿಕೊಂಡುದು? ಈ ಪಕ್ಷಪಾತದ ದುರ್ನಡತೆ ಈ ವಂಶದಲ್ಲಿಯೇ ಒಂದು ಸಹಜವಾದ ದುರ್ಗುಣವಿದ್ದಂತೆ ತೋರುತ್ತಿದೆ. ಇದನ್ನು ಬೇರು ಸಹಿತ ಕಿತ್ತು ಹಾಕಬೇಕು"—ಹೀಗೆಲ್ಲಾ ಯೋಚಿಸಿ ಆ ಮುನಿ

ಪುಂಗವರು ಒಡನೆಯೇ ತೀರ್ಮಾನಿಸಿದರು. "ಯಯಾತಿ!" ಎಂದರು. "ಹಿಡಿ ಶಾಪವನ್ನು! ಯೌವನದ ಮದದಿಂದತಾನೇ ಈ ರೀತಿ ಮಾಡಿದೆ? ಇನ್ನು ಅರುವತ್ತು ಗಳಿಗೆಯೊಳಗೆ, ನಿನ್ನ ವಯಸ್ಸು ಎರಡರಷ್ಟಾಗಿ ನೀನು ಒಬ್ಬ ಮುದಿ ಗೊರಡಾಗಿ ಹೋಗು!" ಎಂದು ಶಪಿಸಿದರು.

ಸ್ವಂತ ಮಗಳ ಪತಿಯನ್ನು ಹಣ್ಣು ಹಣ್ಣು ಮುದುಕನನ್ನಾಗಿ ಮಾಡು ವುದರಲ್ಲಿ ಯಾರಿಗೆ ಏನು ಲಾಭವೋ ಕಾಣೆ. ಮತ್ಸ್ಯ ಪುರಾಣ ಕಾರರೂ ಇದನ್ನು ಸ್ಪಷ್ಟಪಡಿಸುವುದಿಲ್ಲ. ಅದು ಹೇಗಾದರೇನು? ಶಾಪ ಫಲಿಸುವುದು ನಿಶ್ಚಯವೆಂದು ಅರಿತ ಯಯಾತಿ ಮಾವನ ಕಾಲಿಗೆ ಬಿದ್ದನು. ಮನ್ನಿಸಬೇಕೆಂದು ಬೇಡಿದನು. ಇಂತಹ ಶಾಪವನ್ನು ಕೊಟ್ಟುದು ಮೂರ್ಖತನ ಎಂದು ನಮಗೆ ತೋರುವಂತೆ ಬಹುಶಃ ಆ ಸಮಯದಲ್ಲಿ ಆ ಮಾವನಿಗೂ ತೋರಿತೋ ಏನೋ! ಅವರ ಮನ ಕರಗಿತು. "ನನ್ನ ಮಾತು ಸುಳ್ಳಾಗು ವುದಿಲ್ಲ. ಆದರೆ ಅದಕ್ಕೆ ವಿಮೋಚನವಾಗಿ ಒಂದು ವರ ಕೊಡುತ್ತೇನೆ. ಬೇರೆ ಯಾರಾದರೂ ತನ್ನ ಯೌವನವನ್ನು ನಿನಗೆ ಕೊಡಲು ಸಮ್ಮತಿಸಿದರೆ, ನೀನು ನಿನ್ನ ಮುಪ್ಪನ್ನು ಅವರಿಗೆ ಕೊಟ್ಟು ಅವರ ಯೌವನವನ್ನು ಪಡೆಯಬಹುದು. ಇದು ಯಾರಿಗಾದರೂ ಸಮ್ಮತವೋ ಎಂದು ನಿನ್ನ ಮಕ್ಕಳನ್ನೇ ಕೇಳಿ ನೋಡು" ಎಂದು ಹೇಳಿಬಿಟ್ಟು, ದೇವಯಾನಿ ಮಾತನಾಡುವುದಕ್ಕೆ ಮುಂಚೆಯೇ ಆಶ್ರಮ ದೊಳಕ್ಕೆ ಪ್ರವೇಶಿಸಿ ಬಾಗಿಲನ್ನು ಫಟೇರ್ ಎಂದು ಹಾಕಿಕೊಂಡುಬಿಟ್ಟರು.

ಯಯಾತಿಯೂ ದೇವಯಾನಿಯೂ ಅರಮನೆಗೆ ಹಿಂದಿರುಗಿದರು. ರಹಸ್ಯ ಹೊರಬಿದ್ದ ಮೇಲೆ, ಇನ್ನು ತೋಟದೊಳಕ್ಕೆ ಅವನೆಲ್ಲಿ ಬರುತ್ತಾನೆ ಎಂದು ಕೊಂಡು ಶರ್ಮಿಷ್ಠೆಯೂ ಅಲ್ಲಿಗೇ ಬಂದು ಸೇರಿದಳು.

ಯಯಾತಿಯು ತನ್ನ ಐದು ಮಕ್ಕಳನ್ನೂ ಕರೆಸಿಕೊಂಡು, ತನ್ನನ್ನು ಪೀಡಿಸಲು ಬರುವ ಮುಪ್ಪಿಗೆ, ಯೌವನವನ್ನು ಬದಲಾಯಿಸಿಕೊಳ್ಳುವಂತೆ ಅವರನ್ನು ಒಬ್ಬೊಬ್ಬರನ್ನಾಗಿ ಕೇಳಿದನು. ಮೊದಲನೆಯ ನಾಲ್ಕು ಮಕ್ಕಳೂ ತಲೆಗೊಂದು ವಿಧವಾಗಿ ಬದಲು ಹೇಳಿ ತಂದೆಯ ಪ್ರಾರ್ಥನೆಯನ್ನು ತಿರಸ್ಕ ರಿಸಿದರು.

"ನನಗಿಂತ ಬೇರೆಯವರು ತಾನೇ ನಿನಗೆ ಪುತ್ರರತ್ನಗಳು? ಅವರುಗಳನ್ನೇ ಕೇಳಿಕೊ'' ಎಂದ ಒಬ್ಬ. "ಮುದುಕನಾದ ಮೇಲೆ ಪ್ರಪಂಚದಲ್ಲಿ ಏನು

ಸುಖವಿದೆ? ನೀನೇ ಹೇಳು" ಎಂದ ಮತ್ತೊಬ್ಬ. "ಮೊದಲು ಕುದುರೆ ಸವಾರಿ ಮಾಡುವುದಕ್ಕಾಗುತ್ತದೆಯೋ ಹೇಳು?" ಎಂದು ಕೇಳಿದ ಮೂರನೆಯ ಮಗ. "ಊಟ ತಾನೇ ಬೇಕಾಗಿರುತ್ತದೆಯೋ?" ಎಂದ ನಾಲ್ಕನೆಯ ಮಗ.

ಈ ರೀತಿ ತಿರಸ್ಕರಿಸಿ ಮಾತನಾಡಿದುದಲ್ಲದೆ, ತಂದೆಯ ವಿಪರೀತವಾದ ಈ ಆಸೆಯನ್ನು ತಮ್ಮ ತಾಯಂದಿರಿಗೆ ತಿಳಿಸುವುದಕ್ಕೆ ಹೋಗಿ ಬಿಟ್ಟರು. ಸಿಗದಿ ಮಾಡಿದ್ದ ೬೦ ಗಳಿಗೆ ತೀರುವ ಸಮಯವಾಗುತ್ತಾ ಬಂತು. ಗಾಬರಿಗೊಂಡ ಯಯಾತಿ ತನ್ನ ಐದನೇ ಕುಮಾರನಾದ [ಶರ್ಮಿಷ್ಟೆಯ ಮೂರನೆಯ ಮಗ] ಪುರುವನ್ನು ಅಂಗಲಾಚಿ ಬೇಡಿಕೊಂಡನು. ಅವನು "ತಂದೆಯ ಇಷ್ಟದಂತೆ ನನ್ನ ಯೌವನವನ್ನು ಕೊಡಲು ನನಗೆ ಸಮ್ಮತ" ಎಂದನು. ಹೀಗೆ ಹೇಳಿ ಬಾಯಿ ಮುಚ್ಚಿದ ಕ್ಷಣದಲ್ಲಿಯೇ ಅವನಿಗೆ ತೊಂಬತ್ತೆಂಟು ವರ್ಷ ತುಂಬಿ, ಬೆನ್ನು ಗೂನಾಗಿ, ಕಣ್ಣು ಮಂಜಾಗಿ, ಬೊಚ್ಚು ಬಾಯಿನ ಹಣ್ಣು ಹಣ್ಣು ಮುದುಕನಾಗಿ ಬಿಟ್ಟನು. ಶುಕ್ರಶಾಪ ಅವನನ್ನು ಹಿಡಿಯಿತು. ಯಯಾತಿಯೋ, ತನಗಾಗಿದ್ದ ನಲವತ್ತೊಂಬತ್ತು ವಯಸ್ಸನ್ನು ಕಳೆದುಕೊಂಡು. ಹದಿನೆಂಟು ವರ್ಷ ವಯಸ್ಸಿನ ಯುವಕನಾಗಿ ಶೋಭಿಸಿದನು. ಅದೇ ಪುರುವಿನ ವಯಸ್ಸು.

ಇಲ್ಲಿಂದ ಮುಂದಕ್ಕೆ ನಡೆದ ವಿಷಯವನ್ನು ಮತ್ಸ್ಯ ಪುರಾಣಿಕರು ಒಂದೇ ಮಾತಿನಲ್ಲಿ ಹೇಳಿ ಮುಗಿಸುತ್ತಾರೆ. "ಇದಾದನಂತರ ಯಯಾತಿಯು ಸಾವಿರ ವರ್ಷಕಾಲ ಯೌವನವನ್ನು ಅನುಭವಿಸಿ, ಒಂದು ಕ್ಷಣದಂತೆ ಕಳೆದು ಮತ್ತೆ ಪರಿವರ್ತನ ಮಾಡಿಕೊಂಡು ಮುಪ್ಪನ್ನು ವಹಿಸಿಕೊಂಡು, ಪುರುವಿಗೇ ಪಟ್ಟಕಟ್ಟಿ ತಾನು ವನವಾಸಕ್ಕೆ ಹೊರಟು ಹೋದನು" ಎಂದು ಪೂರ್ಣಗೊಳಿಸಿ ಬಿಡುತ್ತಾರೆ.

ಸಾವಿರ ವರ್ಷವೆಂದರೇನು? ಯೌವನವೆಂದರೇನು! ಅದಕ್ಕೆ ಯಾರು ವರ ಕೊಟ್ಟರು? ಪರಿವರ್ತನೆ ಒಂದಕ್ಕೆ ತಾನೇ ವರ? ಸಾವಿರ ವರ್ಷ ಬದುಕಲು ಯಯಾತಿಗಾಗಲಿ ಪುರುವಿಗಾಗಲಿ ವರವೆಲ್ಲಿತ್ತು? ಅದೂ ಹೋಗಲಿ, ಎರಡನೆಯ ಸಲ ಯುವಕನಾದ ಯಯಾತಿಗೂ, ಎಲ್ಲರಂತೆ ದಿನದಿನಕ್ಕೆ ವಯಸ್ಸು ಹೆಚ್ಚಿ ಸ್ವಾಭಾವಿಕವಾದ ಮುಪ್ಪು ಸಾವಿರ ವರ್ಷಗಳವರೆಗೂ ಬರದಂತೆ ತಡೆದವರು ಯಾರು?

ಈ ಪ್ರಶ್ನೆಗಳಿಗೆ ಉತ್ತರ ಕಂಡುಹಿಡಿದವರಲ್ಲಿ ಓಹಿಯೋ ಸರ್ವ ಕಲಾಶಾಲೆಯ ಸಂಸ್ಕೃತ ಪಂಡಿತರಾದ ಅಲೋಯಾ ಎನ್. ಪಿಂಪಿಳ್

ಎನ್ನುವವರು ಒಬ್ಬರು. ಅವರ ಅಭಿಪ್ರಾಯದಲ್ಲಿ, ಮತ್ಸ್ಯಪುರಾಣ ಶ್ಲೋಕದ ತಾತ್ಪರ್ಯ ಹೀಗೆ; "ಯಯಾತಿ ಯೌವನವನ್ನು ಪಡೆದು ಸಾವಿರ ವರ್ಷ ಕಾಲವನ್ನು ಒಂದು ಕ್ಷಣದಂತೆ ಕಳೆದನು ಎಂದಲ್ಲ. ಯೌವನವನ್ನು ಪಡೆದ ಯಯಾತಿಗೆ ಒಂದು ಕ್ಷಣ ಕಳೆಯುವುದು ಒಂದು ಸಾವಿರ ವರ್ಷ ಕಳೆದಂತಿತ್ತು" ಎಂಬುದೇ. "ಯಯಾತಿ ಅಷ್ಟು ಸಂಕಟಪಟ್ಟನು" ಇದೇ ಅಭಿಪ್ರಾಯ.

ಇದೆಂತಹ ವಿಪರೀತ! ನವಯೌವನ, ರಾಜ್ಯ, ಇಬ್ಬರು ಪತ್ನಿಯರು, ಐದು ಜನ ಮಕ್ಕಳು—ಇಷ್ಟನ್ನೂ ಪಡೆದ ಭಾಗ್ಯವಂತನಿಗೆ ಆಯುಷ್ಕಾಲವನ್ನು ಉತ್ಸಾಹದಿಂದ ಕಳೆಯಲು ಯಾವ ತಡೆ? ಇದರ ಮರ್ಮವನ್ನು ಅರಿಯ ಬೇಕಾದರೆ, ವಿಚಿತ್ರ ದೀಪಿಕೆ ಎಂಬ ಗ್ರಂಥದ ಇಪ್ಪತ್ತೇಳನೆಯ ಅಧ್ಯಾಯವನ್ನು ಓದಿ ನೋಡಿ ಎಂದು ಓಹಿಯೋ ವಿದ್ವಾಂಸರು ಹೇಳುತ್ತಾರೆ. ಅದನ್ನು ಓದು ವುದಕ್ಕೆ ಎರಡೇ ನಿಮಿಷ ಸಾಕು. ಆದರೆ ಗ್ರಂಥ ಸಿಕ್ಕುವುದು ಬಹಳ ಪ್ರಯಾಸ ವಾದುದರಿಂದ, ಆ ಅಧ್ಯಾಯವನ್ನು ತೆಗೆದು ಕೆಳಗೆ ಬರೆದಿದ್ದೇನೆ. ಒಂದು ಎಚ್ಚರಿಕೆ. ಅದರಲ್ಲಿ ಪಾತ್ರಗಳ ಹೆಸರುಗಳು ಉದ್ದಿಶ್ಯಪೂರ್ವಕವಾಗಿ ಬದಲಾಯಿಸಿ ಹೇಳಲ್ಪಟ್ಟಿವೆ. ಯಯಾತಿಗೆ ಬದಲಾಗಿ ಯವನೇಂದ್ರನೆಂದೂ, ದೇವಯಾನಿಗೆ ಬದಲಾಗಿ ದೇವಮಣಿಯೆಂದೂ; ಇದೇ ರೀತಿ ಇತರರ ಹೆಸರುಗಳನ್ನೂ ಅದರಲ್ಲಿ ಬದಲಾಯಿಸಲಾಗಿದೆ. ಇದಕ್ಕೆ ಕಾರಣ, ಸರಿಯಾದ ಹೆಸರುಗಳನ್ನು ಬರೆದರೆ, ಆ ಕಾಲದಲ್ಲಿ ಆಳುತ್ತಿದ್ದ ಚಂದ್ರವಂಶದ ಅರಸನಿಗೆ ಕೋಪ ಬಂದು, ಗ್ರಂಥ ಕರ್ತರು ತಮ್ಮ ಕಿವಿ ಮೂಗುಗಳನ್ನು ಕಳೆದುಕೊಳ್ಳಬಹುದಾದ ಭಯವಿದ್ದಿರ ಬೇಕು. ನಮಗೆ ಈಗ ಆ ರೀತಿಯಾದ ಭಯ ಇಲ್ಲದುದರಿಂದ ನಾನು ಆ ಸುಳ್ಳು ಹೆಸರುಗಳನ್ನು ಹೊಡೆದು ಸರಿಯಾದ ಹೆಸರುಗಳನ್ನೇ ಬರೆದಿದ್ದೇನೆ. ಇನ್ನು ದಯವಿಟ್ಟು ಓದಿ.

## ವಿಚಿತ್ರ ದೀಪಿಕೆ

### ಇಪ್ಪತ್ತೇಳನೆಯ ಅಧ್ಯಾಯವು

ಯಯಾತಿರ್ಯುವಾ ಭವತಿ [ಯಯಾತಿ ಯುವಕನಾಗುತ್ತಾನೆ.]

[ದೃಶ್ಯ: ಯಯಾತಿಯ ಅರಮನೆಯಲ್ಲಿ ಪೂಜಾಗೃಹ. ದೇವಯಾನಿಯೂ ಶರ್ಮಿಷ್ಠೆಯೂ ಓಡಿ ಬರುತ್ತಾರೆ. ಯಯಾತಿಯನ್ನೂ ಪುರುವನ್ನೂ ನೋಡಿ ಭ್ರಮಿಸಿ ನಿಲ್ಲುತ್ತಾರೆ.]

ದೇವಯಾನಿ : [ಗರ್ವದ ಧ್ವನಿಯಿಂದ] ನಿನಗೆ ಯಾರು ಇಲ್ಲಿಗೆ ಬರಲು ಅವಕಾಶ ಕೊಟ್ಟರು? ಮಹಾರಾಜರು ಎಲ್ಲಿ ?

ಯಯಾತಿ : ಇದೋ ನಾನು ಇಲ್ಲೇ ಇದ್ದೇನಲ್ಲಾ ?

ದೇವಯಾನಿ : [ಇನ್ನಷ್ಟು ಗರ್ವದಿಂದ] ನೀನು ಎಲ್ಲಿ ಇದ್ದೀ ಎಂದು ನಾನು ಕೇಳಲಿಲ್ಲ. ಮಹಾರಾಜರು ಎಲ್ಲಿ ?

ಯಯಾತಿ ; ನಾನೇ ಯಯಾತಿ. ನಾನು ಹೇಳುವುದನ್ನು ಸ್ವಲ್ಪ—

ಶರ್ಮಿಷ್ಟೆ— ಇವನನ್ನು ನೋಡಿದರೆ ನನ್ನ ಮಗ ಪುರುವಿನ ಹಾಗೆಯೇ ಇದ್ದಾನೆ. ಆದರೆ ಪುರು ಅಲ್ಲ.

ದೇವಯಾನಿ : [ತಟಕ್ಕನೆ] ಯಾವನೋ ಒಬ್ಬ ಹುಚ್ಚಯುವಕ ನಾನೇ ಮಹಾರಾಜ ಎನ್ನುತ್ತಾನೆ. ಅವನನ್ನು ನೋಡಿದರೆ ನಿನ್ನ ಮಗ ಪುರುವಿನ ಹಾಗೆ ಇದ್ದಾನೋ ? ಬಹುಶಃ ಎಲ್ಲಾ ಹುಚ್ಚರುಗಳೂ ನಿನ್ನ ಮಗ ಪುರುವಿನ ಹಾಗೆಯೇ ಇದ್ದಾರೋ ಏನೋ !

ಯಯಾತಿ : ಇಲ್ಲಿ ನೋಡು, ದೇವಯಾನಿ—

ದೇವಯಾನಿ : ಏನು ? ಧೈರ್ಯ ಮೀರಿಹೋಯಿತೋ ? ನನ್ನನ್ನು ಹೆಸರು ಹಿಡಿದು ಕರೆಯುತ್ತೀಯಾ ?

ಪುರು : [ಶರ್ಮಿಷ್ಟೆಯನ್ನು ನೋಡಿ] ಅಮ್ಮಾ, ನಾನೇ ನಿನ್ನ ಮಗ ಪುರು. ಇವರೇ—

ಶರ್ಮಿಷ್ಟೆ : ನನಗೆ ನೂರು ವರ್ಷ ವಯಸ್ಸಿನ ಮಗ ಇಲ್ಲ. ಇದೇನು ಆಶ್ಚರ್ಯ! ಇಬ್ಬರು ಹುಚ್ಚರು ಜತೆಯಾಗಿ ಬಂದುಬಿಟ್ಟಿದ್ದಾರಲ್ಲಾ !

ಯಯಾತಿ : [ದೇವಯಾನಿಯನ್ನು ಕುರಿತು] ನೀನು ನನ್ನನ್ನು ನಂಬುವುದಿಲ್ಲವೇ ? ನಮ್ಮಿಬ್ಬರಿಗೆ ಮಾತ್ರ ತಿಳಿದ ಒಂದು ರಹಸ್ಯವನ್ನು ನಿನ್ನ ಕಿವಿಯಲ್ಲಿ ಹೇಳುತ್ತೇನೆ, ಬಾ. ಆಗಲಾದರೂ ನಾನು ಯಯಾತಿ ಎಂದು ನಂಬುತ್ತೀಯಾ ? [ಅವಳ ಹತ್ತಿರಕ್ಕೆ ಹೋಗುವನು]

ದೇವಯಾನಿ : ಛೀ ಅಧಿಕ ಪ್ರಸಂಗಿ ! ಹತ್ತಿರ ಬಂದೀಯೆ ಜೋಕೆ !

ಪುರು : [ಶರ್ಮಿಷ್ಟೆಯನ್ನು ಕುರಿತು] ಅಮ್ಮಾ, ನಾನು ಎಲ್ಲವನ್ನೂ

ವಿವರವಾಗಿ ತಿಳಿಸುತ್ತೇನೆ. [ಹೀಗೆಂದು ಹೇಳುತ್ತ ಅವಳ ಬಳಿಗೆ ಹೋಗಲು ಯತ್ನಿಸುತ್ತಾನೆ. ವೃದ್ಧಾಪ್ಯದ ದೆಸೆಯಿಂದ ಕಾಲು ನಡುಗಿ ಕೆಳಗೆ ಬೀಳುತ್ತಾನೆ.]

ದೇವಯಾನಿ ಮತ್ತು ಶರ್ಮಿಷ್ಠೆ [ಒಂದೇ ಕಾಲದಲ್ಲಿ] ಬನ್ನಿ ಮಹರ್ಷಿಗಳೇ. [ಒಬ್ಬರನ್ನೊಬ್ಬರು ನೋಡುತ್ತಾ] ಎರಡು ಕ್ಷಣ ಬಾಯಿ ಮುಚ್ಚಿಕೊಂಡಿರೇ. [ನಾರದರನ್ನು ನೋಡಿ ಏಕ ಕಾಲದಲ್ಲಿ] ಈ ಇಬ್ಬರು ಹುಚ್ಚರನ್ನು ನೋಡಿ.

ನಾರದರು : ಹುಚ್ಚರು ಯಾರು? ಇವನು ಯಯಾತಿ, ಇವನು ಪುರು.

ದೇವಯಾನಿ ಮತ್ತು ಶರ್ಮಿಷ್ಠೆ : [ಒಟ್ಟಿಗೆ] ಏನು ಹೇಳಿದಿರಿ!

ನಾರದರು : [ದೇವಯಾನಿಯನ್ನು ಕುರಿತು] ನಿನಗೂ ಗೊತ್ತಿಲ್ಲವೇ? ನೀನೂ ಜೊತೆಯಲ್ಲಿಯೇ ಇದ್ದೆಯಲ್ಲ: ಮೊದಲು ನೀನು ಮೊರೆಯಿಟ್ಟುದ್ದಕ್ಕೋಸ್ಕರ, ನಿನ್ನ ತಂದೆ, ಯಯಾತಿಯನ್ನು ಎರಡರಷ್ಟು ವಯಸ್ಸಾದ ಮುದುಕನಾಗುವಂತೆ ಶಪಿಸಿದರಲ್ಲಾ!

ಶರ್ಮಿಷ್ಠೆ : ತಂದೆಯ ಹತ್ತಿರ ಹೋಗಿ ಗೋಳು ಹೇಳಿಕೊಂಡಳೋ? ಕೇಳಬೇಕೇ? ಕುಟುಂಬಕ್ಕೆ ಅನರ್ಥ ತರುವುದಕ್ಕೆ, ತಂದೆಯನ್ನು ಕೂಗಿ ಶಾಪ ಕೊಡು ಎಂದು ಹೇಳುವುದಕ್ಕೆ ಯಾವಾಗಲೂ ಸಿದ್ಧ!

ದೇವಯಾನಿ : ಎಲ್ಲಾ ಬಿಟ್ಟು, ನೀನೇನು ಹೇಳುವುದು; ನನ್ನ ಗಂಡನನ್ನ ಕದ್ದು ಬಿಟ್ಟು?

ಯಯಾತಿ : ಅಯ್ಯೋ, ಹೋದದ್ದು ಹೋಗಲಿ; ಜಗಳ ಆಡಬೇಡಿರೇ!

ಶರ್ಮಿಷ್ಠೆ : ನಾನು ಯಾರ ಗಂಡನನ್ನೂ ಕದೀಲಿಲ್ಲ, ಯಾತಕ್ಕೋಸ್ಕರ ಕದಿಯಬೇಕು? ನಿನ್ನ ಹಾಗೇ? ಮತ್ತೊಬ್ಬರ ಅಪ್ಪಣೆಗೆ ಹೆದರಿ ಯಾವನಾದರೂ ಮದುವೆ ಮಾಡಿಕೊಂಡರೇ ಉಂಟು ಇಲ್ಲದಿದ್ದರೆ ಇಲ್ಲ ಎಂದು ಕಾದಿದ್ದೆನೇ? ಅವರೇ ನನ್ನನ್ನು ಬಲಾತ್ಕಾರದಿಂದ ಹುಡುಕಿಕೊಂಡು ಬಂದರು. ಹೌದೋ ಅಲ್ಲವೋ ಕೇಳಿ ನೋಡು!

ಯಯಾತಿ : ಅಯ್ಯೋ, ಜಗಳ ಆಡ—

ನಾರದರು : [ದೇವಯಾನಿಯನ್ನು ಕುರಿತು] ಆಮೇಲೆ ನಿಮ್ಮ ತಂದೆ ಶಾಪ ವಿಮೋಚನೆಯನ್ನು ಕೊಟ್ಟರು.—

ದೇವಯಾನಿ : ಹಾಗಾದರೆ ಇವರು ತಮ್ಮ ಸ್ವಂತ ವಯಸ್ಸು ಪಡೆಯದೆ ಹೀಗೆ ಒಬ್ಬ ಹುಡುಗನಾಗಿ ಬಿಡಲು ಕಾರಣವೇನು ?

ನಾರದರು ; ಏನು ಮಾಡುವುದು ? ಆವಸರದಲ್ಲಿ ಶುಕ್ರಾಚಾರ್ಯರು ಕೊಟ್ಟ ವರ, ಮತ್ತೊಬ್ಬರೊಡನೆ ವಯಸ್ಸು ಬದಲಾಯಿಸಿಕೊಳ್ಳುವುದಕ್ಕೆ ಮಾತ್ರ. ಅದಕ್ಕೆ ಪುರು ಮಾತ್ರ ಸಮ್ಮತಿಸಿದ. ಅವನ ಹದಿನೆಂಟು ವರ್ಷ ವಯಸ್ಸು ಇವನಿಗೆ ಬಂದುಬಿಟ್ಟಿತು.

ಶರ್ಮಿಷ್ಠೆ ; ಶಪಿಸುವುದಕ್ಕೆ ಅವಳ ಅಪ್ಪ ; ಅನುಭವಿಸುವುದಕ್ಕೆ ಮಾತ್ರ ನನ್ನ ಮಗ! ಅಯ್ಯೋ! ನನ್ನ ಪುರುವಿಗೆ ಇನ್ನು ಮೇಲೆ ಯಾರು ಹೆಣ್ಣು ಕೊಡುತ್ತಾರೆ ?

ದೇವಯಾನಿ ; ಇನ್ನು ಮೇಲೆ ಮಹಾರಾಜನೊಡನೆ ಪಟ್ಟಮಹಿಷಿಯಾದ ನಾನು ಮೆರವಣಿಗೆ ಹೊರಟರೆ, ಎಲ್ಲರೂ ನೋಡುವಂತೆ ಅವರಿಗೆ ಹದಿನೆಂಟು ವರ್ಷವೂ ನನಗೆ ಮುವ್ವತ್ತೆಂಟು ವರ್ಷವೂ ಆಗಿ ಹೋಯಿತಲ್ಲಾ ? ಅವರನ್ನು ನನ್ನ ತಮ್ಮ ಎಂದು ಎಲ್ಲರೂ ಹೇಳುತ್ತಾರಲ್ಲಾ !

ಶರ್ಮಿಷ್ಠೆ ; ತಮ್ಮ ಎಂದು ಹೇಳುತ್ತಾರಂತೆ! ಮಗ ಎಂದೇ ಹೇಳುತ್ತಾರೆ. ಅವರನ್ನು ಮಡಿಲಲ್ಲಿ ಇಟ್ಟುಕೊಂಡು ಮೆರವಣಿಗೆ ಮಾಡಿಕೊಂಡು ಬಾ, ಹೋಗು !

ಯಯಾತಿ : ಅಯ್ಯೋ, ಜಗಳ ಆಡಬೇಡಿರೇ !

ದೇವಯಾನಿ ; ಅವಳು ಏನು ಬೇಕಾದರೂ ಹೇಳಿಕೊಳ್ಳಲಿ! ನನ್ನ ಮಗನಿಗೆ ಸದ್ಯ ತೊಂಬಂತೆಂಟು ವರ್ಷ ಆಗಿಹೋಗಲಿಲ್ಲವಲ್ಲಾ! ನಾನಂತೂ ಅಷ್ಟು ಮುದುಕಿ ಅಲ್ಲವಲ್ಲ !

ಶರ್ಮಿಷ್ಠೆ : ಇವಳು ಹೇಳುವುದು ಕೇಳಿ! ಈ ಆಶ್ಚರ್ಯರ್ನ! ತನಗೆ ಈಗ ತಾನೇ ಇನ್ನೂ ಮೂವತ್ತೆಂಟು ವರ್ಷವಂತೆ! ಹೋದ ಶ್ರಾವಣಕ್ಕೆ ಸರಿಯಾಗಿ ನಲವತ್ತುಮೂರು ವರ್ಷ ತುಂಬಿಹೋಯಿತು. ಶ್ರಾವಣದಿಂದ ಫಾಲ್ಗುಣಕ್ಕೆ ಆರು ತಿಂಗಳು. ನನಗಿಂತ ಆರು

ಹಿರಿಯವಳು. ನನಗೆ ತಿಳಿಯದೆ?

ದೇವಯಾನಿ: ಲೇ! ನೀನು ಇನ್ನು ಮೇಲೆ ನನ್ನ ವಿಚಾರವಾಗಿ ಏನಾದರೂ ಮಾತನಾಡಿದರೆ ನೋಡು!

ಯಯಾತಿ: ಅಯ್ಯೋ, ಜಗಳ ಆಡ—

ಶರ್ಮಿಷ್ಟೆ: ಏನೇ ನೋಡುವುದು? ಕಚನಿಗೆ ಶಾಪ ಕೊಟ್ಟ ಹಾಗೆ ನನಗೂ ಶಾಪ ಕೊಟ್ಟುಬಿಡುತ್ತಿಯೋ?

ಯಯಾತಿ: ಅಯ್ಯೋ ಜಗಳ—

ಶರ್ಮಿಷ್ಟೆ: ಕಚನನ್ನು ಯಾತಕ್ಕೋಸ್ಕರ ಇವಳು ಶಪಿಸಿದಳು ಅಂತ ನಿಮ್ಮ ಪಟ್ಟಮಹಿಷಿಯನ್ನು ಕೇಳಿ ಸ್ವಲ್ಪ. [ಯಯಾತಿಯೂ ನಾರದರೂ ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುತ್ತಾರೆ] ನನ್ನನ್ನು ಮದುವೆ ಮಾಡಿಕೋ ಎಂದು ನಾನು ಯಾರನ್ನಾದರೂ ಗೋಗರೆದೆನೇ? ಮಾಡಿಕೊಳ್ಳುವುದಿಲ್ಲ ಎಂದು ಯಾರಾದರೂ ನನ್ನನ್ನು ತಳ್ಳಿದರೋ?

ದೇವಯಾನಿ: ನಿನ್ನನ್ನು ಯಾರು ತಳ್ಳುತ್ತಾರೆ? ನೀನೇ ಇತರರನ್ನು ಬಾವಿಗೆ ತಳ್ಳುವುದರಲ್ಲಿ ಮಹಾ ಗಟ್ಟಿಗಿತ್ತಿಯೆಲ್ಲಾ!

[ಶರ್ಮಿಷ್ಟೆಯೂ ದೇವಯಾನಿಯೂ ಒಬ್ಬರನ್ನೊಬ್ಬರು ನೋಡುತ್ತಾ ಹಲ್ಲು ಕಡಿಯುವರು]

ಯಯಾತಿ: [ಪುರುವನ್ನು ನೋಡಿ] ಪುರು, ಇಲ್ಲಿ ಬಾ. ನಾವು ಮತ್ತೆ ವಯಸ್ಸನ್ನು ಬದಲಾಯಿಸಿಕೊಂಡುಬಿಡೋಣ.

ಪುರು: ಹಾಗೇ ಆಗಲಿ.

[ಪುರು ಮೊದಲಿನಂತೆ ಯುವಕನಾಗುತ್ತಾನೆ. ಯಯಾತಿ ತೊಂಬತ್ತೆಂಟು ವಯಸ್ಸಿನ ಮುದುಕನಾಗುತ್ತಾನೆ]

ಯಯಾತಿ: ಸಾಕು, ಈ ಸ್ವಲ್ಪ ಕಾಲ ಯುವಕನಾಗಿದ್ದ ನನಗೆ, ಒಂದೊಂದು ಕ್ಷಣವೂ ಒಂದು ಸಾವಿರ ವರ್ಷದಂತೆ ಆಗಿಹೋಗಿತ್ತು. ನನಗೆ ರಾಜ್ಯವೂ ಬೇಡ, ಯೌವನವೂ ಬೇಡ. ಒಬ್ಬಳು ಹೆಂಡತಿ ಇರುವವನಿಗೆ ಯೌವನ ಬೇಕು. ಇಬ್ಬರು ಹೆಂಡಿರು ಇರುವವನಿಗೆ ಕಾಡೇ ಸರಿ. ನಾರದ ಋಷಿಗಳೇ, ನೀವೇ ಇದ್ದು

ಪುರುವಿಗೇ ಪಟ್ಟ ಕಟ್ಟಿಬಿಡಬೇಕು. ನಾನು ವನವಾಸಕ್ಕೆ ಹೋಗುತ್ತೇನೆ.

ದೇವಯಾನಿ [ಒಬ್ಬರನ್ನೊಬ್ಬರು ಕುರಿತು, ಏಕಕಾಲದಲ್ಲಿ] ಎಲ್ಲವೂ ಮತ್ತು ಶರ್ಮಿಷ್ಠೆ ನಿನ್ನಿಂದಲೇ.

[ಎಲ್ಲರೂ ಹೊರಡುವರು]

ಇಲ್ಲಿಗೆ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

ಇದನ್ನು ಓದಿದ ಮೇಲೆ ಪುರಾಣ ಶ್ಲೋಕಕ್ಕೆ ಓಹಿಯೋ ವಿದ್ವಾಂಸರು ಹೇಳುವ ಅನ್ವಯವೇ ಸರಿ ಎಂದು ನನಗೆ ತೋರುತ್ತದೆ. ನಿಮ್ಮ ಅಭಿಪ್ರಾಯ ಹೇಗೋ?

---

# ಹಟಮಾರಿ

ದೃಶ್ಯ— ಕಾಂತಂ ಐಯರ್ ಮನೆಯ ಜಗುಲಿ

**ಪಟ್ಟಮ್ಮಾಳ್**— ಅಮ್ಮಾ-ಅಮ್ಮಾ, ಇಲ್ಲಿ ಸ್ವಲ್ಪ ಬಾ. ಬೀದಿಯಲ್ಲಿ ಯಾರೋ ಒಬ್ಬಾಕೆ ಬಹಳ ಚೆನ್ನಾಗಿ ಹಾಡಿಕೊಂಡು ಬರುತ್ತಿದ್ದಾಳೆ. ನೀನೂ ಬಂದು ಅದನ್ನು ಕೇಳಬಾರದೇ?

[ತಾಯಿ ಶಾಂತಮ್ಮ ಬರುತ್ತಾಳೆ. ಬೀದಿಯಲ್ಲಿ ಹಾಡು ಕೇಳಿಸುತ್ತದೆ]

ಕೊಚ್ಚಿಮಲೆ ಕುಡಗುಮಲೆ ಎಂಗಳದು ನಾಡು
ಕುಮರೇಶರ್ ವಾಳುವ್ರದುಂ ಎಂಗಳದು ನಾಡು
ಪಚ್ಚೈಮಲೈ ಪವಳ ಮಲೈ ಎಂಗಳದು ನಾಡು
ಪರಮಶಿವನ್ ವಾಳುವದುಂ ಎಂಗಳದು ನಾಡು
ವಂಗಾಳಂ ಶಿಂಗಾಳಂ ಮಹತಮಂಗಳ್ ನಾಡು

[ಕೊಚ್ಚಿಮಲೆ ಗುಡುಗುಮಲೆ ನಮ್ಮ ನಾಡು; ಕುಮರೇಶರ್ ಬಾಳುವುದು ನಮ್ಮ ನಾಡು. ಪಚ್ಚೈಮಲೆ ಹವಳಮಲೆ ನಮ್ಮ ನಾಡು. ಪರಮಶಿವನು ಬಾಳ್ವುದು ನಮ್ಮ ನಾಡು. ಬಂಗಾಳ ಶಿಂಗಾಳ ಬಹು ಮಂಗಳ ನಾಡು.]

**ಶಾಂತಮ್ಮಾಳ್**—ಸರಿ ಹೋಗು. ಯಾರೋ ಭಿಕ್ಷುಕಿ ಅಲ್ಲಿಯರಸಾನಿ

ಮಾಲೆಯ ಹಳೆಯ ಕಣಿಯೊಂದನ್ನು ಹಾಡಿಕೊಂಡು ಬಂದರೆ ಅದೇ ದೊಡ್ಡ ಸಂಭ್ರಮವೇ ?

**ಪಟ್ಟಮ್ಮಾಳ್**— ಸಂಭ್ರಮವೋ ಅಲ್ಲವೋ ! ತಂದೆಯವರ 'ಟಾಕಿ' ಯಲ್ಲಿ ಎಲ್ಲಿಯೂ ಹಾಡುವುದಕ್ಕಿಂತ ಇವಳು ಎಷ್ಟೋ ಚೆನ್ನಾಗಿ ಹಾಡುತ್ತಾಳೆ. ಅವಳೊಂದಿಗೆ ಬಂದಿರುವ ಹುಡುಗನೂ ಜತೆಯಲ್ಲಿ ಹಾಡುತ್ತಾನೆ, ನೋಡು.

ಪಶಿಕಾಲಮಾನಾಲೆ ಪಲನ್‌ಗಳ್ ಕೂಡಿ ವರುವೋಂ
ನಲಮುರಿಂಪು ಕುರಿಯು ರೈವೋಂ, ನಟ್ಟಣ್ಯೆಯಾಯ್ ನಾಂಗಳ್
ಪರಮಶಿವನ್ ಉಮ್ಮೈಯಾಟ್ಟುಂ ಕೈ ಪಾರ್ದ್ಕುಂ ಕುರವರ್
ಕಾಂತಮ್ಮೆಯರ್ ಧನರೇಖೈ ಕಣಿತ್ತು ಶೊಲ್ಲುಂ ಕುರವರ್

[ಹಸಿವಿನ ಕಾಲದಲ್ಲಿ ಹಣ್ಣೊಂದಿಗೆ ಬರುವೆವು. ನಿಸ್ಸಂದೇಹವಾಗಿ ಶುಭವರಿತು ಹೇಳುವೆವು. ಪರಶಿವ ಪಾರ್ವತಿಯರ ಪದಿಯಿಂದ ಕೈ ನೋಡುವ ಕೊರವಂಜಿಯರು ; ಕಾಂತಮ್ಮಯರ್‌ರವರ ಧನರೇಖೆಯನ್ನು ಗುಣಿಸಿ ಹೇಳುವೆವು.]

**ಪಟ್ಟಮ್ಮಾಳ್**— [ಆಶ್ಚರ್ಯದಿಂದ] ಕೇಳಿದೆಯಾ ? ಅಮ್ಮಾ, ತಂದೆಯ ಹೆಸರನ್ನು ಹೇಳಿಕೊಂಡು ಹಾಡುತ್ತಾಳೆ.

[ಕೊರವಂಜಿಯ ಹಾಡು]

" ಇಂದಿರನುಕ್ಕುಂ ಚಂದಿರನುಕ್ಕುಂ ಕುರಿಗಳ್ ಶೊಲ್ಲುಂ ಕುರವರ್
ಶಾಂತಮ್ಮಾಳ್ ಗುಣರೇಖೈ ಸರಿಶೊಲ್ಲುಂ ಕುರವರ್—"

[ಇಂದ್ರನಿಗೂ ಚಂದ್ರನಿಗೂ ಕಣಿ ಹೇಳುವ ಕೊರವಂಜಿಯರು, ಶಾಂತಮ್ಮಳ ಗುಣರೇಖೆಯನ್ನು ನೋಡಿ ಹೇಳುವ ಕೊರವಂಜಿಯರು.]

**ಪಟ್ಟಮ್ಮಾಳ್**— ಅಮ್ಮಾ, ಈಗ ನಿನ್ನ ಹೆಸರನ್ನು ಹೇಳುತ್ತಿದ್ದಾಳೆ. ಅದೂ ಕೂಡ ಅಲ್ಲಿಯರಸಾನಿ ಮಾಲೆಯಲ್ಲಿ ಬರೆದಿದೆಯೇ ?

ಉತ್ತಮರಿನ್ ಉಳ್ಳಂಗೈ ಉಣರ್ನ್ದು ಶೊಲ್ಲುಂ ಕುರವರ್
ಕಟ್ಟಳಗಿ ಪಟ್ಟಮ್ಮೈಕುಂಗುಣಿಕ್ಕುಂ ಕುರವರ್

[ಉತ್ತಮರ ಅಂಗೈ ಅರಿತು ಹೇಳುವ ಕೊರವಂಜಿಯರು. ಪರಮಸುಂದರಿ ಪಟ್ಟಮ್ಮಾಳ್‌ನ ಕಣಿ ಗುಣಿಸುವ ಕೊರವಂಜಿಯರು.]

**ಪಟ್ಟಮ್ಮಾಳ್**—ಹೋ ಹೋ, ಈಗ ನನ್ನ ಹೆಸರನ್ನೂ ಹೇಳಿಬಿಟ್ಟಳಲ್ಲಾ! ಇವಳಲ್ಲಿ ಯಾವುದೋ ಮಂತ್ರಶಕ್ತಿ ಇರುವಂತೆ ತೋರುತ್ತಿದೆ. ಈ ಕೊರವಂಜಿ ನನ್ನ ಕೈ ನೋಡಿ ಫಲ ಹೇಳಲಿ ಅಮ್ಮಾ; ಆದರೆ ಅವಳ ಮುಂದೆ ಕೈ ನೀಡುವುದಕ್ಕೇ ನನಗೆ ಭಯವಾಗಿದೆಯಲ್ಲ :

**ಕೊರವಂಜಿ**— ಏನೂ ಭಯಪಡಬೇಡಿ. ಸುಮ್ಮನೆ ಕೈಯ್ಯನ್ನು ತೋರಿಸಿ.

**ಶಾಂತಮ್ಮಾಳ್**— ಅಯ್ಯೋ ಹುಡುಗಿ. ಬಲಗೈ ನೀಡುವಿಯಲ್ಲ! ಇದು ಕೂಡ ತಿಳಿಯದೆ? ಸ್ತ್ರೀಯರು ತೋರಿಸಬೇಕಾದುದು ಎಡಗೈಯನ್ನೇ ಅಲ್ಲವೆ? ಚೆನ್ನಾಗಿದೆ; ಆದರೆ ಇದು ತಿಳಿದರೆ ನಿಮ್ಮ ತಂದೆ ಕೋಪಿಸಿಕೊಳ್ಳು ವರಲ್ಲ? ಹೇಳಿದಂತೆ ಅವರೇ ಬಂದುಬಿಟ್ಟರು.

**ಕಾಂತಂಐಯರ್** [ಬರುತ್ತಾ] ಯಾವುದು ತಿಳಿದರೆ ನಾನು ಕೋಪಿಸಿ ಕೊಳ್ಳುತ್ತೇನಂತೆ?

**ಶಾಂತಮ್ಮಾಳ್**— ಮತ್ತೇನೂ ಇಲ್ಲ. ಕೊರವಂಜಿಗೆ ಕೈ ತೋರಿಸಲು ಮಗು ಆಶೆಪಡುತ್ತಿದೆ.

**ಕಾಂತಂಐಯರ್**— ಓಹೋ! ಆ ಆಸೆ ಮಗುವಿಗೆ ಮಾತ್ರವೊ! ಅದರ ತಾಯಿಗೂ ಉಂಟೋ? ನಿಜ ಹೇಳು.

**ಶಾಂತಮ್ಮಾಳ್**— ಇರಲಿ ಹೋಗಿ. ನನಗೇ ಇಷ್ಟ ಎಂದು ಇಟ್ಟುಕೊಳ್ಳಿ. ಕೊರವಂಜಿ ಒಳ್ಳೆಯದನ್ನು ಹೇಳುವುದಾದರೆ ನಾವು ಕೇಳುವುದರಲ್ಲಿ ತಪ್ಪೇನು?

**ಕಾಂತಂಐಯರ್**— ಕೇಳಿದರೇನೂ ತಪ್ಪಿಲ್ಲ. ಆದರೆ ಆ ಒಂದು ಆಣೆ ಯನ್ನು ನನಗೆ ಕೊಟ್ಟರೆ ಅವಳು ಹೇಳುವುದರ ಎರಡರಷ್ಟು ಒಳ್ಳೆಯದನ್ನು ನಾನು ಹೇಳುತ್ತೇನೆ. ಕೊಟ್ಟು ನೋಡು.

**ಶಾಂತಮ್ಮಾಳ್**— ಸರಿ ಹೋಗಿ!

**ಕಾಂತಂಐಯರ್**— ಅವಳಿಗೆ ಒಂದು ಕಮಲ ಬಂದಿಗೆ [ಕತ್ತಿನ ಒಡವೆ] ಬದಲಾಗಿ ಎರಡು ಬಂದಿ ಸಿಕ್ಕುವುದೆಂದು ಜೋತಿಷ್ಯ ಹೇಳುತ್ತೇನೆ.

**ಕೊರವಂಜಿ**— ಸ್ವಾಮಿ, ನನ್ನನ್ನು ಹಾಸ್ಯ ಮಾಡುತ್ತಿದ್ದೀರಿ. ನೀವು ಯೋಚಿಸುತ್ತಿರುವಂತಹ ಕೊರವಂಜಿಯಲ್ಲ ನಾನು. ನನಗಿರುವ ಶಕ್ತಿಯೆಲ್ಲ ನಮ್ಮ ಸಂಸಾರದವರಲ್ಲಿ ಅನೇಕ ತಲೆಮಾರುಗಳಿಂದ ಪರಂಪರೆಯಾಗಿ ಪರಮಾತ್ಮನ ದಯದಿಂದ ನಡೆದು ಬಂದಿದೆ. ನಿಮ್ಮ ಜಾತಿಯ ಒಬ್ಬ ಉತ್ತಮ ಸ್ತ್ರೀಯ ದಯ ದಿಂದ ಸ್ವಲ್ಪ ಸಂಗೀತವನ್ನು ಕಲಿತುಕೊಂಡೆ. ಈಗ ಊರಿಂದೂರಿಗೆ ತಿರುಗಿ ಪಾಡುತ್ತಾ ದೇವರ ದರುಶನ ಮಾಡುತ್ತಾ ಬರುತ್ತಿದ್ದೇನೆ. ಕಾಸಿಗಾಗಿ ಸುಳ್ಳು ಹೇಳುವ ಕೊರವಂಜಿಯಲ್ಲ ನಾನು.

ಪಾಂಡಿ ನಾಟ್ಟಿಲ್ ಒರು ಪುನ್‌ಶೆಯ್‌ಕಾಟ್ಟಿಲೆ
ಪಣ್ಣೆಕ್ಕಾರ ಕುರುತ್ತಿ
ಈಂಡು ಕೈಕ್ಕುರಿ ನೋಕ್ಕಿಯುರೈಕ್ಕ
ಈಶನಾಣೆ ಪುರಿಂದಾರ್
ವೇಂಡು ಪಾಟ್ಟೋರು ವೇದಿಯರ್ ಮಾದಿಡಂ
ವಿರುಂಪಿಕತ್ತು ತೇರಂದು
ಆಂಡವಣ್ದಿರು ನಕರಂಗಳೆಲ್ಲಾಂ
ಅತ್ತೆಂದು ಪಾಡಿ ವರುವೇನ್

[ಪಾಂಡ್ಯದೇಶದ ಕಾಡಿನ ಗುಡಿಸಲಿನಲ್ಲಿ ಪಸೈವೃಕ್ಷದ ಕೆಲಸ ಮಾಡುವ ಕೊರವಂಜಿ ಕೈ ನೋಡಿ ಹೇಳುವುದರಲ್ಲಿ ಈಶ್ವರನ ಇಚ್ಛೆಯನ್ನು ಅರಿತಳು. ಜ್ಞಾನಿಯಾದ ವೈದಿಕರ ಗೃಹಿಣಿಯಿಂದ ಇಚ್ಛೆಪಟ್ಟು ಕಲಿತು ಭಗವಂತನ ಕ್ಷೇತ್ರಗಳಲ್ಲೆಲ್ಲಾ ಹಾಡಿಕೊಂಡು ತಿರುಗುತ್ತಿರುತ್ತಾಳೆ]

**ಕಾಂತಂ ಐಯರ್**— ನೀನು ಚೆನ್ನಾಗಿಯೇ ಹಾಡುವೆ. ಆದರೆ ಅದರಿಂದ ನಿನಗೆ ಸಾಮುದ್ರಿಕವೂ ಗೊತ್ತಾಗಿಬಿಡುವುದೇ ?

**ಪಟ್ಟಮ್ಮಾಳ್**— ಅಪ್ಪಾ, ಸ್ವಲ್ಪ ಮುಂಚೆ ಇವಳು ಹಾಡಿನಲ್ಲಿ ನಿಮ್ಮ ಹೆಸರನ್ನೂ ಕೂಡ ಹೇಳಿಬಿಟ್ಟಳು.

**ಕಾಂತಂಐಯರ್**—ಅದರಲ್ಲಿ ಅತಿಶಯವೇನು ? ಕಾಂತಂ ಐಯರ್ ಟಾಕೀಸ್ ಎಂಬುದು ಊರಲ್ಲಿರುವ ಎಲ್ಲಾ ಕೊರವಂಜಿಗಳಿಗೂ ಗೊತ್ತು.

**ಶಾಂತಮ್ಮಾಳ್**— ಅದು ಮಾತ್ರವಲ್ಲ. ನನ್ನ ಹೆಸರನ್ನೂ ಮಗುವಿನ ಹೆಸರನ್ನೂ ಹಾಡಿನಲ್ಲಿ ಸೇರಿಸಿ ಹಾಡಿದಳು.

**ಕಾಂತಂ ಐಯರ್**— ಮನೆಯ ಕೆಲಸಗಾರ ಯಾರನ್ನಾದರೂ ಕೇಳಿ ಇವನ್ನೆಲ್ಲ ತಿಳಿದುಕೊಂಡಿದ್ದಾಳೆ.

**ಕೊರವಂಜಿ**— ಅಮ್ಮಾ, ಈ ಹೆಣ್ಣಿನ ಕೈನಂತಹ ಒಳ್ಳೆ ಅದೃಷ್ಟದ ಕೈಯ್ಯನ್ನು ನಾನು ಇದುವರೆಗೆ ನೋಡಿಮುದಿಲ್ಲ. ಈ ಮಾಂಗಲ್ಯರೇಖೆ ಒಂದನ್ನೇ ನೋಡಿ. ಇದೇ ಸಾಕು. ಎಷ್ಟು ನೀಳವಾಗಿದೆ! ಈಗಲೇ ಮದುವೆಯ ಮಾತುಕಥೆ ನಡೆದುಕೊಂಡಿರಬೇಕಲ್ಲ ?

**ಶಾಂತಮ್ಮಾಳ್**— ಇದಕ್ಕೆ ಏನು ಹೇಳುತ್ತೀರಿ ? ಮದುವೆಗಾಗಿ ನಾವು ಪ್ರಯತ್ನಪಡುತ್ತಿರುವುದು ಆಳುಗಳಿಗೆ ಹೇಗೆ ಗೊತ್ತು ?

**ಕಾಂತಂ ಐಯರ್**— ಆಶ್ಚರ್ಯವಲ್ಲವೇ ? ಹದಿನೈದು ವರ್ಷದ ಒಂದು

ಹುಡುಗಿಗೆ ಮದುವೆಯ ಮಾತು ನಡೆಯುತ್ತಿದೆ ಎಂದು ಹೇಳಲು ಒಬ್ಬ ಕೊರವಂಜಿ ಬೇಕೆ?

**ಕೊರವಂಜಿ**— ಇವಳಿಗೆ ಗಂಡ ಪೂರ್ವ ದಿಕ್ಕಿನಲ್ಲಿದ್ದಾನೆ. ಅವನ ನಾಡು ತಂಪಾದ ಮಲೆನಾಡು.

**ಶಾಂತಮ್ಮಾಳ್**— ಕೇಳಿದಿರಾ? ಬೆಂಗಳೂರನ್ನು ಸರಿಯಾಗಿ ಹೇಳಿ ಬಿಟ್ಟಳಲ್ಲಾ.

**ಕೊರವಂಜಿ**— ಅರ್ಜುನ ಮಹಾರಾಜನಿಗೆ ಸಮನಾದ ಗಂಡ ಬರುತ್ತಾನೆ.

**ಕಾಂತಂಐಯರ್**—ಕೇಳಿಕೊ; ಪಟ್ಟಮ್ಮಾ, ಅರ್ಜುನನಂತೆ ಅಧ್ಯಮಿಸಾಸೆ.

**ಪಟ್ಟಮ್ಮಾಳ್**— (ಲಜ್ಜೆಯೊಡನೆ) ಹೋಗಿ ಅಪ್ಪ

**ಶಾಂತಮ್ಮಾಳ್**— ಕೊರವಂಜಿ ಸರಿಯಾಗಿ ಹೇಳಿಬಿಟ್ಟಳಲ್ಲ ಎಂದು, ಮಾತನ್ನು ಬದಲಾಯಿಸಲು ಮಗುವನ್ನು ಹಾಸ್ಯ ಮಾಡುತ್ತೀರಿ, ಅಲ್ಲವೇ?

**ಕಾಂತಂ ಅಯ್ಯರ್** — ನಾವು ಬರೆದಿರುವ ಪತ್ರಕ್ಕೆ ಬೆಂಗಳೂರಿನಿಂದ ಅನುಕೂಲವಾದ ಪ್ರತ್ಯುತ್ತರ ಬರಲಿ. ಅನಂತರ ನಾನು ಕೊರವಂಜಿಯ ಸಾಮ ರ್ಥ್ಯವನ್ನು ಒಪ್ಪಿಕೊಳ್ಳುತ್ತೇನೆ.

**ಕೊರವಂಜಿ**— ಈ ಹೆಣ್ಣಿಗೆ ಸ್ವಲ್ಪ ಕೆಟ್ಟ ನಕ್ಷತ್ರ. ಇಂದೂ ಆ ಕೆಟ್ಟ ನಕ್ಷತ್ರವಾದುದರಿಂದ ಯಾವುದಾದರೂ ಸ್ವಲ್ಪ ಪದಾರ್ಥ ನಷ್ಟವಾಗಬಹುದು. ಆದರೆ ಸರಿಯಾದ ಪರಿಹಾರವನ್ನು ಮಾಡಿದರೆ ಮತ್ತೆ ಸಿಕ್ಕಿಬಿಡುವುದು.

**ಪಟ್ಟಮ್ಮಾಳ್**— ಅಮ್ಮಾ, ಕೊರವಂಜಿಯ ಮಗ ನೆಲದ ಮೇಲೆ ಏನೇನೋ ಗೀಚುತ್ತಿದ್ದಾನೆ ನೋಡು.

**ಕೊರವಂಜಿ ಮಗ**— ಇದೆಲ್ಲ ಮಂತ್ರಚಕ್ರಗಳು. ಕೇಡುಂಟಾಗದಂತೆ ದುರ್ದೈವಗಳನ್ನು ಅಲ್ಲಿಯೇ ಅಡಗಿಸಿಬಿಡುತ್ತೇನೆ.

**ಹಾಡುತ್ತಾನೆ:-**

" ವೀರನ್ ಇರುಳನ್ ಕಾಟ್ಟೇರಿ
ವೆರಿಯನ್ ನೋಂಡಿ ಚಾಮುಂಡಿ
ಮೂರಿಮೂಂಡಿ ನಲ್ಲಣ್ಣನ್
ತೊಟ್ಟಿಯ ಚಿನ್ನಾನ್ ಸೆತ್ತಣ್ಣನ್

ಮಾಮು ಮುಸಿಯುನ್ ಶಂಗಲಿಯು
ಮಾಡನ್ ಕಸುಸ್ಸನ್ ಪಾಪಾಷೆ—"

**ಪಟ್ಟಮ್ಮಾಳ್**— [ಬೆಚ್ಚಿ ಬಿದ್ದು] ನನ್ನ ಎಡಗೈಯಿನ ಚಿನ್ನದ ಬಳೆ ಕಾಣುವುದಿಲ್ಲವಲ್ಲ ?

**ಕಾಂತಂ ಐಯರ್**— ನೋಡಿದಿರಾ ಈ ಮೋಸಗಾರರ ಕೆಲಸವನ್ನು? ನಾವೆಲ್ಲ ಆ ಹುಡುಗನ ಹಾಡನ್ನು ಕೇಳುತ್ತಿರುವಂತೆ ಮಾಡಿ ಸಮಯ ನೋಡಿ ತಾನು ಮಗುವಿನ ಬಳೆಯನ್ನು ಕಳಚಿಕೊಂಡುಬಿಟ್ಟಳು.

**ಕೊರವಂಜಿ**— ಅಯ್ಯೋ ದೇವರೇ! ನನ್ನ ಮೇಲೆ ಹೇಳುತ್ತಿದ್ದೀರಾ ?

**ಕಾಂತಂಐಯರ್**— ಹೌದು ನಿನ್ನ ಮೇಲೆ ತಾನೇ ಹೇಳುತ್ತಿದ್ದೇನೆ. ಮಗುವಿನ ಕೈಯ್ಯಲ್ಲಿಯ ಒಡವೆ ಕದಿಯುವುದಕ್ಕೆ ಇಲ್ಲಿ ನೀನಲ್ಲದೆ ಮತ್ತಾರಿದ್ದಾರೆ?

**ಕೊರವಂಜಿ**— ಸ್ವಾಮಿ, ಸುಮ್ಮನೆ ಪಾಪ ಕಟ್ಟಿಕೊಳ್ಳಬೇಡಿ. ನನಗೆ ಏನೂ ಗೊತ್ತಿಲ್ಲ. ಬಡಪಾಯಿಯ ಮೇಲೆ ಇಂತಹ ಬೆಟ್ಟದಷ್ಟು ತಪ್ಪನ್ನು ಹೊರಿಸಬಹುದೆ ?

**ಕಾಂತಂ ಐಯರ್**— ನೀನು ಚಿನ್ನದ ಬಳೆ ಕಸಿದುಕೊಂಡರೆ, ನಿನ್ನ ಮೇಲೆ ಕಳವನ್ನು ಹೊರಿಸದೆ ಇನ್ನೇನು ಹೊರಿಸುತ್ತಾರೆ ? ಇನ್ನೊಂದೆರಡು ನಿಮಿಷ ಮಗು ಅದನ್ನು ಗಮನಿಸದೆ ಇದ್ದಿದ್ದರೆ, ನೀವು ಹಾಡನ್ನು ಮುಗಿಸಿ ಒಡವೆಯೊಂದಿಗೆ ಮಾಯವಾಗಿಬಿಡುತ್ತಿದ್ದಿರಿ.

**ಕೊರವಂಜಿ**— ನಾನು ಕದ್ದುದನ್ನು ನೀವು ಕಣ್ಣಿನಿಂದ ನೋಡಿ ದಿರಾ? ನೀವೆಲ್ಲ ಮಹಾರಾಜರಲ್ಲವೇ ? ನಿಮ್ಮ ಬಾಯಲ್ಲಿ ಸುಳ್ಳು ಬರುವುದೇ ಇಲ್ಲ ವಲ್ಲ! ನಿಮ್ಮ ಕಣ್ಣಿನಿಂದಲೇ ನೋಡಿದೆವೆಂದು ಹೇಳುವಿರಾ ? ಬಳೆ ಎಲ್ಲಿಯಾ ದರೂ ಜಾರಿ ಬಿದ್ದಿರಬಹುದು.

**ಕಾಂತಂ ಐಯರ್**— ನೀನು ಮಾಡಿದ ಕಾರ್ಯ ನಮಗೆ ಕಾಣದಿರಲಿ ಎಂದೇ ಹುಡುಗ ಚಿತ್ರ ಬರೆದು ತೋರಿಸುತ್ತಿದ್ದನಲ್ಲ! ಕಣ್ಣಿನಿಂದ ನೋಡಿದೆ ವೆಂದು ಹೇಗೆ ಹೇಳುವುದು ? ಆದರೆ ಒಡವೆ ಬೇರೆಲ್ಲಿಯೂ ಜಾರಿ ಬೀಳಲಿಲ್ಲ. ನಿನ್ನ ಸೀರೆಯಲ್ಲಿಯೇ ಹುದುಗಿಕೊಂಡಿದೆ. ಅದು ನಿನಗೂ ಚೆನ್ನಾಗಿ ಗೊತ್ತು ನನಗೂ ಚೆನ್ನಾಗಿ ಗೊತ್ತು !

**ಕೊರವಂಜಿ**—ಅಯ್ಯೋ! ನಾನು ಒಡವೆಯನ್ನು ಮುಟ್ಟಲಿಲ್ಲ. ಅಯ್ಯೋ ದೇವರೇ! ನಾನು ಕಳ್ಳಿ ಅಲ್ಲವಲ್ಲ!

ಇದು ಮುರೈಯೊ ಗನವಾನೆ
ಈ ದೊಸ್ರುಂ ಅರಿಯೇನೆ
ಗತಿ ಎಟ್ರ ಏಳೈ ಮಾದಿಲ್
ಕೊಡುಂ ಕುಟ್ಟ್ರಂ ಏಟ್ಟ್ರಲಾಮೊ
ಕುರಿಶೊಲ್ಲುಂ ಕುರತ್ತಿ ಎನ್ರಾಲ್
ಕಳವಾಳಿ ಅವಳ್ ತಾನೋ
ನೆರಿಯರಿಂದ ಪೆರಿಯೋರ್ ಕಾಣ್
ನಿಷ್ಠೂರಂ ಅಡುಕ್ಕಾದೆ,
ವರಿಯೋರ್ ಮೇಲ್ ವಯ್ಯೆಪುರಿಂದು
ವಳಿ ಚೆಲ್ಲ ವಿಡೈ ಕುಡುಪ್ಪೀರ್

[ಇದೊಂದು ಮಾತೇ ಘನವಂತರೆ? ನನಗೆ ಇದೊಂದೂ ತಿಳಿಯದಲ್ಲಾ. ಗತಿಗೆಟ್ಟ ಬಡವಿಯ ಮೇಲೆ ದೊಡ್ಡ ತಪ್ಪನ್ನು ಹೊರಿಸಬಹುದೇ ? ಕಳ್ಳಿ ಅವಳೇಯೊ? ನೆರೆಹೊರೆ ಅರಿತ ಹಿರಿಯಳು. ನಿಷ್ಠುರ ಹೇಳಬೇಡಿ. ನನ್ನಲ್ಲಿ ದಯೆಯಿಟ್ಟು ಹೊರಗೆ ಹೋಗಲು ಅಪ್ಪಣೆ ಕೊಡಿ.]

**ಕಾಂತಂಅಯ್ಯರ್**— [ಮರುಗಿದ ಮನಸ್ಸಿನಿಂದ] ನೀನೇನೋ ಚೆನ್ನಾಗಿಯೇ ಹಾಡುತ್ತೀ. [ಮತ್ತೆ ಕಠಿಣವಾಗಿ] ಆದರೆ ಹಾಡಿಗೆ ಕೂಲಿಯಾಗಿ ಒಂದು ಚಿನ್ನದ ಬಳೆಯನ್ನು ಕೊಟ್ಟುಬಿಡಲು ಸಾಧ್ಯವೇ ? [ಮೃದುವಾಗಿ] ನೀನೇ ಅದನ್ನು ಹಿಂದಕ್ಕೆ ಕೊಟ್ಟುಬಿಡು. ಹಾಡಿದುದಕ್ಕಾಗಿ ಒಳ್ಳೇ ಇನಾಂ ಕೊಟ್ಟು ಕಳುಹಿಸುತ್ತೇನೆ.

**ಕೊರವಂಜಿ**—ಈಶ್ವರ! ಇದಕ್ಕೆ ನಾನೇನು ಮಾಡಲಿ? ಆ ಹುಡುಗಿಯ ಗ್ರಹಚಾರ ಇಂದು ಅವಳಿಗೆ ಸಂಭವಿಸಿದುದು, ನಾನು ಅವಳ ಕೈಯ್ಯನ್ನು ಮುಟ್ಟಿದುದರಿಂದ ನನ್ನನ್ನು ಹಿಡಿದುಕೊಂಡು ಬಿಟ್ಟಿತೆಲ್ಲಾ! ನಾನು ಆಗಲೇ ಹೇಳಿದೆ ಅವಳಿಗೆ ಏನಾದರೂ ನಷ್ಟ ಸಂಭವಿಸುವುದೆಂದು.

**ಕಾಂತಂ ಐಯರ್**—[ಕೋಪದೊಡನೆ] ನೀನು ಅಷ್ಟು ಮಾತ್ರವೇ ಹೇಳಲಿಲ್ಲ. ಹೋದ ವಸ್ತು ಮತ್ತೆ ಸಿಕ್ಕುತ್ತೆ ಎಂದೂ ಹೇಳಿದೆಯಲ್ಲವೇ? ನಿನ್ನನ್ನು ಪೋಲೀಸಿಗೆ ಒಪ್ಪಿಸಿ, ಒಡವೆಯನ್ನು ಹಿಂದಕ್ಕೆ ತೆಗೆದುಕೊಳ್ಳುವ ಮಾರ್ಗದಲ್ಲಿಯೇ ತೆಗೆದುಕೊಳ್ಳುತ್ತೇನೆ.—ಯಾರೋ ಅಲ್ಲಿ? ಎದುರಿಗಿರುವ

ಪೋಲೀಸ್ ಸ್ಟೇಶನ್ನಿಗೆ ಹೋಗಿ ಇನಿಸ್ಪೆಕ್ಟರೊಂದಿಗೆ ನಾನು ಸ್ವಲ್ಪ ಕರೆದೆನೆಂದು ಹೇಳು.

**ಕೊರವಂಜಿ**— ಈಶ್ವರ, ನೀನೇ ನನ್ನನ್ನು ಕಾಪಾಡಬೇಕು. ದೇವಾದಿದೇವ, ಈ ಸಮಯದಲ್ಲಿ ನನ್ನನ್ನು ಕಾಪಾಡುವವರು ನೀನಲ್ಲದೆ ಬೇರೆ ಯಾರು ?

[ಮಾಯಾಮಾಳವ ಗೌಳದಲ್ಲಿ ಹಾಡುವಳು—]

ದೇವಾದಿದೇವ ನನು ಕಾವ ಸಮಯಮುರಾ

**ಮನೆಯ ಸೇವಕ**— ಇದೋ ಇನಿಸ್ಪೆಕ್ಟರ್ ಸಾಹೇಬರು ಬಂದುಬಿಟ್ಟರು.

**ಕಾಂತಂ ಐಯರ್**— ಸಾರ್, ಇಲ್ಲಿ ಸ್ವಲ್ಪ ಬನ್ನಿ. ಈ ಕೊರವಂಜಿ ನನ್ನ ಮಗಳ ಕೈ ಹಿಡಿದುಕೊಂಡು ಕಣಿ ಹೇಳುತ್ತಲೇ ಇದ್ದಳು. ಆಗ ಅವಳ ಜತೆಯಲ್ಲಿ ಬಂದ ಹುಡುಗ ಒಂದು ಹಾಡನ್ನು ಹಾಡಿದ. ನಾವು ಅದರಲ್ಲಿ ನೆಟ್ಟ ಮನಸ್ಸುಳ್ಳವರಾಗಿದ್ದೆವು. ಆಗ ಈಕೆ ನನ್ನ ಮಗಳ ಕೈಯಿನ ಚಿನ್ನದ ಬಳೆಯನ್ನು ಕಳಚಿಕೊಂಡು ಎಲ್ಲೋ ತನ್ನ ಉಡುಪಿನಲ್ಲಿ ಮುಚ್ಚಿಟ್ಟುಕೊಂಡು ಬಿಟ್ಟಿದ್ದಾಳೆ. ಇವಳನ್ನು ನೀವು ವಿಚಾರಿಸಿ.

**ಇನಿಸ್ಪೆಕ್ಟರ್**— ಅಷ್ಟು ಸುಲಭವಾಗಿ ಕಳಚಬಹುದಾದ ಬಳೆಯೇ ಅದು ?

**ಕಾಂತಂ ಐಯರ್**— ಬಲಗೈಯಿನ ಬಳೆಯನ್ನು ನೋಡಿ, ಹೀಗೆಯೇ ಅದೂ ಸಡಿಲವಾಗಿಯೇ ಇತ್ತು. ಈ ಕಾಲದಲ್ಲಿ ಅದೇ ಅಲ್ಲವೇ ಫ್ಯಾಷನ್.

**ಇನಿಸ್ಪೆಕ್ಟರ್**— ಕೊರವಂಜಿ ಇಲ್ಲಿ ನೋಡು! ನಮಗೂ ಸುಮ್ಮನೆ ತೊಂದರೆ ಕೊಡಬೇಡ. ನಿನಗೂ ವೃಥಾ ಸಂಕಟ ಉಂಟುಮಾಡಿಕೊಳ್ಳಬೇಡ. ನೀನು ತೆಗೆದುಕೊಂಡಿದ್ದರೆ, ಮರ್ಯಾದೆಯಿಂದ ಹಿಂದಕ್ಕೆ ಕೊಟ್ಟುಬಿಡು. ಇನ್ನು ಮೇಲೆ ಹೀಗೆ ಮಾಡುವುದಿಲ್ಲವೆಂದು ನೀನು ಆಣೆಯಿಟ್ಟು ಹೇಳಿದರೆ ನಿನ್ನ ವಯಸ್ಸು ಇನ್ನೂ ಚಿಕ್ಕದಾಗಿರುವುದರಿಂದ ಈ ಸಲಕ್ಕೆ ನಿನ್ನನ್ನು ಕ್ಷಮಿಸುವಂತೆ ಐಯರಿಗೆ ಹೇಳುತ್ತೇನೆ.

**ಕೊರವಂಜಿ**— ಅಯ್ಯೋ, ನಾನು ಒಂದನ್ನೂ ಕಾಣೆನಲ್ಲ! ತೆಗೆದುಕೊಳ್ಳದ ಪದಾರ್ಥವನ್ನು ನಾನು ಹಿಂದಕ್ಕೆ ಕೊಡುವುದು ಹೇಗೆ ?

**ಕಾಂತಂ ಐಯರ್**— ಹೀಗೆ ಮೊಂಡಾಟ ಮಾಡುವುದಾದರೆ ಅವಳನ್ನು ಸ್ಟೇಷನ್ನಿಗೆ ಕರೆದುಕೊಂಡು ಹೋಗಿ.

**ಕೊರವಂಜಿ**— ಸ್ವಾಮಿ, ನನ್ನನ್ನು ಪೋಲೀಸರ ವಶಪಡಿಸಿದಿರಿ. ನನ್ನನ್ನು

ಹಿಂಸೆ ಮಾಡುತ್ತಾರಲ್ಲ! ದೊಣ್ಣೆ ತೆಗೆದುಕೊಂಡು ಹೊಡೆಯುತ್ತಾರಲ್ಲ? ಅಯ್ಯೋ ದೇವರೇ! ನಾನು ನಿಜವಾಗಿ ಕಳ್ಳಿ ಅಲ್ಲ ಎಂಬುದು ನಿನಗಲ್ಲವೇ ತಿಳಿದಿರುವುದು? ನಾನು ನಿನ್ನನ್ನು ಮರೆತು ಇವರ ದಯವನ್ನು ಬೇಡಿದೆನಲ್ಲ!

ಹಾಡುತ್ತಾಳೆ—

ಉನದು ಚರಣ ಕಮಲಾಲಯತ್ತಿಲ್
ಅರೈ ನಿಮಿಷ ನೇರಮಟ್ಟಿಲ್

**ಕಾಂತಂ ಐಯರ್**— ಇವಳನ್ನು ಒಂದು ಕೊರವಂಜಿ ಎಂದು ನಂಬಲು ಯಾರಿಗಾದರೂ ಸಾಧ್ಯವೇ?

**ಶಾಂತಮ್ಮಾಳ್**— ಇವಳನ್ನು ಸ್ಟೇಷನ್ನಿಗೆ ಕಳುಹಿಸುವುದೆಂದರೆ ನನಗೆ ಸಂಕಟವಾಗುತ್ತದೆ. ಬೇರೆ ಯಾವುದೂ ದಾರಿ ಇಲ್ಲವೇ?

**ಕಾಂತಂ ಐಯರ್**— ಇನಿಸ್ಪೆಕ್ಟರ್, ನೀವು ಏನು ಹೇಳುತ್ತೀರಿ?

**ಇನಿಸ್ಪೆಕ್ಟರ್**— ನನ್ನ 'ಡ್ಯೂಟಿ'ಯನ್ನು ಮಾಡಲು ನಾನು ತಯಾರಾಗಿದ್ದೇನೆ.

**ಕೊರವಂಜಿ**—ಅಯ್ಯೋ, ಅವರನ್ನು ಕೇಳಿದರೆ ಅವರು ಬೇರೆ ಏನು ತಾನೆ ಹೇಳುತ್ತಾರೆ? ನಿಮ್ಮ ಮನಸ್ಸಾಕ್ಷಿಯನ್ನಲ್ಲವೇ ಕೇಳಬೇಕಾದುದು! ನಿಮಗೆ ದಯೆ ಉಂಟಾಗುವುದಿಲ್ಲವೇ?

ಚಕ್ರವಾಕದಲ್ಲಿ ಹಾಡುತ್ತಾಳೆ—

ಇಂಕಾ ದಯ ರಾಲೇದಾ?

* * * * *

**ಪಟ್ಟಮ್ಮಾಳ್**— ಅಪ್ಪಾ! ಬಳೆಯನ್ನು ಇವಳೇ ಎತ್ತಿಕೊಂಡಳೆಂಬುದು ನಮಗೆ ಹೇಗೆ ಗೊತ್ತು? ಹೋದರೆ ಹೋಗಲಿ ಬಿಟ್ಟುಬಿಡಿ.

**ಕಾಂತಂ ಐಯರ್**— ಹೇಗೆ ಗೊತ್ತೇ? ಅದಿರಲಿ. ಅವಳು ನಿನ್ನ ಕೈಯ್ಯನ್ನು ಹಿಡಿದಾಗ ಬಳೆ ಕೈಯ್ಯಲ್ಲಿ ಇತ್ತೇ ಇಲ್ಲವೆ ಅದನ್ನು ಹೇಳು. ಆಗ ಇದ್ದರೆ ಈಗ ಎಲ್ಲಿ ಹೋಯಿತು?

**ಪಟ್ಟಮ್ಮಾಳ್**— [ಸಂದೇಹದೊಡನೆ] ಆ- ಆ- ಕೈಯ್ಯಲ್ಲಿ ಇದ್ದಂತೆ ತೋರುತ್ತದೆ. ಆದರೆ ಅದರ ಬೆಲೆ ನಿಮಗೆ ಒಂದು ಲೆಕ್ಕವೆ? ಹೋದರೆ ಹೋಗಲಿ.

**ಕಾಂತಂ ಐಯರ್**— ಹೋದರೆ ಹೋಗಲಿ ಎಂದು ಹೇಳಬಹುದೇ?

ನಾನು ಅವಳಿಗಿಂತ ದರಿದ್ರನಾಗಿದ್ದವ. ಒಂದೊಂದು ಕಾಸನ್ನೂ ಎಷ್ಟು ಕಷ್ಟ ಪಟ್ಟು ಸಂಪಾದಿಸಿದ್ದೇನೆ ನಿನಗೆ ಗೊತ್ತೇ? ದುಡಿಯುವುದರಿಂದ ಇತರರ ದೇಹದಿಂದ ಬೆವರು ಸುರಿದಿದ್ದರೆ, ನನ್ನ ದೇಹದಿಂದ ರಕ್ತವೇ ಸುರಿದಿದೆ ಎನ್ನಬೇಕು. ಅದೂ ಇರಲಿ, ಇವಳನ್ನು ಈಗ ಬಿಟ್ಟುಬಿಟ್ಟರೆ ಮುಂದೆ ಇನ್ನೆಷ್ಟು ಜಾಗಗಳಲ್ಲಿ ಕದಿಯುತ್ತಾಳೋ? ಅದಕ್ಕೆಲ್ಲ ನಾವೂ ಜವಾಬ್ದಾರರೇ!

**ಶಾಂತಮ್ಮಾಳ್**— ಇಷ್ಟು ಅದ್ಭುತವಾಗಿ ಹಾಡುವವಳು ಏನನ್ನಾದರೂ ಮಾಡಿಕೊಳ್ಳಲಿ. ಆ ವಿಚಾರವೆಲ್ಲ ನಮಗ್ಯಾಕೆ?

**ಕೊರವಂಜಿ**— ಹಾಡು! ಹಾಡು! ನನ್ನ ಹಾಡಿಗಾಗಿ ಮರುಗುವವರೇ ಹೊರತು ನನಗಾಗಿ ಮರುಕವಿಲ್ಲವಲ್ಲ! ಈ ಹಾಡನ್ನು ಕಲಿಯಲು ನಾನು ಕಳೆದ ಕಾಲವನ್ನೆಲ್ಲ ದೈವ ಭಕ್ತಿಯಲ್ಲಿ ಕಳೆದಿದ್ದರೆ ಈಗ ನನ್ನನ್ನು ಕಾಪಾಡಲು ದೈವವು ಓಡಿ ಬರದೆ ಇರುತ್ತಿದ್ದಿತೇ? ದ್ರೌಪದಿಯನ್ನು ಕಾಪಾಡಿದ ದೈವಕ್ಕೆ ಒಂದು ಅಲ್ಪ ಸ್ತ್ರೀಯನ್ನು ರಕ್ಷಿಸುವುದು ಕಷ್ಟವೇ?

"ಕ್ಷೀರಸಾಗರ ಶಯನ" ದ ಚರಣವನ್ನು ದೇವಗಾಂಧಾರಿಯಲ್ಲಿ ಹಾಡುತ್ತಾಳೆ.

ನಾರೀಮಣಿಕಿ ಚೀರಲ್ಲಿಚ್ಚಿನದಿ
ನಾಡೇ...............

**ಕಾಂತಂ ಐಯರ್**— ಅಯ್ಯಾ ಇನಿಸ್ಪೆಕ್ಟರೆ! ಇಂತಹ ಹೆಣ್ಣನ್ನು ಜೈಲಿಗೆ ಕಳಿಸುವ ಪಾಪ ನನಗೆ ಬೇಡ. ಇವಳನ್ನು ಬಿಟ್ಟುಬಿಡಿ. ಬಳೆ ಹೋದರೆ ಹೋಗಲಿ.

**ಶಾಂತಮ್ಮಾಳ್–ಪಟ್ಟಮ್ಮಾಳ್**— ಅದೀಗ ಸರಿ!

**ಕೊರವಂಜಿ**— ಈಶ್ವರೀ! ನಾನು ತಪ್ಪಿತಸ್ಥಳು ಎಂದು ತಿಳಿದು ನನ್ನನು ಮನ್ನಿಸುವರೇ ಹೊರತು ನಾನು ನಿರ್ದೋಷಿಯೆಂದು ಭಾವಿಸುವುದಿಲ್ಲವಲ್ಲ! ಇದ್ದದ್ದನ್ನು ನಂಬುವಂತೆ ಮಾಡುವ ನಡವಳಿಕೆ ನನಗೆ ತಿಳಿಯಲಿಲ್ಲವಲ್ಲ. ಇವರಿಗೆ ಹಾಡಿನ ಮೋಹವೇ ಹೊರತು ಕಾರುಣ್ಯವು ಇಲ್ಲವಲ್ಲ! ಇದೂ ನಿನ್ನ ಕೊಡುಗೆಯೇ ಪ್ರಭೋ! ನಾಲ್ಕು ಜನರು "ಇವಳು ಕಳ್ಳಿ" ಎನ್ನುತ್ತ ನನ್ನ ಕಡೆ ಬೆರಳು ಮಾಡಿ ತೋರಿಸುವಂತೆ ನನ್ನ ಜೀವಮಾನವನ್ನೆಲ್ಲಾ ಕಳೆಯುವಂತಾಯಿತಲ್ಲ! ಮನಸ್ಸಿನ ಸಂಕಟ ಎಲ್ಲರಿಗೂ ಒಂದೇ ತಾನೇ. ಅಯ್ಯೋ, ನನಗೆ ಸಂಭವಿಸಿದ

ಈ ಅಪವಾದವನ್ನು ಕೇಳಿದರೆ, ನನ್ನನ್ನು ತಾಯಿಯಂತೆ ಬೆಳೆಸಿದ ಆ ಉತ್ತಮ ಸ್ತ್ರೀ ಮಾಧು ಎಷ್ಟು ದುಃಖಕ್ಕೀಡಾಗುವಳು! ಅವಳಿಗಾಗಿಯಾದರೂ ದೇವರು ದಯೆ ತೋರಿಸಬಾರದೇ?

[ಕಲ್ಯಾಣಿಯಲ್ಲಿ ಹಾಡುತ್ತಾಳೆ]

ಓ ಜಗಜ್ಜನನಿ ಮನೋಲ್ಲಾಸಿನಿ ಓಂಕಾರ ರೂಪಿಣಿ ಕಲ್ಯಾಣಿ
ನೀ ಚರಣ ಪಂಕಜಮುಲೇ ಗತಿಯನಿ
ನೇರ ನಮ್ಮಿಯುನ್ನ ನನ್ನು ಬ್ರೋವ ಅಮ್ಮಾ

**ಕಾಂತಂ ಐಯರ್**— [ಕಣ್ಣು ನೀರು ತುಂಬಿ] ಇವಳು ಅಪರಾಧಿ ಎನ್ನುವವನೇ ದೊಡ್ಡ ಅಪರಾಧಿ.

**ಶಾಂತಮ್ಮಾಳ್**— ಹೌದು. ನಾವು ಯೋಚಿಸಿದುದೆಲ್ಲಾ ತಪ್ಪು. ಹೇಳಿದುದೆಲ್ಲಾ ತಪ್ಪು.

**ಕಾಂತಂ ಐಯರ್**— ಕೊರವಂಜಿ ನಾರೀಮಣಿಯೇ! ಇದನ್ನೆಲ್ಲಾ ಮನ್ನಿಸು. ಮರೆತುಬಿಡು. ಸ್ವಲ್ಪ ಮುಂದೆ ನಾನು ನಿನ್ನ ಮೇಲೆ ತೋರಿಸಿದ ಕಾಠಿಣ್ಯವನ್ನು ನೆನೆದುಕೊಂಡರೆ, ನನ್ನಿಂದ ಈಗ ಅದನ್ನು ನಂಬುವುದೇ ಸಾಧ್ಯ ವಿಲ್ಲವಾಗಿದೆ. 'ನಿನ್ನನ್ನು ಮನ್ನಿಸಿದೆ' ಎಂದು ನೀನು ಒಂದು ಸಲ ಮಾತ್ರ ಹೇಳಿಬಿಡು. ಯಾವುದೋ ಒಂದು ಕೆಟ್ಟ ಸ್ವಪ್ನವನ್ನು ಕಂಡು ಬೆಚ್ಚಿಬಿದ್ದು ಎದ್ದು "ಸದ್ಯ ಅದೆಲ್ಲ ಕೆಟ್ಟ ಸ್ವಪ್ನ'' ಎಂದಂತೆ ಆಗಿದೆ ನನಗೆ.

**ಕೊರವಂಜಿ**— ಉತ್ತಮರೇ! ನೀವು ಹೇಳುವುದು ಮನಃಪೂರ್ವಕವಾಗಿ ನಿಶ್ಚಯವೆ?

**ಕಾಂತಂ ಐಯರ್**— ಇದು ಸತ್ಯ, ಸತ್ಯ!

**ಶಾಂತಮ್ಮಾಳ್**— ನಿನ್ನ ಬಾಯಿಂದ ಬಂದ ಮಾತು ಹಿರಿಯರ ಆಶೀರ್ವಾದದಿಂದ ಫಲಿಸಿ ನನ್ನ ಮಗಳು ಚೆನ್ನಾಗಿ ಬಾಳಬೇಕು. ಇವಳ ತಂದೆ ಒಂದು ಗಳಿಗೆ ಮುಂಚೆ ಏನೋ ಕೋಪಿಸಿಕೊಂಡಂತೆ ತೋರಿದರೇ ಹೊರತು ನಿಜವಾಗಿ ಚಿನ್ನದಂತಹ ಮನುಷ್ಯರು. ನಿನಗೆ ಏನು ಬೇಕೋ ಹೇಳು. ಎಲ್ಲವನ್ನೂ ಮಾಡಿ ಕೊಡುವರು.

**ಕೊರವಂಜಿ**— ತಾಯಿ, ನನಗೆ ಬೇರೆ ಏನೂ ಬೇಡ. ನಿಮ್ಮ ಮಾತೇ ನನಗೆ ಬಹುಮಾನ. ನನ್ನನ್ನು ಕಳುಹಿಸಿ ಕೊಡಿ. ನಾನು ಹೋಗಿಬರುತ್ತೇನೆ.

**ಕಾಂತಂ ಅಯ್ಯರ್**— ಸ್ವಲ್ಪ ನಿಲ್ಲು. ನಾನು ನಿನಗೆ ತಿರುಪೆ ಕಾಸು ಕೊಡುವುದಾಗಿ ಅಲ್ಲ ಹೇಳಿದುದು. ನೀನೊಂದು ಉಪಕಾರ ಮಾಡಿದರೆ ಬದಲಾಗಿ ಬೇಕಾದ ಉಪಕಾರ ಮಾಡುವೆ. ನಾನು ಯಾರೆಂಬುದು ನಿನಗೂ ಒಂದುವೇಳೆ ತಿಳಿದಿರಬಹುದು. ನನ್ನ "ಟಾಕಿ" ಗಳಲ್ಲಿ ಒಬ್ಬೊಬ್ಬಳು " ನಕ್ಷತ್ರ " ಕ್ಕೂ ನೂರು ಸಾವಿರ ಹಣ ಕೊಡುತ್ತೇನೆ. ಅರ್ಥವೇ ಇಲ್ಲದೇ ಉರು ಹಾಕಿದುದನ್ನು ಒಪ್ಪಿಸುವಂತೆ ಹಾಡುವ ತಲೆಗಳಿಗೆಲ್ಲಾ ಹಣ ಎರಚುತ್ತಿದ್ದೇನೆ. ಅವನ್ನು ಕೇಳುವುದಕ್ಕಾಗಿಯೇ ಸಹಸ್ರ ಸಂಖ್ಯೆಯಲ್ಲಿ ಜನ, ಆಡುಗಳಂತೆ ಬಂದು ಬೀಳುತ್ತಾರೆ. ನೀನು ಪಟ್ಟಣಕ್ಕೆ ಈ ಊರಿನಲ್ಲಿಯೇ ಮನೆ ಮಾಡಿಕೊಂಡು ವಾಸಿಸುತ್ತಾ—"

**ಕೊರವಂಜಿ**— ನಾನೇ? ಒಂದು ಊರಿನಲ್ಲಿ ಮನೆ ಮಾಡಿಕೊಂಡು ವಾಸಿಸುವುದೇ? ನನ್ನ ಹೂ ತುಂಬಿದ ಕಾಡನ್ನೂ, ಮಲೆನಾಡನ್ನೂ ಬಿಟ್ಟು ಬಿಟ್ಟು? ಚೆನ್ನಾಗಿ ಹೇಳಿದಿರಿ! ಬೆಳಗಿನ ಜಾವದಲ್ಲಿ ಹುಲ್ಲು, ಹೂವು, ಕುಸುಮಗಳೆಲ್ಲಾ ಕಣ್ಣು ಬಿಡುವಾಗ ತಂಗಾಳಿ ಬೀಸುವುದನ್ನು ಅನುಭವಿಸುತ್ತಾ ತಿರುಗುವುದನ್ನು ಬಿಟ್ಟು ಒಂದು ಮನೆಯಲ್ಲಿ ಮೆತ್ತೆ ಹಾಕಿಕೊಂಡು ಕುಳಿತುಕೊಳ್ಳಲೇ?

**ಕಾಂತಂ ಐಯರ್**— ಚೆನ್ನಾಗಿರಬಹುದು. ಆದರೂ ಮಳೆಯಲ್ಲಿಯೂ ಬಿಸಿಲಿನಲ್ಲಿಯೂ ಕಷ್ಟಪಟ್ಟುಕೊಂಡು—

**ಕೊರವಂಜಿ**— ಕಷ್ಟವೇ! ಅವುಗಳ ಸವಿಯನ್ನು ನೀವು ಹೇಗೆ ತಾನೇ ತಿಳಿದೀರಿ? ನಾಡೆಲ್ಲ ಬಿಸಿಲಿನ ಬೆಂಕಿಯಲ್ಲಿ ಬೆಂದು ನರಳುತ್ತಿರುವಾಗ, ಸಂಜೀವಿನಿಯಂತೆ ಬೀಳುವ ಮಳೆಯಲ್ಲಿ ನಡೆಯುವುದರ ಆನಂದವನ್ನು ನೀವು ಯಾವಾಗಲಾದರೂ ಪರೀಕ್ಷಿಸಿದ್ದೀರಾ? ಮಳೆ ತೋಯಿಸಿದ ಭೂಮಿಯ ಮೇಲೆ, ಬಿಸಿಲು ಬಲವಾಗಿ ಕಾದಂತೆ ಕಾಡಿನ ನಾಲ್ಕು ದಿಕ್ಕುಗಳಲ್ಲಿಯೂ ವಿಧ ವಿಧಗಳಾದ ನೂರಾರು ಪುಷ್ಪಗಳು ಅರಳಿ ಬರುತ್ತಿರುವಲ್ಲಿ ನೀವು ಅವುಗಳೊಂದಿಗೆ ಸಂತೋಷವಾಗಿ ಎಂದಾದರೂ ಆಡಿದುದು ಉಂಟೆ? ಇದನ್ನು ಬಿಟ್ಟು ಊರಿನಲ್ಲಿ ವಾಸಿಸುವುದೇ? ಇಲ್ಲಿ ಏನು ಬೆಳೆಯುತ್ತೆ? ಇಟ್ಟಿಗೆಯೊಂದು ಮಾತ್ರ ಬೆಳೆಯುವಂತೆ ತೋರುತ್ತೆ.

[ಮನೆಯೊಳಗೆ ನಾಯಿ ಗುರು ಗುರು ಎನ್ನುತ್ತದೆ]

**ಕಾಂತಂ ಐಯರ್**— ಯಾರೋ ಅಲ್ಲಿ? ನಾಯಿ ಯಾಕೆ ಗುರ್‌ಗುರ್

ಎನ್ನುತ್ತದೆ ನೋಡು. [ಕೊರವಂಜಿಯನ್ನು ಕುರಿತು] ಇಲ್ಲಿದ್ದರೆ ನಿತ್ಯಾ ದೇವರ ದರ್ಶನ ಮಾಡಬಹುದು.

**ಕೊರವಂಜಿ**— ಮಾಡಬಹುದು. ಕೊರವಂಜಿ ಹಣಗಾರ್ತಿಯಾದರೆ ಸನ್ನಿಧಿಯೊಳಕ್ಕೆ ಹೋಗಬಹುದೇ ? ಆದರೆ ಊರಿನ ಹೊರಗೆ ನಿಂತು, ಬೆಳದಿಂಗಳಿನಲ್ಲಿ ಅರ್ಧಗಳಿಗೆ ಗೋಪುರವನ್ನು ನೋಡಿದರೆ ದೇವರನ್ನೇ ನೋಡಿದಂತೆ ಮನಸ್ಸಿಗೆ ಆನಂದವಾಗುವುದಲ್ಲ; ಊರಿನಲ್ಲಿ ವಾಸಿಸುವವರಿಗೆ ಈ ದೃಶ್ಯ ದೊರಕೀತೇ ?

**ಕಾಂತಂ ಐಯರ್**— ಆದರೂ ಹೀಗೆ ಅನಾಥೆಯಾಗಿ—

**ಕೊರವಂಜಿ**— ಅನಾಥೆಯೇ ? ಯಾರು ಅನಾಥೆ? ದೇವರು ಇರುವವರೆಗೆ ಅನಾಥೆ ಎಂದು ಹೇಳಬಹುದೇ ? [ನಗುತ್ತಾಳೆ]

**ಕಾಂತಂ ಐಯರ್**— [ಹೆಂಡತಿಗೆ ಗಟ್ಟಿಯಾಗಿ] ಇವಳಿಗೆ ನಮಸ್ಕಾರ ಮಾಡುವುದಕ್ಕೆ ಕೂಡ ನಮಗ್ಯಾರಿಗೂ ಯೋಗ್ಯತೆ ಇಲ್ಲ.

**ಕೊರವಂಜಿ**— ನಾವು ಹೋಗಿ ಬರುತ್ತೇವೆ—

[ಕೊರವಂಜಿಯೂ ಹುಡುಗನೂ ಹಾಡುತ್ತಾ ಹೋಗುವರು]

ಕೊಚ್ಚಿಮಲೆ ಕುಡುಗುಮಲೆ ಎಂಗಳದು ನಾಡು
ಕುಮರೇಶನ್ ವಾಳುವದುಂ ಎಂಗಳದು ನಾಡು

[ನಾಯಿ ಮತ್ತೆ ಒಳಗೆ ಗುರು ಗುರು ಎನ್ನುತ್ತದೆ]

**ಕಾಂತಂ ಐಯರ್**— ಯಾರೋ ಅಲ್ಲಿ ? ನಾಯನ್ನು ಬಿಚ್ಚಿಕೊಂಡು ಬಾ. ಯಾಕೆ ಗುರುಗುಟ್ಟುತ್ತಿದೆ ನೋಡೋಣ. ಅವರ ಹಾಡನ್ನು ಕೇಳುವುದಿಲ್ಲ ಎನ್ನುತ್ತಿದೆ ಅದು.

**ಶಾಂತಮ್ಮಾಳ್**— ಅವಳು ಹೋಗಿಬಿಟ್ಟುದರಿಂದ ನಾನು ಹೆತ್ತು ಸಾಕಿದ ಒಬ್ಬ ಮಗಳನ್ನು ಕಳೆದುಕೊಂಡಂತೆ ಆಗಿದೆ.

**ಕಾಂತಂಐಯರ್**— [ನಿಟ್ಟುಸಿರು ಬಿಟ್ಟು] ನನ್ನ ಆಸೆ ಬರಿಯ ವ್ಯರ್ಥವಾದ ಆಸೆ. ಆ ಬಗೆಯ ಮನಸ್ಸುಳ್ಳವರು ಮಾತ್ರ ಹಾಗೆ ಹಾಡಬಲ್ಲರು. ಅವಳ ಮನೋಭಾವವನ್ನು ನಮ್ಮ ಮನೋಭಾವದಂತೆ ಮಾಡಿದರೆ, ಅವಳು ಹಾಡನ್ನೂ ನಮ್ಮಂತೆ ಹಾಡುವಳು. ಆಮೇಲೆ, ಪೆಟ್ಟಿಗೆಯಲ್ಲಿ ಮುಚ್ಚಿಟ್ಟ ಗುಲಾಬಿ ಗಿಡವನ್ನು, ಹೂವು ಬಿಡು, ಎಂದು ಹೇಳಿದಂತೆಯೇ. [ಮನೆಯೊಳ

ಗಿನಿಂದ ನಾಯಿ ಬಂದು ಮತ್ತು ಬಂದಂತೆ ಕಾಂತಂ ಅಯರ್ ಕಾಲಿನ ಬಳಿ ಬಿದ್ದುಕೊಳ್ಳುತ್ತದೆ] ಏನು ಸಮಾಚಾರ! ಒಂದು ಗಳಿಗೆ ಮುಂಚೆ ಸುಮ್ಮನೆ ಗುರುಗುಟ್ಟಿತು. ಈಗ ಬಾಯಿಗೆ ಬೀಗ ಹಾಕಿಕೊಂಡುಬಿಟ್ಟಿದೆ.

**ಆಳು**—[ತಲೆಯನ್ನು ಕೆರೆಯುತ್ತಾ] ಆ ಕೊರವಂಜಿ ಇದಕ್ಕೆ ಮಂತ್ರ ಹಾಕಿರಬೇಕು.

**ಕಾಂತಂ ಐಯರ್**— ಹೋಗೋ ಮಡ್ಡಿ! [ನಾಯಿಯ ಬಾಯೊಳಗೆ ಕೈ ಬೆರಳಿಟ್ಟು ನೋಡುವರು. ನಾಯಿ ಚಿನ್ನದ ಬಳೆಯನ್ನು ಹೊರಕ್ಕೆ ಕಕ್ಕು ವುದು] ಹಾ! ದೇವರೇ! ಸಂಗತಿ ಹೀಗಿರುವಲ್ಲಿ ಒಂದು ಗಳಿಗೆ ಮುಂಚೆ ಎಂತಹ ಕ್ರೂರ ಅನ್ಯಾಯವನ್ನು ಮಾಡುತ್ತಿದ್ದೆ! ಅದನ್ನೇ ಮುಂದುವರಿಸಿದ್ದರೆ ನನ್ನ ಆಯಸ್ಸು ಪೂರ್ತಾ ನಿಂದೆಗೆ ಗುರಿಯಾಗುತ್ತಿದ್ದೆನಲ್ಲಾ! ಭಕ್ತರನ್ನು ದೇವರು ಕಾಪಾಡುತ್ತಾನೆ ಎಂದು ಹೇಳುವುದುಂಟು. ಆದರೆ ಈಗ ಭಕ್ತಳಾದ ಕೊರವಂಜಿ ಹಾಡಿದುದನ್ನು ಸುಮ್ಮನೆ ಕೇಳಿಕೊಂಡಿದ್ದ ನನ್ನನ್ನು ಸಹ ದೇವರು ಕಾಪಾಡಿದನಲ್ಲ!

[ಹಾಡುತ್ತಾರೆ]

ನೀ ನಾಮ ರೂಪಮುಲಕು

---

# ಪತ್ತೇದಾರಿ

ಸಸ ರಿರಿ ಗಗ ಮಮ
ಪಪ ದದ ನಿನಿ ಸಸ

ಎಂದು ಜಂಟಿ ವರಸೆ ಹೊರಡುತ್ತಲೇ ಇತ್ತು. ನನಗೆ ಸಹಿಸುವುದಕ್ಕೆ ಆಗಲಿಲ್ಲ.

"ಲಲಿತಾ! ಲಲಿತೇ! ಲಲಿತಾ! ತೇ! ತಾ! ತೇ!" ಎಂದು ಕೂಗಿದೆ.

"ಬಂದುಬಿಟ್ಟೇ! ಟ್ಟೇ! ಟ್ಟೇ! ಟ್ಟೇ!" ಎಂದು ಅವಳು ಪ್ರತಿಯಾಗಿ ಕೂಗಿದಳು. ಒಂದು ನಿಮಿಷದೊಳಗೆ ಎದುರಿಗೆ ಬಂದು ನಿಂತಳು.

"ಹಾಡು ಕಲಿತದ್ದು ಸಾಕು. ವೀಣೆ ಮೇಷ್ಟರನ್ನು ಕಳಿಸಿಬಿಡು. ನಿನಗೆ ಒಂದು ಸಮಾಚಾರ ಹೇಳುವುದಿದೆ."

"ಅವರನ್ನು ನಾನು ಕಳುಹಿಸಬೇಕಾಗಿಲ್ಲ. ನಿಮ್ಮ ಗಂಟಲಿನ ಶ್ರುತಿ ಕೇಳಿದ ಕ್ಷಣವೇ ಅವರು ತಾವಾಗಿಯೇ ಎದ್ದು ಹೋಗಿಬಿಟ್ಟರು. ಏನು ಸಮಾಚಾರ, ಹೇಳಿ."

"ಇನ್ನೇನೂ ಇಲ್ಲ. ಬೀದಿಯ ಮೂಲೆಯಲ್ಲಿ ಒಂದು ರೋಜಾ ಬಣ್ಣದ ಮನೆ ಕಟ್ಟಿದ್ದಾರಲ್ಲಾ, ಆ ಮನೆಯಲ್ಲಿ ನಿನ್ನೆ ರಾತ್ರಿ ಕಳ್ಳತನವಾಯಿತಂತೆ....."

"ಅಲ್ಲೇ! ಇಷ್ಟರಲ್ಲಿ ಆ ಮನೆಗೆ ಯಾರು ವಾಸ ಬಂದರು ಅಂದ್ರೆ? ಇನ್ನೂ ಕಟ್ಟಿ ಮುಗಿದಿಲ್ಲ ಅಂತ ತಿಳಿದುಕೊಂಡಿದ್ದೆನಲ್ಲಾ?"

"ಅದು ಆಗಲೇ ಮುಗಿದು ಹೋಯಿತಲ್ಲಾ! ವಾಸಕ್ಕೆ ಬಂದು ಒಂದು ವಾರ ಆಯಿತು. ಅಷ್ಟರಲ್ಲೇ ಒಂದು ಕಳ್ಳತನ. ಪಾಪ! ಒಳ್ಳೆಯ ವಜ್ರ ದುಂಗುರವಂತೆ."

"ಅಯ್ಯೋ ಪಾಪ! ಆದರೆ ಆ ವಿಷಯವನ್ನು ಇಷ್ಟು ಆತುರದಿಂದ ನನ್ನ ಹತ್ತಿರ ಹೇಳಬೇಕಾದುದೇನು? ನಾನು ಒಂದು ವಜ್ರದ ಉಂಗುರ ಬೇಕು ಎಂದು ಕೇಳುತ್ತಿದ್ದೆನಲ್ಲಾ, ಈಗ ಇಂತಹ ಕಳ್ಳತನಕ್ಕೆ ಹೆದರಿ ಆ ಆಶೆಯನ್ನೇ ಬಿಟ್ಟುಬಿಡಲಿ ಅಂತಲೋ?"

"ಚೆನ್ನಾಗಿದೆ! ಒಡವೆಯ ಹುಚ್ಚನ್ನು ಅಷ್ಟು ಸುಲಭವಾಗಿ ಬಿಡಿಸುವುದಕ್ಕಾಗುತ್ತದೆಯೇ? ಅದಕ್ಕಾಗಿ ಅಲ್ಲ."

"ನನಗೇನೂ ಒಡವೆಯ ಹುಚ್ಚು ಹಿಡಿದಿಲ್ಲ. ವೀಣೆ ಬಾರಿಸುವ ಬೆರಳಿಗೆ ಒಂದು ಉಂಗುರ ಹಾಕಿಕೊಂಡರೆ ಚೆನ್ನಾಗಿ ಕಾಣುತ್ತದೆಯಲ್ಲ ಎಂದು ಕೇಳಿದೆ."

"ವೀಣೆ ಬಾರಿಸುವ ಬೆರಳಲ್ಲ, ಮುಂದೆ ಎಂದೋ ಬಾರಿಸುವುದಾಗಿ ನೀನು ತಿಳಿದುಕೊಂಡಿರುವ ಬೆರಳು. ಇನ್ನೂ ಜಂಟಿ ವರಸೆಯಲ್ಲೇ ಅದು ಸಂಚಾರ ಮಾಡುತ್ತಿದೆ. ಒಂದು ಕೀರ್ತನೆಯನ್ನಾದರೂ ಕಲಿಯುವುದಕ್ಕೆ ಮುಂಚೆಯೇ, ನನ್ನ ಒಳ್ಳೆಯ ಅದೃಷ್ಟದಿಂದ ನನಗೆ ವಯಸ್ಸಾಗಿ ಹೋಗಿ ಕಿವಿ ಮಂದವಾಗಿಬಿಡುತ್ತದೆ. ಆಮೇಲೆ ಯೋಚನೆ ಇಲ್ಲ."

"ಬಹಳ ನಿಜ! ಅದಿರಲಿ. ಆ ಮನೆಯವರ ಹೆಸರೇನು?"

"ಹೆಸರೇ? ರಾಮಚಂದ್ರಶಾಸ್ತ್ರಿಗಳು ಎಂದು ಯಾರೋ ಹೇಳುತ್ತಿದ್ದ ಹಾಗೆ ಇತ್ತು."

"ವಕೀಲರು ತಾನೇ?"

" ಇರಬಹುದು! ಏಕೆಂದರೆ ಬಾಗಿಲಿನಲ್ಲಿ ಒಂದು ಬೋರ್ಡು ನೋಡಿದ ಜ್ಞಾಪಕವಿದೆ."

" ಹಾಗಾದರೆ ಅವರ ಹೆಂಡತಿಯ ಹೆಸರು ಸೀತಾಲಕ್ಷ್ಮಿ ಅಲ್ಲವೇ ?"

ಈ ಪಾಟೀ ಸವಾಲನ್ನೆಲ್ಲಾ ನಾನು ನಿರೀಕ್ಷಿಸಿರಲಿಲ್ಲ. ಅವುಗಳಿಗೆ ಸಿದ್ಧ ವಾಗಿಯೂ ಇರಲಿಲ್ಲ. " ಅದೆಲ್ಲಾ ನನಗೇನು ಗೊತ್ತು, ಯಾತಕ್ಕೆ ?" ಎಂದೆ.

" ಅವರೇ ಆಗಿದ್ದರೆ ನನಗೆ ಚೆನ್ನಾಗಿ ಗೊತ್ತು. ನಮ್ಮಜ್ಜಿ ಮನೆಗೆ ಆಗಾಗ ಬರುತ್ತಾರೆ. ಬಾಲ್ಯದಿಂದಲೂ ನನಗೆ ಗೊತ್ತು."

" ಅದಕ್ಕೆ ಏನು ಮಾಡಬೇಕು ಅಂತೀಯ ?"

" ಏನು ಮಾಡೋದು ? ನಮಗೆ ಬೇಕಾದವರ ಮನೇಲಿ ಒಂದು ಕಳ್ಳತನ ನಡೆದರೆ, ಅವರ ಹತ್ತಿರ ಹೋಗಿ ವಿಚಾರಿಸೋದು ಮರ್ಯಾದೆ ಅಲ್ಲವೇಂದ್ರೇ?"

" ಇದೇನಪ್ಪಾ! ನೀನು ಹೋಗಿ ದಿಢೀರನೆ ಯಾರ ಮನೆಯೊಳಕ್ಕೋ ನುಗ್ಗಿಬಿಟ್ಟು, ಅವರು ನೀನು ಹಿಂದೆ ಮುಂದೆ ನೋಡದ ಬೇರೆಯವರಾಗಿಬಿಟ್ಟರೆ! ಆಮೇಲೆ ನೀನು ಯಾರು ಎಂದು ಕೇಳಿದರೆ, ಜವಾಬು ಹೇಳುವುದಕ್ಕಾಗದೆ ಪೆಚ್ಚು ಮುಖ ಹಾಕಿಕೊಳ್ಳಬೇಕಾಗುತ್ತದೆ."

" ಏನೂ ಪೆಚ್ಚು ಮುಖ ಇಲ್ಲ. ಮೊದಲೇ ಅಲ್ಲಿ ಹೋಗಿಬಿಡುತ್ತೇನೆಯೇ! ಆ ಮನೆಯ ಎದುರು ಮನೆಯ ಕಟ್ಟಡವೇ ನಮ್ಮ "ಲೇಡೀಸ್ ಕ್ಲಬ್ಬು." ಅಲ್ಲಿದ್ದುಕೊಂಡು ಸರಿಯಾಗಿ ವಿಚಾರಿಸಿಕೊಂಡು ಬರುವಂತೆ ಜವಾನನನ್ನು ಕಳುಹಿಸಿ ತಿಳಿದುಕೊಂಡು ನಾನು ಆಮೇಲೆ ಹೋಗುತ್ತೇನೆ. ನೀವೇನೂ ಭಯಪಡ ಬೇಕಾಗಿಲ್ಲ."

ಭಯಪಡಬೇಡವಂತೆ! ನಾನಿನ್ನೇನು ಮಾಡಲಿ ? ಲಲಿತಾ ಒಂದನ್ನು ಹಿಡಿದುಕೊಂಡುಬಿಟ್ಟರೆ, ಅನಂತರ ಹೇಳಿ ಉಪಯೋಗವಿಲ್ಲವೆಂದು ನನಗೆ ಗೊತ್ತು. ಆದ್ದರಿಂದ ಆದುದು ಆಗಲಿ ಎಂದು ಅಷ್ಟಕ್ಕೆ ಸುಮ್ಮನಿದ್ದುಬಿಟ್ಟೆ.

ಆ ಸಾಯಂಕಾಲ ಅವಳು ಕ್ಲಬ್ಬಿನಿಂದ ಹಿಂದಿರುಗುವುದನ್ನು ನಾನು ಸ್ವಲ್ಪ ಆತುರದಿಂದ ಕಾಯುತ್ತಿದ್ದೆ. ಏನು ನಡೆಯಿತೋ, ಹೋಗಿ ಏನು ಹೇಳುತ್ತಾಳೋ ಎಂದು ಯೋಚನೆ. ಸಂತೋಷದಿಂದ ಕೈ ತಟ್ಟಿಕೊಂಡು ಬಂದಳು.

" ನಾನು ವಿಚಾರಿಸಿದ್ದು ಬಹಳ ಒಳ್ಳೆಯದಾಯಿತು. ಆ ಮನೆಯ

ಯಜಮಾನಿಯೇ ಅಜ್ಜಿಯ ಸ್ನೇಹಿತೆ ಸೀತಾಲಕ್ಷ್ಮಿ. ಅವಳನ್ನು ಈ ದಿವಸ ಕ್ಲಬ್ಬಿಗೆ ಮೆಂಬರಾಗಿ ಸೇರಿಸಿಬಿಟ್ಟೆ."

"ಅದಿರಲಿ. ಕಳ್ಳತನದ ವಿಚಾರ ಏನು ಹೇಳಿದಳು?"

"ಏನು ಹೇಳಿದಳೇ? ಏನು ಹೇಳಲಿಲ್ಲ? ನಿಮಗೆ ಅರ್ಧ ವಿಚಾರ ಮಾತ್ರ ಗೊತ್ತಾಗಿದ್ದ ಹಾಗಿದೆ. ಆಕೆ ನನ್ನ ಹತ್ತಿರ ಎಲ್ಲವನ್ನೂ ಪೂರ್ತಿಯಾಗಿ ಹೇಳಿದಳು. ಆದರೆ ಪೋಲೀಸರಿಗೆ ಇನ್ನೂ ಏನೂ ತಿಳಿಸಿಲ್ಲವಂತೆ. ನನ್ನನ್ನು ಹೋಗಬೇಡ ಅಂದಿರಲ್ಲಾ! ಹೋದದ್ದರಿಂದ ತಾನೇ ಸ್ವಾರಸ್ಯವಾದ ಪೂರ್ತಿ ಸಮಾಚಾರವೆಲ್ಲಾ ಗೊತ್ತಾಯಿತು."

"ಪೂರ್ತಿ ಸಮಾಚಾರ ಏನು? ನನಗೆ ತಿಳಿದ ಅರ್ಧ ಸಮಾಚಾರ ಏನು?"

"ಪೆಟ್ಟಿಗೆಯಿಂದ ವಜ್ರದುಂಗುರ ಕಳ್ಳತನವಾದದ್ದು ಮಾತ್ರ ನಿಮಗೆ ಗೊತ್ತು. ಆದರೆ ಅದನ್ನು ಇಟ್ಟಿದ್ದ ಜಾಗದಲ್ಲಿ ಏನು ಕಂಡರು ಗೊತ್ತೇ? ಅದಕ್ಕೆ ಬದಲಾಗಿ ಕಳ್ಳ ಒಂದು ಪಚ್ಚೆ ಉಂಗುರ ಇಟ್ಟುಬಿಟ್ಟು ಹೋಗಿದ್ದಾನಂತೆ. ಅದು ನಿಮಗೆ ಗೊತ್ತೇ ಇಲ್ಲವಲ್ಲ? ಅವನು ಯಾಕೆ ಹಾಗೆ ಮಾಡಿದನೋ? ಮರೆತೋ, ಕೈ ತಪ್ಪಿಸಿಂದಲೋ ಅಥವಾ ಬೇಕೂ ಅಂತ ಮಾಡಿದ ಕೆಲಸವೋ, ಭಗವಂತನಿಗೇ ಗೊತ್ತು."

ಇದೆಲ್ಲವನ್ನೂ ಕೇಳುತ್ತಿದ್ದ ಹಾಗೆಯೇ ನನಗೆ ಉಂಟಾದ ಆಶ್ಚರ್ಯ ಹೇಳಿ ತೀರದು. "ಪಚ್ಚೆ ಯಾವುದು, ಉಂಗುರ ಯಾವುದು? ಇಟ್ಟುಬಿಟ್ಟು ಹೋಗುವುದೇನು! ಒಳ್ಳೆಯ ಪಚ್ಚೆಯಾದರೆ ವಜ್ರಕ್ಕಿಂತಲೂ ಹೆಚ್ಚು ಬೆಲೆಯೇ ಆಯಿತಲ್ಲಾ!" ಎಂದೆ.

"ತನ್ನ ಕಲ್ಲಿಗಿಂತ ಇದಕ್ಕೆ ಎರಡರಷ್ಟಾದರೂ ಬೆಲೆ ಇದೆ ಎಂದು ಆಕೆ ಬಹಳ ಸಂತೋಷದಿಂದಿದ್ದಾಳೆ."

"ಹಾಗಾದರೆ ಅದನ್ನು ತತ್‌ಕ್ಷಣ ಪೋಲೀಸಿನವರಿಗೆ ತಿಳಿಸಬೇಡವೇ?"

"ಏತಕ್ಕೆ? ಏನಾದರೂ ನಷ್ಟ ಆದರೆ ಪೋಲೀಸಿನವರ ಸಹಾಯ ಹುಡುಕಬೇಕು. ಲಾಭ ಸಿಕ್ಕಿದರೆ ಅದನ್ನು ಯಾಕೆ ಡಂಗುರ ಹಾಕಬೇಕು? ಬಿಟ್ಟು ಕೊಡುತ್ತಾರೆಯೇ? ಧೈರ್ಯ ಇದ್ದರೆ ಆ ಕಳ್ಳ ಬಂದು ತನ್ನ ಉಂಗುರವನ್ನು ಕೇಳಲಿ!"

"ತುಂಬ ಚೆನ್ನಾಗಿದೆ ನಿನ್ನ ವಾದ! ಕಳ್ಳ ಇಟ್ಟುಬಿಟ್ಟು ಹೋಗಿರುವುದೂ

ಕಳ್ಳತನದ ಮಾಲೇ ತಾನೇ ? ಅದನ್ನು ನಾವೇ ತೆಗೆದುಕೊಳ್ಳುವುದೇ ? ಅದರ ಫಾಲೀಕನನ್ನು ಕಂಡು ಹಿಡಿಯಬೇಡವೇ ?"

"ಆಕೆಯ ಗಂಡನೂ ಹೀಗೆಯೇ ನ್ಯಾಯ ಹೇಳಿದರಂತೆ. ಆದ್ದರಿಂದ 'ಬೇರೆ ಏನೂ ಮಾಡಬೇಡ. ಅದರ ಮಾಲೀಕನನ್ನು ನಾನು ಕಂಡು ಹಿಡಿಯುತ್ತೇನೆ' ಎಂದು ಅವಳ ಹತ್ತಿರ ಹೇಳಿಬಿಟ್ಟು ಬಂದಿದ್ದೇನೆ."

"ನೀನೇ ?" ಎಂದು ಆಶ್ಚರ್ಯ ಸೂಚಿಸಿದೆ.

ಲಲಿತಾ ಮಾತನಾಡದೆ, ಕನ್ನಡಿಯ ಎದುರಿಗೆ ಕುಳಿತುಕೊಂಡು, ತನ್ನ ಓರೆ ಬೈತಲೆಯನ್ನು ಮುಟ್ಟಿ ಮುಟ್ಟಿ ಪ್ರೇಮದಿಂದ ತಡವಿಕೊಳ್ಳುತ್ತಾ ಇನ್ನೂ ಓರೆಯಾದ ನೋಟದಿಂದ ನೋಡಿದಳು.

"ಬೈತಲೆ ಕೆಲಸ ಸ್ವಲ್ಪ ನಿಲ್ಲಿಸಿಬಿಟ್ಟು, ಇದನ್ನು ಸ್ವಲ್ಪ ನನಗೆ ವಿವರವಾಗಿ ಹೇಳು. ಅವರ ಹತ್ತಿರ ಹೇಳಿಬಿಟ್ಟು ಬಂದಿದ್ದೀಯಲ್ಲಾ, ನೀನು ಪ್ರತಿಯೊಂದು ಮನೆಗೂ ಹೋಗಿ ವಿಚಾರಿಸುತ್ತೀಯೋ ಅಥವಾ ಈ ಸ್ಥಳದಿಂದಲೇ ಮನಸ್ಸಿನ ಶಕ್ತಿಯನ್ನೇ ಉಪಯೋಗಿಸಿ ನೋಡುತ್ತೀಯೋ ?" ಎಂದು ಕೇಳಿದೆ.

"ಅದು ಹೇಗೋ ! ಕಳ್ಳತನ ಕಂಡು ಹಿಡಿಯುವುದರಲ್ಲಿ ಬೇರೆಯವರಿಗೆ ತಿಳಿದದ್ದು ನನಗೂ ತಿಳಿಯುತ್ತದೆಯೋ ಇಲ್ಲವೋ ನೋಡಿ. ಇನ್ನೇನಿಲ್ಲದೇ ಹೋದರೂ, ನಿಮ್ಮ ಸ್ನೇಹಿತರು ಇನಿಸ್ಪೆಕ್ಟರ್ ಮೌಳಿಗೆ ಇರುವ ಸಾಮರ್ಥ್ಯ ನನಗಿಲ್ಲದೆ ಹೋಗುತ್ತದೆಯೋ ನೋಡೋಣ."

"ಕೆಲವು ಪತ್ತೇದಾರಿ ಕತೆಗಳನ್ನು ಓದಿಬಿಟ್ಟಿದ್ದೀಯಲ್ಲಾ, ಅವರಿಂದಲೊ ಈ ಜಂಬ ?"

"ಕೆಲವು ಕತೆಗಳೇ ? ಕಳೆದ ಐದಾರು ವರ್ಷಗಳಿಂದ, ಮೂರು ಭಾಷೆಗಳಲ್ಲೂ ಹೊರಡುವ ಕತೆಗಳಲ್ಲಿ ಒಂದನ್ನೂ ಬಿಡದೆ ಎಲ್ಲವನ್ನೂ ಓದುತ್ತಿದ್ದೇನಲ್ಲ ?"

"ಮೂರು ಭಾಷೆಗಳೇ ? ನಿನಗೆ ಮೂರು ಭಾಷೆಗಳು ಯಾವ ಯಾವುದು ಗೊತ್ತು?"

"ಹೌದು, ತಮಿಳು ಒಂದು, ಇಂಗ್ಲಿಷ್ ಒಂದು. ಇದಲ್ಲದೆ, ಕೆಲವರು– ಕೆಲವರು ಅಂದರೆ ನೀವಲ್ಲ, ನಿಮ್ಮನ್ನು ಸೇರಿಸುತ್ತೇನೆಯೇ ?—ಬೇರೆ ಕೆಲವರು ತಾವು ಬರೆಯುವುದೇ ಶುದ್ಧ ತಮಿಳೆಂದು ನಂಬಿಕೊಂಡು ಬರೆಯುವ ಭಾಷೆ ಇದೆಯಲ್ಲಾ, ಅದೊಂದು. ಒಟ್ಟು ಮೂರು."

ನಾನು ಸ್ವಲ್ಪ ಖಂಡಿಸಿಯೇ ಹೇಳಿದೆ. "ಇಲ್ಲಿ ನೋಡು ಲಲಿತಾ! ಇದು ಹೆಣ್ಣಾಗಿ ಹುಟ್ಟಿದವಳು ಮಾಡುವ ಕೆಲಸವಲ್ಲ. ಹುಡುಗಾಟವಾಡುತ್ತ ನೀನು ಇದರಲ್ಲಿ ಪ್ರವೇಶಿಸಬೇಡ. ನಾಳೆ ಬೆಳಿಗ್ಗೆ ನಾನು ಹೋಗಿ ವಿಚಾರಿಸಿ ಕೊಂಡು ಬರುತ್ತೇನೆ."

"ಅವರಿಗೆ ನಿಮ್ಮ ಪರಿಚಯ ಇಲ್ಲವಲ್ಲಾ. ನೀವು ಕೇಳಿದರೆ ಅವರು ಹೇಳುತ್ತಾರೋ ಇಲ್ಲವೋ? ನಾನೂ ಬರುತ್ತೇನೆ.

"ಬೇಡ. ಮೌಳಿಯ ಹತ್ತಿರ ಒಂದು ಇನ್‌ಸ್ಪೆಕ್ಟರ್ ಯೂನಿಫಾರಂನ್ನ ಸಾಲವಾಗಿ ತೆಗೆದು ಧರಿಸಿಕೊಂಡು, ಪೋಲೀಸ್ ಧೋರಣೆಯಲ್ಲಿ ಹೋಗಿ ಕೇಳುತ್ತೇನೆ. ಆಗ ಅವರು ಯಾವುದನ್ನೂ ಮುಚ್ಚಿಡಲಾರರು" ಎಂದು ಹೇಳಿ ಆ ವಿಷಯವನ್ನು ಮುಗಿಸಿದೆ.

ಮಾರನೆಯ ದಿನ ಬೆಳಗ್ಗೆ ನಾನು ಹೋಗಿ ವಿಚಾರಿಸಿಬಿಟ್ಟು ಬರುವುದ ರೊಳಗೆ ಹನ್ನೊಂದು ಗಂಟೆ ಆಗಿಹೋಗಿತ್ತು. ನಾನು ಹೇಳುವ ಸುದ್ದಿಯನ್ನು ಕೇಳಬೇಕೆಂದು ಊಟವನ್ನೂ ಮಾಡದೆ, ಆಸೆಯಿಂದ ಕಾಯುತ್ತಿದ್ದಳು ಲಲಿತಾ.

"ನಾನು ಆಗಲೇ ಹೇಳಲಿಲ್ಲವೇ, ಇದು ಹೆಂಗಸರು ಹೊತ್ತುಕೊಳ್ಳುವ ಕಾರ್ಯವಲ್ಲ ಎಂದು? ಆ ಮನೆಯ ಗಂಡಸನ್ನು ಕೆದಕಿ ಗದರಿಸಿ ಬೆದರಿಸಿ ಕೇಳುವ ಹೊತ್ತಿಗೆ ಪೂರ್ತಿ ನಿಜವಾದ ಸಮಾಚಾರ ಹೊರಬಂದಿತು. ಅವರ ಪೆಟ್ಟಿಗೆಯಲ್ಲಿ ಏನಿತ್ತು ಗೊತ್ತೇ, ಆ ಪಚ್ಚೆ ಉಂಗುರವಲ್ಲದೆ? ಪೂರ್ತಿಯಾಗಿ ಗೆಣ್ಣಿನ ಹತ್ತಿರಕ್ಕೆ ಕತ್ತರಿಸಿ ಹಾಕಿದ್ದ ಯಾರದೋ ಒಂದು ಉಂಗುರದ ಬೆರಳೇ ಬಿದ್ದಿತ್ತು ಎಂಬ ಊಹೆ! ಆದ್ದರಿಂದಲೇ ಅವರು ಹೆದರಿಕೊಂಡು ತಕ್ಷಣ ಪೋಲೀಸರ ಹತ್ತಿರ ಹೇಳಲಿಲ್ಲ. ವಜ್ರದ ಉಂಗುರ ಕಳುವಾದದ್ದನ್ನು ಪೋಲೀ ಸರು ನಂಬದೆ, ತಾವೇ ಆಭರಣಕ್ಕೆ ಆಸೆಪಟ್ಟು ಮತ್ತೊಬ್ಬರ ಬೆರಳನ್ನು ಕತ್ತರಿಸಿ ಹಾಕಿರುವುದಾಗಿ ತಮ್ಮ ಮೇಲೇ ತಪ್ಪು ಹೊರಿಸಿಬಿಟ್ಟರೆ ಏನು ಮಾಡುವುದು ಎನ್ನುವ ಹೆದರಿಕೆ ಅವರಿಗೆ" ಎಂದು ನಾನು ಕೇಳಿದ್ದನ್ನೂ, ಊಹಿಸಿದುದನ್ನೂ ಸೇರಿಸಿ ಹೇಳಿದೆ.

"ಕತ್ತರಿಸಿದ ಬೆರಳೇ? ಅಯ್ಯೋ! ಪೆಟ್ಟಿಗೆಯೆಲ್ಲಾ ರಕ್ತಮಯವಾಗಿ ದ್ದಿರಬೇಕಲ್ಲ! ಸದ್ಯ, ನಾನು ಪೆಟ್ಟಿಗೆಯನ್ನು ನೋಡಲಿಲ್ಲ" ಎಂದು ಹೇಳಿ ದೇಹಾದ್ಯಂತ ಕಂಪಿಸಿದಳು.

"ಇದು ನಿಶ್ಚಯ. ಇನ್ನು ಮೇಲಾದರೂ ಈ ವಿಷಯವನ್ನು ಬಿಟ್ಟು ಬಿಡು. ನಮಗೇತಕ್ಕೆ ಇದು? ಬಾ, ಹೊತ್ತಾಯಿತು, ಊಟ ಮಾಡೋಣ" ಎಂದು ಕರೆದುಕೊಂಡು ಹೋದೆ.

ಆದರೂ, ಆ ದಿನ ಸಾಯಂಕಾಲ ಲಲಿತಾ ಏನು ಮಾಡಿಬಿಡುತ್ತಾಳೆಯೋ ಎನ್ನುವ ಯೋಚನೆಯೇ ನನಗೆ. ಅನೇಕ ವಿಧವಾಗಿ ಊಹಿಸಿದೆನೇ ಹೊರತು, ನಿಜವಾಗಿ ಆ ದಿವಸ ಏನು ನಡೆಯುತ್ತದೆ ಎಂಬುದನ್ನು ನಾನು ನಿರೀಕ್ಷಿಸಲಿಲ್ಲ.

ದೀಪ ಹತ್ತಿಸುವ ಹೊತ್ತಾಗಿದ್ದಿರಬಹುದು. ಲಲಿತಾ ಕಣ್ಣುಗಳನ್ನು ಹೊಸಕಿಕೊಳ್ಳುತ್ತಾ, ನಿಟ್ಟುಸಿರು ಬಿಡುತ್ತಾ ಮಹಡಿಯ ಮೆಟ್ಟಲುಗಳನ್ನು ಹತ್ತಿ ಬಂದು, "ಅಯ್ಯೋ! ಆ ಪಾಪಿಗೆ ನಿಮ್ಮನ್ನು ಬಿಟ್ಟು ಕೊಟ್ಟುಬಿಟ್ಟೆನಲ್ಲಾ! ಇನ್ನು ನಾವು ಇಲ್ಲಿ ಒಂದು ಕ್ಷಣವೂ ಸಾವಕಾಶ ಮಾಡಕೂಡದು. ಎಲ್ಲಿಯಾದರೂ ಓಡಿಹೋಗಿಬಿಡಬೇಕು, ಹೊರಡಿ. ಬೇಗ ಹೊರಡಿ" ಎಂದು ಒಂದೇ ಉಸುರಿಗೆ ಒದರಲಿದಳು.

ನಾನು ಗಾಬರಿಯಿಂದ "ಏನು ಸಮಾಚಾರ?" ಎಂದು ಕೇಳಿದೆ.

"ಆ ಸೀತಾಲಕ್ಷ್ಮಿಯ ಹತ್ತಿರ, 'ಹಾಗೆ ನನ್ನ ಯಜಮಾನರೇ ತಾನೇ ಇವತ್ತು ಬೆಳಿಗ್ಗೆ ಇನ್‌ಸ್ಪೆಕ್ಟರ್ ವೇಷ ಹಾಕಿಕೊಂಡು ನಿಮ್ಮನ್ನು ಕೆದಕಿ ಗದರಿಸಿ ನಿಜವನ್ನು ಕಂಡು ಹಿಡಿದದು!' ಎಂದು ನನ್ನ ಜಂಬವನ್ನು ಹೇಳಿಕೊಂಡೆ. ಆಗ ಆ ಪಾಪಿ ಏನು ಮಾಡಿದಳು ಗೊತ್ತೇ? ತಾವು ತಪ್ಪಿಸಿಕೊಳ್ಳಲು ಇದೇ ದಾರಿ ಎಂದು ತೀರ್ಮಾನಿಸಿ, ಒಡನೆ ಕ್ಲಬ್ಬಿನಲ್ಲಿ ಎಲ್ಲರನ್ನೂ ಸೇರಿಸಿ ದೊಡ್ಡ ಸುಳ್ಳನ್ನೇ ಹರಡಿಬಿಟ್ಟಳು: ಕಳವಾದ ಪೆಟ್ಟಿಗೆಯಲ್ಲಿ ಮೊದಲು ಅವರು ಯಾವುದನ್ನೂ ಕಾಣಲಿಲ್ಲವಂತೆ. ಆದರೆ ಈ ದಿನ ಬೆಳಗ್ಗೆ ನೀವು ಪೆಟ್ಟಿಗೆಯನ್ನು ಪರಿಶೋಧಿಸಿ ಬಿಟ್ಟು ಹೋದ ಮೇಲೆ, ಅವಳು ಸ್ವಾಭಾವಿಕವಾಗಿ ಪೆಟ್ಟಿಗೆಯನ್ನು ತೆರೆದು ನೋಡಿದಳಂತೆ. ಆಗ ಮಾತ್ರ ಒಂದು ಕತ್ತರಿಸಿದ ಉಂಗುರದ ಬೆರಳು ಇದ್ದುದು ಅವಳಿಗೆ ಕಂಡಿತಂತೆ. ಆದ್ದರಿಂದ ನೀವೇ ಆ ಬೆರಳನ್ನು ತೆಗೆದು ಕೊಂಡು ಬಂದು ಆ ಪೆಟ್ಟಿಗೆಯಲ್ಲಿ ಹಾಕಿದ್ದಿರಬೇಕಂತೆ. ಒಡವೆಯ ಆಸೆ ಯಿಂದಲೋ ಅಥವಾ ಕ್ಷಾತ್ರದಿಂದಲೋ ನೀವು ಅಪರಾಧ ಮಾಡಿಬಿಟ್ಟು, ಅನಂತರ ನೀವು ತಪ್ಪಿಸಿಕೊಂಡು ಅವರ ಮೇಲೆ ಅಪರಾಧವನ್ನು ಹೊರಿಸುವುದಕ್ಕೆ ಸರಿಯಾದ ದಾರಿ ಸಿಕ್ಕಿತು ಎಂದು ಯೋಚಿಸಿ, ಪೋಲೀಸಿನವರ ಕಳ್ಳತನವನ್ನು

ವಿಚಾರಿಸಲು ಬರುವ ಹಾಗೆ ಅವರಿಗೆ ಭಾವನೆ ಉಂಟು ಮಾಡಿ ನೀವು ಇಷ್ಟನ್ನೂ ಮಾಡಿದ್ದೀರಂತೆ. ಇಲ್ಲದೆ ಹೋದರೆ ನೀವು ಏತಕ್ಕೆ ವೇಷ ಹಾಕಿ ಕೊಳ್ಳಬೇಕಾಗಿತ್ತು ? ನೀವು ಪೋಲೀಸಿನವರಲ್ಲವಲ್ಲ ಎಂದು ಅವಳಿಗೆ ತಿಳಿದ ಮೇಲೆಯೇ ಅವಳಿಗೆ ಈ ಭಯ ತೊಲಗಿತಂತೆ. ಈಗಲೇ ಇದನ್ನೆಲ್ಲಾ ನಿಜ ವಾದ ಪೋಲೀಸಿನವರ ಹತ್ತಿರ ಹೇಳುತ್ತಾಳಂತೆ. ಅಯ್ಯೋ! ಹೀಗೆ ಮಾತ ನಾಡುತ್ತಾ ಹೊತ್ತು ಕಳೆಯುತ್ತಿದ್ದೇನಲ್ಲಾ! ಬೇಗ ಹೊರಡಿ. ನಿಮಗೆ ಬೇಕಾದ ಸಾಮಾನನ್ನು ತೆಗೆದು ಈ ಪೆಟ್ಟಿಗೆಯಲ್ಲಿ ಇಡುತ್ತೇನೆ. ಎಷ್ಟು ಪಂಚೆ ಬೇಕು ? ಎಷ್ಟು ಷರಟುಗಳು ಬೇಕು ?" ಎಂದು ಕೇಳುತ್ತಾ, ಬೀರುವನ್ನು ತೆರೆದು, ಅದರಲ್ಲಿದ್ದ ಒಳ್ಳೆಯ ವಸ್ತ್ರಗಳನ್ನು ತೆಗೆದುಕೊಂಡು ಮುದುರಿ ಹೇಗೆ ಹೇಗೋ ಒಂದು ಪೆಟ್ಟಿಗೆಯಲ್ಲಿ ತುರುಕತೊಡಗಿದಳು.

ನಾನು ಒಂದೇ ಒಂದು ಕ್ಷಣ ಆಲೋಚಿಸಿದೆ. ಏಕೆಂದರೆ, ಒಂದೇ ಕ್ಷಣ ದಲ್ಲಿ ಯೋಚಿಸಿ ತೀರ್ಮಾನಕ್ಕೆ ಬರಬೇಕಾಗಿದ್ದ ವಿಷಯವಾಗಿತ್ತು. ಅದೇ ರೀತಿ ತೀರ್ಮಾನಿಸಿ ಲಲಿತೆಯ ಕೈಯನ್ನು ಹಿಡಿದು ನಿಲ್ಲಿಸಿದೆ.

"ಇಲ್ಲಿ ನೋಡು ಲಲಿತಾ! ಇದುವರೆಗೂ ನಿನ್ನ ಕಲ್ಪನಾ ಶಕ್ತಿಯನ್ನೂ ನಟನಾ ಸಾಮರ್ಥ್ಯವನ್ನೂ ಪೂರ್ತಿಯಾಗಿ ಆಸ್ವಾದಿಸಿದೆ. ಆದರೆ ನೀನು ಹೀಗೆ ನನ್ನ ಮಡಿ ಮಾಡಿದ ಸಿಲ್ಕ್ ಷರಟುಗಳನ್ನು ಹೊಸಕಿ ಹಾಕುವುದು ಅಂದರೆ,........ಅದನ್ನು ನೋಡಿಕೊಂಡು ಸಹಿಸಿಕೊಂಡಿರುವುದು ನನ್ನಿಂದ ಸಾಧ್ಯವಿಲ್ಲ. ಈ ಕಷ್ಟಕ್ಕಿಂತ ನಾನು ನಿಜವನ್ನೇ ಒಪ್ಪಿಕೊಂಡುಬಿಡುತ್ತೇನೆ. ಆ ರಾಮಸುಬ್ಬಾ ದೀಕ್ಷಿತರನ್ನು ನಾನು ಇದುವರೆಗೆ ಕಂಡುದೂ ಇಲ್ಲ, ಕೇಳಿದ್ದೂ ಇಲ್ಲ—"

"ಅದು ಯಾರು, ರಾಮಸುಬ್ಬಾದೀಕ್ಷಿತರು ? ರೋಜಾ ಬಣ್ಣದ ಮನೆಗೆ ವಾಸ ಬಂದಿದ್ದಾರೆಂದು ನೀವು ಮೊದಲು ಹೇಳಿದ ಮನುಷ್ಯರೋ ? ಅವರ ಹೆಸರು ರಾಮಚಂದ್ರಶಾಸ್ತ್ರಿಗಳು ಎಂದು ಹೇಳಿದಿರಲ್ಲಾ ?"

"ಅವರೂ ಅವರ ಹೆಸರೂ ಹಾಳಾಗಲಿ. ಯಾವ ಹೆಸರಾದರೆ ನನ ಗೇನು ? ಅಂತಹ ಒಬ್ಬ ಮನುಷ್ಯ ಇದ್ದರಲ್ಲವೇ? ಮನೆಯನ್ನೇ ಇನ್ನೂ ಕಟ್ಟಿ ಮುಗಿದಿಲ್ಲ. ಯಾರೂ ವಾಸ ಬಂದೂ ಇಲ್ಲ. ಕಳವೂ ಆಗಲಿಲ್ಲ. ನನ್ನ ಷರ್ಟುಗಳನ್ನು ಹೊಸಕಿ ಹಾಕದೆ ಕೊಟ್ಟುಬಿಡು."

"ಹಾಗಾದರೆ, ಅವರೇ ಇಲ್ಲ ಎಂದು ನೀವು ಹೇಳಿದ ಮೇಲೆ, ಅವರಿಗೆ ಸೀತಾಲಕ್ಷ್ಮಿ ಎನ್ನುವ ಹೆಂಡತಿಯೂ ಇಲ್ಲ. ಅವರು ನನ್ನ ಅಜ್ಜಿಗೂ ತಿಳಿಯದು. ನನಗೂ ತಿಳಿಯದು. ಪರೋಪಕಾರಿಯಾವ ಕಳ್ಳನೂ ಪಚ್ಚೆ ಉಂಗುರವನ್ನು ಇಟ್ಟುಬಿಟ್ಟು ಹೋಗಲಿಲ್ಲವೆಂದು ನಾನೂ ಒಪ್ಪಿಕೊಳ್ಳುತ್ತೇನೆ. ತೆಗೆದುಕೊಳ್ಳಿ, ನಿಮ್ಮ ಷರ್ಟುಗಳನ್ನು ನೀಟಾಗಿ ಮಡಿಸಿ ಇಟ್ಟುಕೊಳ್ಳಿ. ಆದರೆ ಅನ್ಯಾಯವಾಗಿ ಒಂದು ಬೆರಳನ್ನು ಕತ್ತರಿಸಿ ಅದನ್ನು ಪೆಟ್ಟಿಗೆಯಲ್ಲಿ ತೆಗೆದುಕೊಂಡು ಹೋಗಿ ಇಟ್ಟರಲ್ಲಾ, ಆ ಪಾಪಕ್ಕೆ ಏನು ಮಾಡುವುದು? ಅದನ್ನು ನೆನೆಸಿಕೊಂಡರೇ ನನಗೆ ಬಹಳ ದುಃಖವಾಗುತ್ತದೆ."

"ಅದೇ,? ಅದರ ಇಷ್ಟ ಬಂದಂತೆ ಮಾಡಿಕೊಳ್ಳಲಿ. ತನ್ನ ಕೈಯ್ಯನ್ನು ಬಿಟ್ಟು ತಪ್ಪಿಸಿಕೊಂಡು ಬಂದ ಹಾಗೆಯೇ ಮತ್ತೆ ಹೋಗಿ ಸೇರಿಕೊಳ್ಳಲಿ. ಅದರ ಯೋಚನೆ ನನಗೆ ಇಲ್ಲ. ನಿನ್ನ ಸ್ವಭಾವವನ್ನು ನೆನೆಸಿಕೊಂಡರೇ ನನಗೆ ಗಾಬರಿ ಯಾಗಿದೆ. ನೀನು ಜಂಟಿ ವರಸೆಯನ್ನು ಬಿಡದೆ ಬಾರಿಸುತ್ತಿದ್ದುದನ್ನು ನಿಲ್ಲಿಸಲು ನಾನು ನಿನ್ನನ್ನು ಕರೆದು ಸಾಧಾರಣವಾಗಿ ನಡೆಯಬಹುದಾದ ಕಳವನ್ನು ಊಹಿಸಿ, ಒಂದು ಮಾತು ಹೇಳಿದರೆ, ನೀನು ಅದರ ಮೇಲೆ ಏನೇನೋ ಸೃಷ್ಟಿಸಿ, ಸುಳ್ಳಿನ ಕಂತೆಯನ್ನೇ ಜೋಡಿಸಿಬಿಟ್ಟೆಯಲ್ಲಾ........"

"ಪತಿಯನ್ನು ಅನುಸರಿಸುವುದು ಉತ್ತಮ ಸ್ತ್ರೀಯ ಕರ್ತವ್ಯ. ಬೇಕಾದರೆ ನನ್ನ ಅಜ್ಜಿಯನ್ನೇ ಕೇಳಿ ನೋಡಿ. ಅವಳು ಎಷ್ಟೋ ಬಾರಿ ನನಗೆ ಹೀಗೆ ಬುದ್ಧಿವಾದ ಹೇಳಿದ್ದಾಳೆ."

"ಒಳ್ಳೆಯ ಕರ್ತವ್ಯ! ಬೇಕಾಗಿ ನಾನು, ಒಬ್ಬ ಗಂಡಸು, ಒಂದು ಸಣ್ಣ ಸುಳ್ಳು ಹೇಳಿದರೆ, ನೀನು ಪೈಪೋಟಿ ಹಾಕಿಕೊಂಡು ಸುಳ್ಳು ಹೇಳಬಹುದೇ? ನೀನು ಹೆಂಗಸಾಗಿ, ಲಕ್ಷಣವಾಗಿ........"

"ನನ್ನಲಕ್ಷಣಕ್ಕೆ ಏನು ಕೊರೆಯೋ?" ಎಂದು ನಿಲುಗನ್ನಡಿಯನ್ನು ನೋಡು ತ್ತಾ ಅವಳು ಅಧಿಕಪ್ರಸಂಗಿತನದಿಂದ ಕೇಳಿದಳು. "ಆದರೂ ಒಂದು ಕೊರೆಯನ್ನು ಮಾತ್ರ ಒಪ್ಪಿಕೊಳ್ಳಲೇಬೇಕು. ಈ ಬೆರಳಿನಲ್ಲಿ ಒಂದು ಉಂಗುರ ಇಲ್ಲದಿ ರುವುದು ಮಾತ್ರ ದೊಡ್ಡ ಕೊರತೆಯೇ ಸರಿ" ಎಂದು ಹೇಳಿ ಗಾಳಿ ಬಂದಾಗಲೇ ತೂರಿಕೊಂಡಳು.

ಆದರೆ ಅದಕ್ಕೆ ತಕ್ಕ ಹಾಗೆ ಉತ್ತರ ಹೇಳುವುದು ನನಗೆ ಗೊತ್ತು.

"ಇಲ್ಲಿ ನೋಡು, ನೀನು ಇಷ್ಟೆಲ್ಲಾ ಕಳವು ಕಂಡು ಹಿಡಿದೆಯಲ್ಲಾ, ನಿನಗಾಗಿ ತೆಗೆದು, ಇಲ್ಲೇ ಈ ಪಂಚೆಯ ಕೆಳಗೆ ಮುಚ್ಚಿಟ್ಟಿದ್ದ ಈ ಉಂಗುರವನ್ನು ಕಂಡು ಹಿಡಿಯಲಾರದೆ ಹೋದೆಯಲ್ಲಾ ?" ಎಂದೆ.

"ಅದು ಇರುವ ಜಾಗವನ್ನು ನಾನು ಹುಡುಕುವುದಕ್ಕೆ ಮೊದಲು ಮಾಡಿ ರಲಿಲ್ಲ ಅಷ್ಟೆ. ಆದರೆ ಅದು ಬರುತ್ತೆ ಎಂಬು ನನಗೆ ಆಗಲೇ ಗೊತ್ತು."

"ಅದು ಹೇಗೆ ?"

"ನಾಲ್ಕು ದಿನದ ಹಿಂದೆ, ನಾನು ಮಲಗಿಕೊಂಡಿದ್ದಾಗ, ನನ್ನ ಬೆರಳಿನ ಅಳತೆ ತೆಗೆದುಕೊಂಡಿರಲ್ಲಾ, ಆಗಲೇ ನನಗೆ ತಿಳಿದುಬಿಟ್ಟಿತು."

ಇದು ಶುದ್ಧ ಸುಳ್ಳು. ನಾನು ಅಳತೆ ತೆಗೆದುಕೊಳ್ಳಲೇ ಇಲ್ಲ. ಕಣ್ಣಳತೆಗೆ ಉಂಗುರವನ್ನು ಆರಿಸಿ ತೆಗೆದುಕೊಂಡೆ ಎಂದು ಪ್ರಮಾಣ ಮಾಡು ತ್ತೇನೆ. ಆದರೆ ನಾನು ಎಷ್ಟು ಪ್ರಮಾಣ ಮಾಡಿದರೆ ತಾನೇ ಏನು ? ಅವಳು ತಾನು ಹೇಳಿದ್ದನ್ನೇ ಸಾಧಿಸುತ್ತಾ, ಅದಕ್ಕಾಗಿಯೇ ಇನ್ನೂ ಒಂದು ನಾಟಕ ನಟಿಸಿಬಿಡುತ್ತಾಳೆ. ನಾನು ಸೋತೆ ಎಂದು ಒಪ್ಪಿಕೊಳ್ಳುವುದೇ ಒಳ್ಳೆಯದು.

---

# ಊರ್ವಶಿ

ಪ್ರಸಿದ್ಧವಾದ ತೂಫಾನ್ ಮೇಲ್‌ನಲ್ಲಿ ಕಾಶಿಗೆ ಹೋಗುತ್ತಿದ್ದೆ. ಗಾಡಿ ಯಲ್ಲಿ ಎಂದಿಗಿಂತಲೂ ಹೆಚ್ಚಾಗಿಯೇ ಜನಸಂದಣಿ. ಆದರೂ ಅಷ್ಟೊಂದು ಪ್ರಯಾ ಣಿಕರ ಮಧ್ಯದಲ್ಲಿ ನನ್ನ ದೃಷ್ಟಿಯನ್ನು ಎಳೆದವರು ಒಬ್ಬರೇ. ಅವರಿಗೆ ಸುಮಾರು ಮುವ್ವತ್ತೈದು ವಯಸ್ಸು ಇದ್ದಿರಬಹುದು. ದೇಹಶಕ್ತಿಯೂ ಮನ ಸ್ಸಿನ ಶಕ್ತಿಯೂ ಸೇರಿದ್ದ ಆಕಾರ. ಈಚೆಗೆ ಅವರು ಒಬ್ಬ ರಾಜಪುತ್ರರು ಎಂದು ಗೊತ್ತಾಯಿತು. ಅವರ ಮುಖದಲ್ಲಿ ಮುಗುಳ್ನಗೆ ಯಾವಾಗಲೂ ಸಿದ್ಧವಾಗಿ ಕಾದುಕೊಂಡಿತ್ತು. ಜಗತ್ತನ್ನು ದ್ವೇಷಿಸುವವರಲ್ಲ. ಯಾವ ಸಂತೋಷ ದಲ್ಲಿಯೂ ಭಾಗಿಯಾಗುವವರು. ಆದರೂ ಅವರ ಮುಖದಲ್ಲಿ ಗಾಂಭೀರ್ಯವೂ ದೊಡ್ಡಸ್ತಿಕೆಯೂ ಮಾತ್ರವೇ ಅಲ್ಲ; ಯಾತರಿಂದಲೂ ವಿಚಲಿತವಾಗದ ಮನ ಸ್ಥೈರ್ಯವೂ ಒಡೆದು ಕಾಣುತ್ತಿತ್ತು. "ಈ ಕಾರ್ಯವೇ ? ಇದು ನನ್ನ ಕರ್ತವ್ಯ.

ಏನು ಸಂಭವಿಸಿದರೂ ಇದನ್ನು ಮಾಡಿಯೇ ಮುಗಿಸುತ್ತೇನೆ..... ಈ ಕೆಲಸವೇ ? ಛೆ, ಇದು ನೀಚ ಕಾರ್ಯ—ಎಷ್ಟು ಲಾಭ ಬಂದರೂ ಇದನ್ನು ಎಂದಿಗೂ ಮಾಡುವುದಿಲ್ಲ" ಎಂಬ ಧೃಢಸಂಕಲ್ಪ ಪ್ರಕಾಶಿಸುತ್ತಿತ್ತು ಅವರ ಮುಖದಲ್ಲಿ.

ನೀರಸವಾದ ಆ ಪ್ರಯಾಣದ ಆಯಾಸವನ್ನು ಓಡಿಸುವ ಆಸೆಯಿಂದ ಅವರೊಡನೆ ಸ್ವಲ್ಪಸ್ವಲ್ಪವಾಗಿ ಮಾತನಾಡತೊಡಗಿದೆ. ಅವರಿಗೆ ಇಂಗ್ಲೀಷ್ ಭಾಷೆಯ ಪರಿಚಯ ಸ್ವಲ್ಪವೇ. ನನ್ನ ಹಿಂದಿ ಜ್ಞಾನ ಅದಕ್ಕಿಂತ ಕಡಿಮೆ. ಆದರೂ ಅವರ ಸರಸಗುಣ ನನ್ನ ಆಸೆ ಇವು ಸೇರಿದುದರ ಫಲವಾಗಿ ಸಂಭಾಷಣೆಯೂ ಪ್ರಯಾಣವೂ ಆನಂದದಾಯಕವಾಗಿಯೇ ಇತ್ತು. ದಾರಿಯಲ್ಲಿ ಸಿಕ್ಕಿದ ಊರುಗಳನ್ನು ಕುರಿತು, ಪುಸ್ತಕಗಳಲ್ಲಿ ದೊರೆಯದ ವಿನೋದ ಸಂಗತಿಗಳನ್ನೆಲ್ಲ ಅವರು ಹೇಳುತ್ತಿದ್ದರು. ಪ್ರಯಾಗ [ಅಲಹಾಬಾದ್] ದಲ್ಲಿ ರೈಲು ನಿಂತಿತು.

"ಪ್ರಯಾಗ, ಊರೊಳಕ್ಕೆ ಹೋಗಿದ್ದೀರಾ?" ಎಂದು ಕೇಳಿದರು.

"ಹೋಗಿದ್ದೇನೆ. ತ್ರಿವೇಣಿಯಲ್ಲಿ ಬಹಳ ಹೊತ್ತು ಸ್ನಾನವನ್ನೂ ಮಾಡಿದ್ದೇನೆ. ಆದರೆ ಎದುರು ದಡಕ್ಕೆ ಹೋಗಿ ಅಲ್ಲಿ ತಿರುಗಾಡಿ ನೋಡಲಿಲ್ಲವಲ್ಲ ಎಂಬುದೇ ನನ್ನ ಕೊರತೆ" ಎಂದೆ.

"ಅಲ್ಲಿ ಏನು ವಿಶೇಷ ?" ಎಂದು ಕೇಳಿದರು.

ಅವರಿಗೆ ತಿಳಿಯದಿದ್ದ ಸ್ಥಳಪುರಾಣ ನನಗೆ ತಿಳಿದಿದೆಯಲ್ಲ ಎಂದು ನನಗೆ ಹೆಮ್ಮೆ. "ಅಲ್ಲಿಯೇ ಪ್ರತಿಷ್ಠಾನ ನಗರ ಇದ್ದಿತೆಂದು, ಸ್ವಲ್ಪ ಹಿಂದೆ ಓದಿ ಅರಿತೆ. ಪುರೂರವಸ್ ಮುಂತಾದ ಚಂದ್ರವಂಶದ ರಾಜರು ಆಳಿದ ಸ್ಥಳ ಅದು. ಅಂತಹ ಸ್ಥಳವೇ ಒಂದು ಪುಣ್ಯ ಭೂಮಿ ಎಂದು ನಾನು ಭಾವಿಸುತ್ತೇನೆ" ಎಂದೆ.

ಅವರು ಏನೂ ಪ್ರತ್ಯುತ್ತರ ಹೇಳಲಿಲ್ಲ. ಮುಖ ಮಾತ್ರ ಸ್ವಲ್ಪ ಬದಲಾಯಿಸಿತು. ಅಲ್ಲಿಂದ ಮುಂದೆ ಅವರ ಮುಗುಳುನಗೆ ಹಿಂದಿನಂತೆ ಪದೇ ಪದೇ ಹೊರಹೊಮ್ಮಲಿಲ್ಲ. ಬರಬರುತ್ತಾ ಮಾತುಗಳೂ ಕಡಿಮೆಯಾದುವು. ಕೊನೆಯಲ್ಲಿ ಯಾವುದೋ ಆಲೋಚನೆಯಲ್ಲಿ ಮುಳುಗಿ ಮೌನವಾಗಿಯೇ ಇದ್ದರು. ನನಗೆ ವಿಷಾದವಾಯಿತು. ಅವರಿಗೆ ದುಃಖವುಂಟು ಮಾಡುವ ಯಾವುದೋ ಸಂಗತಿಯನ್ನು ಜ್ಞಾಪಿಸಿಬಿಟ್ಟೆ ಎಂದು ನನಗೆ ನೋವಾಯಿತು. ರೈಲು ಮೊಗಲ್ ಸರಾಯ್ ಸ್ಟೇಷನ್ನಿಗೆ ಬಂತು. ಕಾಶಿಗೆ ಹೋಗಲು ಬೇರೆ ರೈಲಿಗೆ ನಾನು ಬದ

ಲಾಯಿನಬೇಕಾದ ಸ್ಥಳ ಅದು. ಮೃದುವಾಗಿ ಅವರನ್ನು ಮಾತನಾಡಿಸಿದೆ.

"ನಾನು ಇಲ್ಲಿ ನಿಮ್ಮಿಂದ ಬೇರೆ ಆಗಬೇಕು. ನಿಮ್ಮ ಸಂಭಾಷಣೆಯನ್ನು ನಾನು ಎಂದಿಗೂ ಮರೆಯಲಾರೆ. ಆದರೆ ನಾನು ತಿಳಿವಳಿಕೆ ಇಲ್ಲದೆ ಏನೋ ಹೇಳಿ ನಿಮಗೆ ನೋವು ಉಂಟುಮಾಡಿದುದನ್ನು ಮಾತ್ರ ನೀವು ಮರೆತು ಬಿಡಬೇಕು" ಎಂದೆ.

"ನೀವೇನೂ ಮಾಡಲಿಲ್ಲ. ಎಲ್ಲ ನನ್ನ ಕರ್ಮ ಫಲ" ಎಂದು ಅವರು ನಿಟ್ಟುಸಿರು ಬಿಟ್ಟರು.

ನಾನು ಮತ್ತೂ ಕ್ಷಮೆ ಯಾಚಿಸಿದೆ.

ಅವರು "ನಾನೇ ನಿಮ್ಮ ಕ್ಷಮೆ ಯಾಚಿಸಬೇಕು. ಸ್ವಲ್ಪ ಹೊತ್ತಿನಿಂದ ನಿಮ್ಮ ಮಾತುಗಳನ್ನೂ ಸರಿಯಾಗಿ ಗಮನಿಸಲಿಲ್ಲವೇನೋ! ಎಂಬ ಭಯ ನನಗೆ. ಒಂದು ವರುಷದಿಂದ ಕೆಲವು ವಿಷಯಗಳಲ್ಲಿ ನನ್ನ ಮನಸ್ಸು ಈ ರೀತಿ ಅಲಕ್ಷ್ಯವಾಗುತ್ತಿದೆ. ನಿಮ್ಮ ವಿಳಾಸ ಕೊಡಿ. ಎಲ್ಲವನ್ನೂ ವಿವರವಾಗಿ ನಿಮಗೆ ಬರೆಯುತ್ತೇನೆ. ಅನಂತರ ನಿಮ್ಮ ಅಭಿಪ್ರಾಯವನ್ನು ಆಶೆಯಿಂದ ನಿರೀಕ್ಷಿಸುತ್ತೇನೆ" ಎಂದರು.

ಹೇಳಿದಂತೆ ಕೆಲವು ದಿನಗಳೊಳಗಾಗಿ ಅವರು ಹಿಂದಿಯಲ್ಲಿ ಬರೆದ ಉದ್ದವಾದ ಪತ್ರ ನನಗೆ ಬಂದಿತು. ವಿಷಯವನ್ನು ತಮಿಳಿನಲ್ಲಿ ಪ್ರಕಟಿಸಬಹುದೇ ಎಂದು ಅವರ ಅನುಮತಿ ಕೇಳಿದೆ. ತಮ್ಮ ಊರನ್ನೂ ಹೆಸರನ್ನೂ ಹೊರಗೆಡಹದಿದ್ದರೆ ಆಕ್ಷೇಪಣೆಯಿಲ್ಲವೆಂದು ಬರೆದರು. ಒಂದು ಹಿಂದಿ-ತಮಿಳ್ ಶಬ್ದ ಕೋಶದ ಸಹಾಯದಿಂದ ನನಗೆ ತಿಳಿದ ಮಟ್ಟಿಗೆ ಅವರು ಬರೆದುದನ್ನು ಹಾಗೆಯೇ ಭಾಷಾಂತರಿಸಿದ್ದೇನೆ. ಇನ್ನು "ನಾನು" ಎಂದು ಬಂದಾಗ ಆ ರಾಜಪುತ್ರರೆಂದು ಅರ್ಥ ಮಾಡಿಕೊಳ್ಳಬೇಕು.

* * * * *

ವೈಶಾಖ ಮಾಸ. ಅಗ್ನಿ ನಕ್ಷತ್ರ ಪರ್ವ ಕಾಲ. ಪುಣ್ಯ ಕ್ಷೇತ್ರಗಳ ಯಾತ್ರೆ ಮಾಡುವುದರಲ್ಲಿ ನನಗೆ ನಂಬಿಕೆಯಿಲ್ಲದಿದ್ದರೂ ನಮ್ಮ ತಾಯಿಯ ಕೋರಿಕೆಗೆ ಬಾಗಿ ಒಂದು ಪೀಡಾ ಪರಿಹಾರಕ್ಕಾಗಿ ಸೇತು ಸ್ನಾನ ಮಾಡಿ ಮೇಯಿಲ್‌ನಲ್ಲಿ ಬರುತ್ತಿದ್ದೆ. ಎಲ್ಲಿ ನೋಡಿದರೂ ಯಾವುದನ್ನು ಮುಟ್ಟಿದರೂ ಶೆಖೆಯ ಬೇಗೆ. ರೈಲು ಗಾಡಿಯಲ್ಲಿ ಬೀಸುತ್ತಿದ್ದ ಬೀಸಣಿಗೆಯ ಗಾಳಿ ಸಹ

ಬಿಸಿಯಾಗಿಯೇ ಬರುತ್ತಿತ್ತು. ಗಾಡಿ ಬಂದು ನಿಂತ ಸ್ಟೇಷನ್ನಿನ ಹೆಸರು ಕರಕ್‌ಪೂರ್ ಎಂದು. ರೈಲು ಅಲ್ಲಿಂದ ಹತ್ತು ಗಂಟೆಗೇ ಹೊರಡಬೇಕಾಗಿದ್ದಿತು. ಆದರೆ ಕಾಲವಾದರೂ ಇನ್ನೂ ಹೊರಡುವ ಸೂಚನೆ ತೋರಲಿಲ್ಲ. ಸ್ಟೇಷನ್ ಮಾಸ್ಟರು ನಮ್ಮ ಮೆಯಿಲನ್ನು ಪೂರ್ಣವಾಗಿ ಮರೆತುಬಿಟ್ಟಂತೆಯೇ ತೋರಿತು. ಬೆಳಗಿನ ಜಾವದಿಂದ ಹಿಡಿದು, ಸಂಧ್ಯಾಕಾಲ ನಾಲ್ಕು ಗಂಟೆಗೆ ಕಲ್ಕತ್ತದಲ್ಲಿ ನನ್ನ ಸ್ನೇಹಿತನ ಮನೆಯನ್ನು ಸೇರುವವರೆಗೆ ದಾರಿಯಲ್ಲಿ ಎಲ್ಲಿಯೂ ರಾಜಪುತ್ರನಿಗೆ ಅರ್ಹವಾದ ಆಹಾರ ದೊರೆಯುವಂತೆ ಇರಲಿಲ್ಲ. ಆದುದರಿಂದ ಹಸಿವನ್ನು ಎದುರಿಸಲು ಗಾದೆ ಮಾತಿನಲ್ಲಿ ಚಿಕಿತ್ಸೆ ಹೇಳಿರುವಂತೆ ಸೊಂಟದ ಪಟ್ಟಿಯನ್ನು [ಬೆಲ್ಟ್] ಬಲವಾಗಿ ಬಿಗಿದು ಕಟ್ಟಿದೆ. ಆ ಸ್ಥಳಗಳಲ್ಲಿ ಪ್ರಯಾಣಿಕರು ರೈಲಿನಿಂದ ಇಳಿವರೇ ಹೊರತು ಹತ್ತುಲಿಲ್ಲ. ಆದುದರಿಂದ ಆಗ ಗಾಡಿಯಲ್ಲಿ ನಾನೊಬ್ಬನೇ ಇದ್ದೆ. ಕಾಲುಗಳನ್ನು ನೀಡಿಕೊಂಡು ವಿರಾಮವಾಗಿಯೇ ಕುಳಿತಿದ್ದೆ. ಆದರೆ ಹೆಚ್ಚಾದ ಹಸಿವೂ ಉರಿಯುವ ಬಿಸಿಲೂ ಸೇರಿದ ವೇದನೆಯಿಂದ ನಿದ್ರೆ ಬರಲಿಲ್ಲ. ಒಳ್ಳೆಯ ಎಚ್ಚರವೂ ಇಲ್ಲ, ಒಳ್ಳೆಯ ನಿದ್ರೆಯೂ ಇಲ್ಲ. ಅಂತಹ ಅರ್ಧ ನಿದ್ರೆಯ ಒಂದು ಅವಸ್ಥೆ ಉಂಟಲ್ಲವೇ? ನಾನು ಆ ಅವಸ್ಥೆಯಲ್ಲಿದ್ದುಕೊಂಡು ಕಣ್ಣುಗಳನ್ನು ಮುಚ್ಚಿಕೊಂಡು ಕಾಲ ಕಳೆಯುತ್ತಿದ್ದೆ.

ಹಾಗೆ ಕಣ್ಣು ಮುಚ್ಚಿಕೊಂಡಿದ್ದವನು ಆಶ್ಚರ್ಯದಿಂದ ಕಣ್ಣು ತೆರೆದೆ. ಅದಕ್ಕೆ ಕಾರಣ ಒಂದು ನಂದನವನದ ಸುವಾಸನೆಯನ್ನು ಹೊತ್ತ ತಂಗಾಳಿಯ ಪರಿಮಳ ಆ ಕೊಠಡಿಯ ಪೂರ್ತ ತುಂಬಿ ಅಲ್ಲಿಯ ಉಷ್ಣದ ಬೇಗೆಯನ್ನು ಸಹ ಶೀತಳವಾಗಿ ಮಾಡಿದಂತೆ ಇತ್ತು. ಎದುರುಗಡೆ ಮೂಲೆಯಲ್ಲಿ ಒಬ್ಬಳು ಯುವತಿ ತಲೆಗೂದಲನ್ನು ತನ್ನ ಕೈ ಬೆರಳುಗಳಿಂದ ಆಡಿಸಿಕೊಳ್ಳುತ್ತಾ ಕುಳಿತಿದ್ದುದು ಆಗ ನನ್ನ ಕಣ್ಣಿಗೆ ಬಿತ್ತು. ಯುವತಿ ಎಂದು ಹೇಳಿ ಒಡನೇ ಅವಳನ್ನು ವರ್ಣಿಸತೊಡಗುವುದು ಜಗತ್ತಿನಲ್ಲೆಲ್ಲ ಇರುವ ಸಂಪ್ರದಾಯವಷ್ಟೆ. ಅವಳ ಅದ್ವಿತೀಯ ಲಾವಣ್ಯವನ್ನು ವರ್ಣಿಸುವುದು ನನ್ನಿಂದ ಸಾಧ್ಯವಿಲ್ಲ. ಆದರೆ ವರ್ಣಿಸುವ ಆವಶ್ಯಕತೆಯೂ ಇಲ್ಲ. ಅಪ್ಸರ ಸ್ತ್ರೀಯ ಆಕಾರವೂ ಸೌಂದರ್ಯವೂ ಹೀಗೆ ಹೀಗೆ ಇರಬೇಕೆಂದು ಒಬ್ಬೊಬ್ಬರೂ ಭಾವಿಸಿಕೊಂಡಿರುವೆವಲ್ಲವೇ? ಅದನ್ನೇ ನೀವು ನೆನೆಸಿಕೊಂಡರೆ ಸಾಕು. ಹಾಗೆ ನನಗೂ ಇದ್ದ ಭಾವನೆಯೇ ಸೌಂದರ್ಯದ ಆಕಾರವನ್ನೂ ಹೊಳಪನ್ನೂ ಮೋಹಕತೆಯನ್ನೂ ಹೊತ್ತು ಅಲ್ಲಿ ಕುಳಿತಂತೆ ಇದ್ದಳು ಆಕೆ.

ನಮಗೆ ಮೂರ್ಛೆ ಬರುವಂತಹ ಸೌಂದರ್ಯವುಳ್ಳ ಒಬ್ಬ ಲಾವಣ್ಯವತಿಯನ್ನು ನಾವು ಕಂಡರೆ ಅವಳು ದೇವತೆಯೋ ಎಂದು ನಾವು ಭಾವಿಸಬಹುದು. ಆದರೆ ಹಾಗೆ ಭಾವಿಸಲು ತೊಡಗಿದ ಕೂಡಲೇ ನಮ್ಮ ಲೋಕಾನುಭವವು ಆ ಭಾವನೆಗೆ ಅಡ್ಡಿ ಬರುವುದು. ದೇವಲೋಕದ ಕನ್ನಿಕೆಯರು ನಮ್ಮ ಕಣ್ಣಿಗೆ ಬೀಳುವವರಲ್ಲವಲ್ಲ ಎಂಬ ಜ್ಞಾಪಕವುಂಟಾಗುವುದು. ಹಾಗಾದ ಕೂಡಲೇ ಆಕೆ ದೇವತೆ ಎಂಬ ಭಾವನೆಯನ್ನು ಬಿಡಬೇಕಾಗುವುದು.

ಆದರೆ ಇವಳೋ: ಗಾಡಿ ಏರಲು ಬಂದಾಗ ಬಾಗಿಲನ್ನು ತೆರೆದ ಸದ್ದು ಆಗಲಿಲ್ಲ. ನಡೆದು ಬಂದ ಕಾಲಿನ ಸದ್ದು ಸಹ ಆಗಲಿಲ್ಲ. ಪುರುಷರ ಸಹಾಯವೇ ಇಲ್ಲದೆ ಈ ಅದ್ಭುತ ಸೌಂದರ್ಯದ ಯುವತಿ ಅಲ್ಲಿ ಪ್ರಸನ್ನಳಾದಳು. ಇವನ್ನೆಲ್ಲ ಯೋಚಿಸಿಕೊಂಡರೆ ಆ ಅಸಂಭವವೇ ಸಂಭವವಾಗಿ ತೋರುವಂತೆ ಇತ್ತು.

ನಾವು ಹೊರಕ್ಕೆ ಸ್ಪಷ್ಟವಾಗಿ ಹೇಳುವ ಮಾತುಗಳಿಗೆ ಒಂದು ನಿಷ್ಕೃಷ್ಟತೆಯೂ ಕಟ್ಟುಪಾಡೂ ಉಂಟು. ಹೊರಗೆ ಪ್ರಕಟವಾಗದೆ ಮನಸ್ಸಿನೊಳಗೆ ಸಂಚರಿಸುವ ಅಭಿಪ್ರಾಯಗಳಿಗೆ ಯಾವ ಕಟ್ಟುಪಾಡೂ ಇಲ್ಲ. ಅವುಗಳನ್ನು ಕಣ್ಣು ಮುಚ್ಚಿಕೊಂಡು ಮನಸ್ಸಿಗೆ ಬಂದಂತೆ ಆಡಬಹುದು. ಆದುದರಿಂದಲೇ ನನ್ನ ಮನಸ್ಸಿನಲ್ಲಿ ಬಗೆಬಗೆಯ ಭಾವನೆಗಳು ಸ್ವತಂತ್ರವಾಗಿ ಸುಳಿದಾಡ ತೊಡಗಿದುವು.

“ಈ ೧೯೪೫ನೆ ವರುಷದಲ್ಲಿ ನಿಜವಾಗಿಯೂ ದೇವಲೋಕದಿಂದ ಒಬ್ಬಳು ಅಪ್ಸರ ಸ್ತ್ರೀ ಭೂಮಿಗೆ ಬಂದರೆ ಎಂತಹ ಅದ್ಭುತ ಆನಂದ ಉಂಟಾಗುತ್ತದೆ! ಅವಳ ಹೆಸರು ಏನೋ! ಅದನ್ನು ಕೇಳಬಹುದೋ, ಕೂಡದೋ? ಆವಶ್ಯಕವಿದ್ದ ಹೊರತು, ಅಪರಿಚಿತ ಸ್ತ್ರೀಯೊಂದಿಗೆ ಪುರುಷ ಮಾತಿಗೆ ಪ್ರಾರಂಭಿಸಬಾರದೆಂಬ ಮರ್ಯಾದೆ ನಮ್ಮಲ್ಲಿದೆಯಲ್ಲ! ಅಪ್ಸರ ಲೋಕದಲ್ಲೂ ಇದೇ ‘ರೂಲ್’ ಇರಬಹುದೇ? ಮರ್ಯಾದೆಗೆ ಅನುಸಾರವಾಗಿ ನಡೆಯಬೇಕೆಂಬುದನ್ನು ಗಮನಿಸುವುದಾದರೆ, ಹೀಗೆ ನಾನು ಕಾಲು ಚಾಚಿಕೊಂಡು ಮಲಗಿರುವುದು ಮರ್ಯಾದೆಯೇ?

“ಆದರೆ ನಾನು ನಿದ್ರಿಸುತ್ತಿದ್ದೇನೆ ಎಂದು ನಂಬಿ ಆಕೆ ಇಲ್ಲಿದ್ದಾಳೆ. ಆದರೆ ನಾನು ಎಚ್ಚರಗೊಂಡು ಅವಳೊಡನೆ ಮಾತನಾಡಲು ಸಹ ಪ್ರಾರಂಭಿಸಿ

ಬಿಟ್ಟರೆ ಮುಂದಲ ಸ್ಟೇಷನ್ನಿನಲ್ಲಿ ಇಳಿದು ಬೇರೆ ಗಾಡಿಗೆ ಹೋಗಿಬಿಡುತ್ತಾಳೋ ಏನೋ ?

" ನಾನೇನೋ ಈಗ ಪೂರ್ಣವಾಗಿ ಎಚ್ಚರಗೊಂಡಿದ್ದೇನೆ. ಇದು ಕನಸಲ್ಲ. ಸಂದೇಹವಿಲ್ಲ. ಆದರೆ ಆಕೆ ದೇವಲೋಕದ ಕನ್ನಿಕೆ ಎಂಬುದರಲ್ಲಿ ಸಂದೇಹವಿಲ್ಲ. ಪಂಚೇಂದ್ರಿಯಗಳಿಗೆ ಮೀರಿದ ಒಂದು ಆರನೆಯ ಇಂದ್ರಿಯ ಅದನ್ನು ನನಗೆ ತಿಳಿಸಿತು. ಆದರೆ ಒಬ್ಬ ಸಾಮಾನ್ಯ ಮನುಷ್ಯನ ಕಣ್ಣಿಗೆ ಇವಳು ಕಾಣುವುದರ ಕಾರಣವಾದರೂ ಏನು ?

ಆದರೆ ನಾನು ಕಾಣುತ್ತಿರುವುದು ಒಂದು ಕನಸು ಆದರೆ! ಅಯ್ಯೋ, ಆಗ ಏನುಮಾಡಲಿ ? ಇಷ್ಟು ಮನೋಹರವಾದ ಒಂದು ವಿಷಯವನ್ನು ಹಾಗೆ ದೀರ್ಘ ಕಾಲ ಸವಿದು ಅನುಭವಿಸುವುದಕ್ಕೆ ಬದಲಾಗಿ, ಸುಮ್ಮನೆ ಮಾತನಾಡಲು ಪ್ರಾರಂಭಿಸಿ ಎಚ್ಚರಗೊಂಡು ಕನಸು ಕಾಣುವುದನ್ನೂ ಕೆಡಿಸಿಕೊಳ್ಳುವುದೇ ? ಆದುದರಿಂದ ಹೇಗೆ ನೋಡಿದರೂ ಮೌನವೇ ಸರಿಯಾದುದು."

ನಾನು ಹೀಗೆಲ್ಲ ಯೋಚಿಸುತ್ತಿರಲು ಗಾಡಿ ಒಂದು ಕುಲುಕು ಕುಲುಕಿ ಧಢೀರ್ ಎಂದು ನಿಂತುಬಿಟ್ಟಿತು. ಆಕೆ ಅಲ್ಲಿಯವರೆಗೆ ಕಿಟಕಿಯಲ್ಲಿ ಹೊರಗೆ ನೋಡುತ್ತಿದ್ದವಳು ಆಗಲೀಗ ನನ್ನ ಕಡೆಗೆ ನೋಡಿದಳು. ನಾವಿದ್ದ ಗಾಡಿ ಗಡಿಯಾರದ ಮುಳ್ಳುಗಳು ಎರಡು ಗಂಟೆ ತೋರಿಸುವಾಗ ಇರುವಂತೆ ಒಂದೆಡೆ ಬಾಗಿ ಒಂದೆಡೆ ಎದ್ದು ಹೇಗೋ ನಿಂತಿತ್ತು. ಇದ್ದಕ್ಕಿದ್ದಂತೆ ಒಂದು ಪಕ್ಕಕ್ಕೆ ಪೂರ್ತ ಬಾಗಿದಂತೆಯೂ ತೋರುತ್ತಿತ್ತು. ನಾವಿಬ್ಬರೂ ಎದ್ದೆವು–ನಾನು ಗಾಬರಿಯೊಡನೆ; ಅವಳು ಸಮಾಧಾನದಿಂದ ಕೇಶರಾಶಿಯನ್ನು ಮುಡಿಯಾಗಿ ಕಟ್ಟಿಕೊಳ್ಳುತ್ತಾ ; ಒಂದು ಭಾಗದ ಬಾಗಿಲನ್ನು ಮಗ್ಗುಲಲ್ಲಿದ್ದ ಮಣ್ಣಿನ ದಿಬ್ಬ ತಡೆದಿತ್ತು. ಇನ್ನೊಂದು ಬಾಗಿಲು ತೆರೆಯುವುದಕ್ಕೆ ಬರುವುದಾಗಿತ್ತು. ಅದನ್ನು ಬಹಳ ಕಷ್ಟದಿಂದ ತೆರೆದೆ. ನಾವಿಬ್ಬರೂ ಅದರಿಂದ ಹೊರಬಿದ್ದೆವು. ಗಾಡಿಯಿಂದ ನಾನು ಮೊದಲು ಕೆಳಕ್ಕೆ ಇಳಿದು, ಅನಂತರ ಆಕೆಯನ್ನು ಸುರಕ್ಷಿತವಾಗಿ ಅವಳ ಕೈ ಹಿಡಿದು ಕೆಳಕ್ಕೆ ಇಳಿಸಿದೆ.

ಏನಾಗಿದೆ ಎಂದು ಸುತ್ತ ನೋಡಿದೆ. ಮೊದಲು ರಾತ್ರಿಯ ಅತಿ ದೊಡ್ಡ ಮಳೆಯಿಂದ, ಹೊಸದಾಗಿ ಹಾಕಿದ್ದ ರಸ್ತೆಯ ಮಣ್ಣು ಬಲಹೀನವಾಗಿ ಸಡಿಲವಾಗಿತ್ತು. ಮೇಲ್ ಗಾಡಿಯ ಭಾರಿ ಎಂಜಿನಿನ ಬಲವನ್ನು ಆ ರಸ್ತೆ ತಡೆಯ

ದಾಯಿತು. ಎಂಜಿನೂ ದಾರಿ ತಪ್ಪಿ ಇತರ ಗಾಡಿಗಳೂ ದಿಕ್ಕಾಪಾಲಾಗಿ ನಿಂತುಬಿಟ್ಟುವು. ಅದೃಷ್ಟವಶನಿಂದ ಯಾರಿಗೂ ಪ್ರಾಣಾಪಾಯವಾಗಿರಲಿಲ್ಲ. ಆದರೂ ಜನರ ಗಾಬರಿ ಗದ್ದಲ ಕಿರಚಾಟ ಅಳು ಇವುಗಳಿಗೆ ಕೊನೆಯೇ ಇರಲಿಲ್ಲ.

"ಅಲ್ಲಿ ಕಾಲು ಮೈಲಿ ದೂರದಲ್ಲಿ ಒಂದು ಸ್ಟೇಷನ್ ಕಾಣುತ್ತೆ. ಅದು ಯಾವ ಊರೋ" ಎಂದು ನಾನು ಯಾರನ್ನೂ ಕುರಿತು ಕೇಳದಂತೆ ಸ್ವಾಭಾವಿಕವಾಗಿ ಗಾಳಿಯ ಕಡೆಗೆ ಮಾತನಾಡಿದೆ.

"ಅದು ರಾಮರಾಜ್ಯ ಸ್ಥಳ. ಅಲ್ಲಿಂದ ನಾಲ್ಕು ಮೈಲಿಯಲ್ಲಿ ಕಲ್ಕತ್ತದಲ್ಲಿ ನನ್ನ ಮನೆ ಇದೆ" ಎಂದು ಅವಳೇ ಪ್ರತ್ಯುತ್ತರ ಕೊಟ್ಟಳು.

ಅವಳ ಕಂಠದಲ್ಲಿದ್ದ ಆ ಮಾಧುರ್ಯವನ್ನೂ ಮೋಹಕತೆಯನ್ನೂ ನಾನು ನಿಮಗೆ ಹೇಗೆ ತಿಳಿಸಲಿ! ಆಕಾರವನ್ನು ನೋಡಿದರೆ ಹೇಗೆ ಇವಳ ಜನ್ಮಸ್ಥಾನ ದೇವಲೋಕವಿರಬಹುದೆಂದು ತೋರಿತೋ, ಧ್ವನಿಯನ್ನು ಕೇಳಿದರೂ ಅದೇ ಭಾವನೆ ಸ್ಥಿರವಾಗುತ್ತಿತ್ತು. ಮತ್ತು ಅದರ ಮಹಿಮೆಯಿಂದಲೇ ಇರಬೇಕು. ನನ್ನ ಸ್ವಭಾವದಲ್ಲಿಲ್ಲದ ಧೈರ್ಯದಿಂದಲೂ ಸರಳತೆಯಿಂದಲೂ ನಾನು ಮಾತನಾಡತೊಡಗಿದೆ.

"ನಾವಿಬ್ಬರೂ ಹೇಗಾದರೂ ಮಾಡಿ ಮುಂಚಿತವಾಗಿಯೇ ಆ ಸ್ಟೇಷನ್ನಿಗೆ ಹೋಗಿ ಬಿಡೋಣ. ಯಾಕೆಂದರೆ ಇಲ್ಲಿರುವ ಈ ನಾಲ್ಕು ನೂರು ಪ್ರಯಾಣಿಕರೂ ಅಲ್ಲಿಗೇ ಹೋಗಿ ಸೇರಬೇಕಾಗಿದೆ. ಅನಂತರ ನಮಗೆ ಒಂದು ಗಾಡಿ ಬಾಡಿಗೆಗೆ ಸಹ ಸಿಕ್ಕುವುದಿಲ್ಲ" ಎಂದೆ.

ಅವಳು "ಸರಿ" ಎಂದು ತಲೆ ಅಲ್ಲಾಡಿಸಿದಳು. ಇತರರಿಗೂ ಆ ಯುಕ್ತಿ ಹೊಳೆಯಿತೋ ಇಲ್ಲವೋ, ಅಥವಾ ನಾವು ಹೊರಟುದನ್ನು ಅವರು ಗಮನಿಸಿದರೋ ಇಲ್ಲವೋ ನನಗೆ ತಿಳಿಯದು. ಆ ಸ್ಟೇಷನ್‌ನಲ್ಲಿ ನಮ್ಮ ಅದೃಷ್ಟದಿಂದ ಒಂದು ಟ್ಯಾಕ್ಸಿ ಇತ್ತು. ಮುಂದಲ ಆಸನದಲ್ಲಿ ನಿದ್ರಿಸುತ್ತಿದ್ದ ಸಾರಥಿಯನ್ನು ಎಬ್ಬಿಸಿ ಗಾಡಿಯಲ್ಲಿ ಕುಳಿತುಕೊಂಡೆವು. ಅವಳು ತನ್ನ ಮನೆಯ ವಿಳಾಸವನ್ನು ಹೇಳಿದಳು. ಟ್ಯಾಕ್ಸಿ ಹೊರಟಿತು.

"ಇನ್ನಾದರೂ ನನ್ನ ಕೈಯ್ಯನ್ನು ಬಿಡಬಹುದಲ್ಲ?" ಎಂದು ಅವಳು ಮುಗುಳು ನಗೆಯೊಡನೆ ಕೇಳಿದಳು.

ಅಲ್ಲಿಯವರೆಗೆ ನನ್ನ ಕಾಲುಗಳು ಭೂಮಿಯ ಮೇಲೆ ನಿಲ್ಲದೆ ಅಂತರಿಕ್ಷ ದಲ್ಲಿ ಹೋಗುತ್ತಿರುವಂತೆ ನನಗೆ ಒಂದು ಸಂಭ್ರಮವುಂಟಾಗಿದ್ದಿತೇ ಹೊರತು ಅವಳನ್ನು ರೈಲಿನಿಂದ ಕೆಳಕ್ಕೆ ಇಳಿಸುವಾಗ ನಾನು ಹಿಡಿದಿದ್ದ ಅವಳ ಕೈಯ್ಯನ್ನು ಬಿಟ್ಟಿರಲಿಲ್ಲವೆಂಬುದೂ, ಆ ಸಂಭ್ರಮ ಕುತೂಹಲ ಆಕಾಶಗಮನ ಭಾವನೆಗೆ ಅದು ಕಾರಣವೆಂಬುದೂ ನನಗೆ ಹೊಳೆದಿರಲಿಲ್ಲ. ಅರಿತ ಮೇಲೆ ಇನ್ನು ಬಿಡು ವುದೇ? ನಾನೂ ಅವಳ ಕೈ ಬಿಡಲಿಲ್ಲ. ಕುತೂಹಲವೂ ನನ್ನ ಕೈ ಬಿಡಲಿಲ್ಲ. ಪದೇ ಪದೇ ಮುಂದೆ ಮಾತನಾಡುವುದು ಸುಲಭವಾಗಿ ಹೋಯಿತು. ಆಲೋ ಚಿಸುವ ಶ್ರಮವಿಲ್ಲದೆಯೇ ನನ್ನ ಬಾಯಿನಿಂದ ಮಾತುಗಳು ಹೊರಕ್ಕೆ ನೆಗೆಯ ತೊಡಗಿದುವು.

"ಕೈಯ್ಯನ್ನು ಬಿಟ್ಟರೆ ಆಮೇಲೆ ನೀವು ನನ್ನನ್ನು ಬಿಟ್ಟು ಹೋಗಿ ಬಿಟ್ಟರೋ?" ಎಂದು ನ್ಯಾಯವಾಗಿಯೇ ಕೇಳಿದೆ.

"ಟ್ಯಾಕ್ಸಿ ಬಂಡಿಯಲ್ಲಿರುವಾಗ ಎಲ್ಲಿಗೆ ಹೋಗಿಬಿಡಲು ಸಾಧ್ಯ? ಕೈ ಬಿಟ್ಟು ನೋಡಬಹುದಲ್ಲ" ಎಂದು ಆಕೆ ಮುಗುಳು ನಗೆ ನಕ್ಕಳು.

"ಅಪ್ಸರ ಸ್ತ್ರೀಯರೆಲ್ಲ ಮೊದಲು ಹಾಗೆ ಹೇಳುವುದೇ ಪದ್ಧತಿ. ಆದರೆ ಅವರ ಮಾತನ್ನು ನಂಬಿದರೆ ಅನಂತರ ಅಂತರ್ಧಾನವಾಗಿಬಿಡುತ್ತಾರೆ" ಎಂದೆ.

"ಹಾಗೆಯೇ? ಅವರ ಅಭ್ಯಾಸ ನಿಮಗೆ ಹೇಗೆ ಗೊತ್ತು?"

"ಹಿಂದೆ ಒಂದು ಜನ್ಮದಲ್ಲಿ ನೀವು ನನ್ನನ್ನು ಹೀಗೆ ಮೋಸಪಡಿಸಿದುದ ರಿಂದ ನನಗೆ ಗೊತ್ತಾಗಿದೆ. ಬೇರೆ ಮತ್ತೆ ಹೇಗೆ?

"ನಿಮ್ಮನ್ನು ನಾನು ಮೋಸಪಡಿಸಿದೆನೇ? ಅದು ಹೇಗೆ? ನಿಮ್ಮ ಹೆಸ ರೇನು?"

"ಆ ಜನ್ಮದಲ್ಲಿ ನನ್ನ ಹೆಸರು ಪುರೂರವಸ್ ಎಂದು. ಅದೂ ಸಹ ಜ್ಞಾಪಕವಿಲ್ಲವೋ ಎಂಬಂತೆ ಕೇಳುತ್ತಿದ್ದೀರಲ್ಲ!"

"ಹಾಗಾದರೆ ನಾನು ಊರ್ವಶಿಯೇ?"

"ನಾಥಾ, ನಿನ್ನನ್ನು ಬಿಟ್ಟು ಅಗಲುವುದಿಲ್ಲ" ಎಂದು ವಾಗ್ದಾನ ಮಾಡಿದಿರಿ. ವಾಗ್ದಾನ ಮಾಡಿ ಬಿಟ್ಟುಹೋದಿರಿ. ಆದರೆ ನಿಜವನ್ನು ಒಪ್ಪಿ ಕೊಳ್ಳಬೇಕು. ನೀವು ನನಗೆ ಎರಡು ನಿಬಂಧನೆಗಳನ್ನು ಇಟ್ಟಿದ್ದಿರಿ. ನಾನು

ಅವೆರಡನ್ನೂ ಮೀರಿಬಿಟ್ಟೆ. ಇಂದ್ರನ ಮೋಸದಿಂದ ಹಾಗೆ ಮೀರಿಬಿಟ್ಟೆ. ಆ ಪಾಪ........'

"ಯಾವ ನಿಬಂಧನೆಗಳು ?'

"ನೀವು ಎರಡು ಚಿಕ್ಕ ಆಡುಮರಿಗಳನ್ನು ಬಹಳ ಅಕ್ಕರೆಯಿಂದ ಚೆನ್ನಾಗಿ ಪೋಷಿಸುತ್ತಿದ್ದಿರಿ. ಅವು ಹಾಳಾಗಿ ಹೋಗದಂತೆ ನಾನು ಅವನ್ನು ರಕ್ಷಿಸಬೇಕೆಂದು ನನಗೆ ಹೇಳಿದ್ದಿರಿ. ನಾನೂ ಎಚ್ಚರಿಕೆಯಿಂದಲೇ ಇದ್ದೆ. ಆದರೆ ನಾನು ನಿಮ್ಮೊಂದಿಗೆ ಸರಸ ಸಲ್ಲಾಪದಲ್ಲಿ ತೊಡಗಿರುವಾಗ, ಇಂದ್ರನು ಕೆಲವು ಗಂಧರ್ವರನ್ನು ಕಳುಹಿಸಿ ಅವುಗಳನ್ನು ಅಪಹರಿಸಿಬಿಟ್ಟನು. ನಾನು ಏನು ತಾನೇ ಮಾಡುವಂತಿತ್ತು ? ನಿಮ್ಮೊಂದಿಗೆ ಇರುವಾಗ ಪುರುಷನಿಗೆ ಆಡು ಮರಿಯ ಮೇಲಾಗಲೀ ಬೇರೆ ಯಾವುದರ ಮೇಲಾಗಲೀ ಆಲೋಚನೆ ಹೋಗುವುದೇ ? ನೀವೇ ಹೇಳಿ— "

"ಎರಡನೆಯ ನಿಬಂಧನೆ ಯಾವುದು ?"

"ಅದೇ ? ಅದನ್ನು ನೆನೆದುಕೊಂಡಾಗಲೆಲ್ಲ ನನಗೆ ದುಃಖ ಹತ್ತಿಕೊಂಡು ಬರುತ್ತದೆ. ರಾತ್ರಿಯ ಹೊತ್ತು ನಿಮ್ಮ ಪೂರ್ಣ ಸೌಂದರ್ಯವನ್ನು ನಾನು ನೋಡಕೂಡದೆಂದು ಹೇಳಿದ್ದಿರಿ. ಆದುದರಿಂದ ಅಂತಃಪುರದಲ್ಲಿ ನಿಮ್ಮ ಸಹವಾಸದಲ್ಲಿ ನಾನು ಇರುವಾಗಲೆಲ್ಲ ನೀವು ದೀಪವನ್ನೇ ಹೊತ್ತಿಸುತ್ತಿರಲಿಲ್ಲ. ಆದರೇನು ? ನಿಮ್ಮ ಕಣ್ಣುಗಳೇ ನನಗೆ ನಕ್ಷತ್ರಗಳಾಗಿದ್ದುವು. ಹೀಗಿರುವಲ್ಲಿ ಒಂದು ದಿನ ಅಂದೇ ಹೊಸದಾಗಿ ಬಂದ ಕೆಲಸದವಳು– ಅನಂತರ ನಡೆದ ಸಂಗತಿಗಳಿಂದ ನನಗೆ ಈಗ ನಿಶ್ಚಯವಾಗಿ ಗೊತ್ತಾಗಿದೆ– ಇಂದ್ರನೇ ಅವಳನ್ನು ಕೆಲಸದವಳ ವೇಷ ಹಾಕಿಕೊಂಡು ನನ್ನಲ್ಲಿಗೆ ಬರುವಂತೆ ಕಳುಹಿಸಿದ್ದಿರಬೇಕು. ಅವಳು ನಿಮ್ಮ ಕೊಠಡಿಯ ಕಿಟಕಿಯ ಬಾಗಿಲುಗಳನ್ನು ಹಾಕದೆ ಹೋಗಿಬಿಟ್ಟಿದ್ದಳು. ಅಂದು ಹುಣ್ಣಿಮೆ. ಅರ್ಧ ರಾತ್ರಿಗೆ ಎಚ್ಚೆತ್ತೆ. ಕೊಠಡಿಯ ತುಂಬ ಬೆಳದಿಂಗಳು. ಪೂರ್ಣಚಂದ್ರನನ್ನೂ ಸೋಲಿಸುವ ತೇಜಸ್ಸಿನ ಕುಡಿಯಾಗಿ ನೀವು ನಿದ್ರಿಸುತ್ತಿದ್ದಿರಿ. ಆ ದೃಶ್ಯದಿಂದ ನನಗೆ ಉಂಟಾದ ಮಹದಾನಂದದಲ್ಲಿ ನಿಮ್ಮನ್ನು ಎಚ್ಚರಗೊಳಿಸಿ ಬಿಟ್ಟೆ. ನಾನು ನಿಮ್ಮ ಪೂರ್ಣ ಸೌಂದರ್ಯವನ್ನು ನೋಡಿಬಿಟ್ಟುದು ನಿಮಗೆ ತಿಳಿದುದಲ್ಲದೆ ಅದನ್ನು ಇಂದ್ರನಿಗೂ ಚಾಡಿ ಸಾಕ್ಷಿ ಹೇಳಲು ಚಂದ್ರನೂ ಅರಿತುಕೊಂಡನು. ಹೀಗೆ ಆ ನಿಬಂಧನೆಯನ್ನೂ ಮೋಸದಿಂದಲೇ ಉಲ್ಲಂಘಿಸಿಬಿಟ್ಟೆ."

ನಡೆದುದು ಹಾಗೆಯೇ? ನಿಮ್ಮನ್ನು ಕುರಿತು ಕಾಳಿದಾಸ ಬರೆದಿರುವ ವಿಕ್ರಮ–ಊರ್ವಶೀಯದಲ್ಲಿ—"

ನಾಟಕದ ಆವಶ್ಯಕತೆಗಾಗಿ ಕಾಳಿದಾಸ ಎರಡು ಮೂರು ವಿಷಯಗಳನ್ನು ಸ್ವಲ್ಪ ಬದಲಾಯಿಸಿ ಬರೆದಿದ್ದಾನೆ. ನಮ್ಮ ವೃತ್ತಾಂತವನ್ನು–ನಡೆದುದು ನಡೆದಂತೆ ಕಾಳಿದಾಸನ ಕಾಲಕ್ಕೆ ಮುಂಚಿತವಾಗಿಯೇ–ಯಜುರ್ವೇದದಲ್ಲಿ ಶಥಪಥ ಬ್ರಾಹ್ಮಣದಲ್ಲಿ ಹೇಳಿದೆಯಲ್ಲ. ಕೊನೆಯ ದಿನದ ವೃತ್ತಾಂತವನ್ನು ಮಾತ್ರ ಅದರಲ್ಲಿ ಹೇಳಲಿಲ್ಲ. ಎಷ್ಟು ಜನ್ಮ ಕಳೆದರೂ ನಿಮ್ಮನ್ನು ಮರೆಯದ ನನ್ನ ಜ್ಞಾಪಕದಿಂದಲೇ ಅದನ್ನು ಹೇಳುವೆ."

" ನಿಜ ಹೇಳಿ, ಅಂದು ಕಿಟಕಿಯ ಬಾಗಿಲನ್ನು ತೆರೆದಂತೆ ಬಿಡಬೇಕೆಂದು ನೀವು ದಾಸಿಗೆ ಆಜ್ಞಾಪಿಸಲಿಲ್ಲವೇ ? "

" ಇಲ್ಲವೇ ಇಲ್ಲ. ಆದರೆ ಹೊಸದಾಗಿ ಬಂದವಳಿಗೆ ಅದನ್ನು ಮುಚ್ಚು ಎಂದು ಹೇಳದೆ ಇದ್ದಿರಬಹುದು. ನನ್ನ ಪ್ರೇಮದ ಹುಚ್ಚಿನಿಂದ ನೀವು ಹೇಳು ವಂತೆ ಒಂದು ವೇಳೆ ಹಾಗೆ ನಾನು ಆಜ್ಞಾಪಿಸಿದ್ದರೂ ಅದು ಅಂತಹ ದೊಡ್ಡ ತಪ್ಪೆ ? ಕ್ಷಮಿಸಬಾರದುದೇ ? ನೀವೇ ಹೇಳಿ "

"ಆ ರಾತ್ರಿ ನಿಮ್ಮನ್ನು ಬಿಟ್ಟುಹೋದವಳು ಮತ್ತೆ ನಿಮ್ಮಲ್ಲಿಗೆ ಬರಲಿಲ್ಲವೆ?"

" ಇದೇನು ? ಯಾರೋ ಮೂರನೆ ಸ್ತ್ರೀ ನನ್ನನ್ನು ಕೇಳಿ ನಡೆದ ಸಂಗತಿ ಯನ್ನು ತಿಳಿದುಕೊಳ್ಳುವಂತೆ ಇನ್ನೂ ಕೇಳುತ್ತಿದ್ದೀರಿ: ನಡೆದುದೆಲ್ಲ ನಿಮ್ಮ ಚರಿತ್ರೆ ತಾನೇ ? ನಿಮಗೆ ತಿಳಿಯದೆ ? ಅಥವಾ, ನನಗೆ ತಿಳಿದಿದೆಯೆ ನಾನು ಪುರೂರವಸ್ ತಾನೇ ಎಂದು ಪರೀಕ್ಷಿಸಿ ನೋಡುತ್ತಿದ್ದೀರಾ ? ಅಂದಿನ ನಂತರ ನನ್ನ ಮೇಲೆ ಕರುಣೆಯಿಟ್ಟು ಐದುಬಾರಿ ಬಂದಿರಿ. ನನಗೆ ಐದು ಮಕ್ಕಳನ್ನು ಕೊಟ್ಟಿರಿ——"

" ಹಾಗಿದ್ದೂ ನಿಮಗೆ——"

" ಹಾಗಿದ್ದೂ ಎಂದರೆ, ಮತ್ತೆ ನನ್ನನ್ನು ಬಿಟ್ಟು ಹೋಗಿಬಿಟ್ಟಿರೆಲ್ಲ, ಆ ಇಂದ್ರನ ಮಾತಿಗೆ ಕಟ್ಟುಬಿದ್ದು ! ಅವನಿಗೆ ಬೇಕಾಗಿರುವುದು, ಹೇಗಾದರೂ ಕಾಲ ಕಳೆಯುವುದು ತಾನೇ ! ಅದಕ್ಕೆ ರಂಭೆ ಇಲ್ಲವೇ ? ನೀವೂ ಬೇಕೆ ? ಕಿರೀಟದ ಮೇಲೆ ನವರತ್ನ ಪದಕವನ್ನಿಡುವಂತೆ. ನೀವು ಇಲ್ಲದುದರಿಂದ ಅವನ ಸ್ವರ್ಗ ಹಾಳು ಬಿದ್ದಿತ್ತೆ ? ನನ್ನ ಹಾಗೆ ಅನ್ಯಾಯದಿಂದ ನೊಂದ ಮನುಷ್ಯ

ಶಪಿಸಿದರೆ ದೇವೇಂದ್ರನಿಗೂ ಆ ಶಾಪ ತಟ್ಟದೆ? ನನಗೆ ಮೋಸಮಾಡಿ ನಿಮ್ಮನ್ನು ಕರೆಸಿಕೊಂಡುಬಿಟ್ಟನೆಲ್ಲ ಆ ಕಡುಪಾಪಿ! ಅವನ ಸ್ವರ್ಗವೈಭವ ಹಾಳಾಗಿಯೇ ಹೋಗಲಿ!"

"ವ್ಯರ್ಥವಾಗಿ ಶಪಿಸಬೇಡಿ. ಇತರರ ಮೇಲೆ ಆಕ್ರೋಶಪಡುವುದರಿಂದ ಮೊದಲು ನಮ್ಮ ಮನಸ್ಸಿನ ಶಾಂತಿ ತೃಪ್ತಿಯಲ್ಲವೇ ಹಾಳಾಗಿ ಹೋಗುವುದು? ಇತರರನ್ನು ಮರೆತುಬಿಡಿ."

"ನೀವು ಇಂದ್ರನ ಪಕ್ಷ ಹಿಡಿದು ಮಾತನಾಡುತ್ತಿದ್ದೀರಿ."

"ಇಲ್ಲವೇ ಇಲ್ಲ. ಯಾತಕ್ಕಾಗಿ ಅವನ ಪರ ಹಿಡಿಯಬೇಕು. ಆತ ನೇನು ನನ್ನ ವಲ್ಲಭನೇ? ನೂರು ಯಾಗಗಳನ್ನು ಮಾಡಿ ಇಂದ್ರ ಪದವಿಯನ್ನು ಹೊಂದಿದ ಮಾತ್ರಕ್ಕೆ ಯಾವ ಸ್ತ್ರೀಯ ಹೃದಯವೂ ಅವನಿಗೆ ವಶವಾಗಿ ಬಿಡು ವುದೆ? ನಾವು ಇಲ್ಲಿ ಹೇಳುತ್ತಿರುವುದು ಸಹ ಅವನ ಕಿವಿಗೆ ಬಿದ್ದರೂ ಬೀಳ ಬಹುದು. ಹಾಗಿದ್ದರೂ ಸತ್ಯವಾಗಿ ಹೇಳುತ್ತೇನೆ. ನಂಬಿ; ನನ್ನ ಮನಸ್ಸಿನ ಮಟ್ಟಿಗೆ ಬೀದಿಯಲ್ಲಿ ಹಾರಾಡುವ ಈ ಧೂಳೂ ಒಂದೇ ಅವನೂ ಒಂದೇ."

"ಹಾಗಾದರೆ ನೀನು ಇನ್ನೂ ಈಗಲೂ ನನ್ನ ಸ್ವಂತ ಊರ್ವಶಿ ತಾನೇ.?" ಎಂದುಕೊಂಡು ಅವಳ ಮತ್ತೊಂದು ಕೈಯನ್ನು ಹಿಡಿದುಕೊಂಡೆ.

"ನಾಥಾ, ನಾನು ಎಂದೂ ಬದಲಾಯಿಸಲೇ ಇಲ್ಲವೆಲ್ಲ. ಹಾಗಿಲ್ಲದಿದ್ದರೆ ನಾನ್ಯಾಕೆ ನಿಮ್ಮನ್ನು ಹೀಗೆ ಹುಡುಕಿಕೊಂಡು ಬರುತ್ತಿದ್ದೆ? ಒಂದೊಂದು ಜನ್ಮ ದಲ್ಲಿಯೂ ಬಂದು ಹುಡುಕಿ ನಿಮ್ಮನ್ನು ಹೊಂದುತ್ತೇನೆ. ಅನಂತರ ನಿಮ್ಮ ಕರ್ಮದಂತೆ ನಡೆಯುತ್ತದೆ. ನನ್ನ ಒಬ್ಬಳ ಶಕ್ತಿಯಲ್ಲಿ ಮಾತ್ರ ಏನು ಇದೆ?"

"ಕಾಂತೇ! ನೀನು ನನ್ನನ್ನು ಹುಡುಕಿಕೊಂಡು ಬಂದೆಯಾ? ನಾನು ಅಷ್ಟೊಂದು ಭಾಗ್ಯಶಾಲಿಯೇ? ನಾನು ಏನು ಮಾಡಿದರೆ, ಮತ್ತೆ ನಾವಿಬ್ಬರೂ ಅಗಲದ ಕರ್ಮಫಲ ನನಗೆ ಉಂಟಾಗುತ್ತೆ, ಹೇಳಿಕೊಡುತ್ತೀಯಾ? ಇನ್ನು ಇಂದ್ರನಿಗಾಗಿ ನನ್ನನ್ನು ಬಿಟ್ಟು ಎಂದೂ ಹೋಗುವುದಿಲ್ಲವೆಲ್ಲ? ಹೋಗುವುದಿಲ್ಲ ಎಂದು ದಯೆಯಿಟ್ಟು ಆಶ್ವಾಸನ ಕೊಡು! ದಯವಿಟ್ಟು ಕೊಡು!" ಎಂದು ಅವಳ ಕೈಗಳ ಮೇಲೆ ಮುತ್ತುಗಳನ್ನು ಸುರಿಸಿದೆ. ನಾನು ಕೊಟ್ಟ ಆ ಮುತ್ತು ಗಳ ಮೂಲಕವಾಗಿಯೇ ಇರಬಹುದು; ನನ್ನ ಪೂರ್ವ ಜನ್ಮದ ಬಾಳಿನಬಂದು ಅಲೆಯನ್ನು ಸ್ಪರ್ಶಿಸಿದಂತೆ ಅನುಭವಿಸಿದೆ. ಆನಂದದಲ್ಲಿ ಓಲಾಡುತ್ತಿದ್ದ ನನ್ನ

ಕಿವಿಯಲ್ಲಿ ಇನಿದಾದ ವೀಣೆಯ ನಾದ ಕೇಳಿದಂತಿತ್ತು. ಅದರ ಮಧ್ಯೆ ಒಂದು ಮಾಯಾಶಕ್ತಿಯಿಂದ, ಮಾತುಗಳ ಸಹಾಯವೇ ಇಲ್ಲದೆ, ಆ ಮಾತುಗಳು ಹೇಳುವ ಭಾವನೆಗಳು ನನ್ನನ್ನು ಮುಟ್ಟಿದುವು. ಸಮುದ್ರದ ತಳಭಾಗದಲ್ಲಿ ಉದಿಸುವ ಚಂದ್ರ ಅಂತರಿಕ್ಷವನ್ನು ಮುಟ್ಟುವಂತೆ, ನಿಧಾನವಾಗಿ, ಅಲುಗಾಡದೆಯೇ, ಶಾಶ್ವತವಾದ ಪ್ರಕಾಶದೊಡನೆ ಆ ಆನಂದ, ನನ್ನ ವಿವೇಕವನ್ನು ಮುಟ್ಟಿತು ; ಅಮೃತ ಪಾನ ಮಾಡಿದವನ ದೇಹದಲ್ಲಿ ಅದರ ಗುಣ ಹರಡಿ ಐಕ್ಯವಾಗುವಂತೆ ನನ್ನ ಪ್ರಜ್ಞೆಯೊಂದಿಗೆ ಒಂದಾಗಿ ಸೇರಿತು.

“ ನಾನು ಊರ್ವಶಿ. ಸೃಷ್ಟಿ ವ್ಯವಸ್ಥೆಯಲ್ಲಿ ಸ್ತ್ರೀ ಅಂಶವಾದ ಕಾರುಣ್ಯ ಎನ್ನುವುದು ನಾನು. ನಾನೇ ಅನುತಾಪ. ನಾನೇ ಆಸೆ, ಆತ್ಮದ ಸೌಂದರ್ಯವೂ ನಾನೇ.

“ಯಾರು, ತಾನೇ ಹೆಚ್ಚು ಎಂದು ಭಾವಿಸಿ ತನ್ನ ಆನಂದವನ್ನೇ ಕೋರುತ್ತಾ ನನ್ನನ್ನು ಆಳುವುದನ್ನೇ ಗುರಿಯಾಗಿಟ್ಟುಕೊಂಡಿದ್ದಾನೋ ಅವನು ಚಕ್ರವರ್ತಿಯಾಗಿರಲಿ, ದೇವೇಂದ್ರನಾಗಿರಲಿ ನನ್ನನ್ನು ನಿಶ್ಚಯವಾಗಿ ಅರಿಯಲಾರ. ಅವನು ನನ್ನ ಅಧಿಪತಿಯಾಗಬಹುದು. ಆದರೆ ನನ್ನ ಹೃದಯೇಶ್ವರನಲ್ಲ.

ಯಾರು ತನ್ನ ಸುಖವನ್ನು ಗಮನಿಸದೆ ನನ್ನನ್ನೇ ಧ್ಯಾನಿಸುತ್ತ ನನಗಾಗಿ ಬಾಡಿ ನನಗಾಗಿ ಪರಿತಪಿಸುತ್ತಾ ಕೊರಗುತ್ತಿರುತ್ತಾರೋ, ಅವರೇ ನನ್ನ ಹೃದಯೇಶ್ವರ ; ನನ್ನ ಪುರೂರವಸ್——”

* * * * *

ಏನೋ ಕಾರಣದಿಂದ ಕಣ್ಣು ತೆರೆದೆ. ರೈಲು ಗಾಡಿ ಕಲ್ಕತ್ತವನ್ನು ಸೇರಿತ್ತು. ಕೂಲಿಗಳು ಸಾಮಾನುಗಳನ್ನು ಸಾಗಿಸುತ್ತಿದ್ದರು. ನನ್ನ ಮಿತ್ರ ನನ್ನನ್ನು ತಟ್ಟಿ ಎಬ್ಬಿಸಿದನು.

ಹೀಗೆ ನನಗೆ ಅಂದು ದೊರೆತ ಆ ಅಪೂರ್ವ ಅನುಭವ, ಮುಂದೇನೋ ಎಂಬ ನಿರೀಕ್ಷೆ ಸಹ ಇಲ್ಲದಂತೆ ಒಂದು ಕನಸಾಗಿ ಕ್ಷಣದಲ್ಲಿಯೇ ಮಾಯವಾಗಿ ಬಿಟ್ಟಿತು. ಅವಳ ಆ ನೆನಪೇ ಇನ್ನು ನನಗೆ ಜೊತೆ : ಅದೇ ಗತಿ.

‘ಒಂದು ಕನಸಿನಂತೆ’ ಎಂದು ಆತುರದಿಂದ ಹೇಳಿಬಿಟ್ಟೆನಲ್ಲ! ನಿಜವಾಗಿ ಆ ಅನುಭವ ಒಂದು ಕನಸೇಯೇ? ಬೇರೇನೂ ಅಲ್ಲವೇ? ಒಂದು ಪಕ್ಷ ಪೂರ್ವ ಜನ್ಮದ ವಾಸನೆಯಾಗಿದ್ದಿರಕೂಡದೇ? ದೇಹ ಬಳಲಿದ ಸಮಯಗಳಲ್ಲಿ

ಆತ್ಮದ ಶಕ್ತಿ ಬೆಳೆದು ಆ ಹಿಂಪಲ ವಾಸನೆಯನ್ನು ಎಟುಕಿಸಿ ಹಿಡಿದಿರಲು ಸಾಧ್ಯವೇ? ಅಥವಾ ಪೂರ್ವ ಜನ್ಮ ಕರ್ಮ ಫಲದಿಂದ ಈಗ ದೊರೆತ ಈ ಉಪದೇಶ, ಮುಂದಲ ಮಾರ್ಗದರ್ಶನಕ್ಕೆ ಒಂದು ಕೈ ದೀವಿಗೆ ಎಂದು ಭಾವಿಸ ಬೇಕೆ? ಹೀಗೆಲ್ಲ ಪುಸ್ತಕ ವೇದಾಂತ ಆಗಾಗ ತೋರುವುದು.

ಈ ಪ್ರಶ್ನೆಗಳಿಗೆಲ್ಲ ಸರಿಯಾದ ಪ್ರತ್ಯುತ್ತರ ಕೊಡುವ ಪಂಡಿತರು ಯಾರು? ಅವರನ್ನು ಎಲ್ಲಿ ಕಾಣಬಹುದು? ಅವರನ್ನು ಹುಡುಕಿ ಹಿಡಿದರೂ ಅವರು ಕಂಡುಹಿಡಿದು ಹೇಳುವ ತಪ್ಪುಗಳನ್ನು ಕೇಳಲು ನನ್ನ ಮನಸ್ಸು ಸಮ್ಮತಿಸುವುದೆ? ನನ್ನ ಮನೋ ನೆಮ್ಮದಿಗಾಗಿ ನನಗೆ ಇರುವ ವಿಚಾರವೆಲ್ಲ ಇದೆಯೆ? ಇದೇ ನನ್ನ ಮನಸ್ಸಾಕ್ಷಿ. ನಾನು ಅಂದು ಅನುಭವಿಸಿದುದು ಕನಸೇ? ಅಥವಾ ಅದು ಮಾತ್ರ ನಿಜವಾಗಿ ಈ ಕಲ್ಕತ್ತೆಯೂ ಸೇತುಯಾತ್ರೆಯೂ ಕನಸುಗಳೋ? ಈ ಕನಸುಗಳಿಂದ ಒಂದು ದಿನ ಎಚ್ಚೆತ್ತ ಒಡನೆ, ಹಿಂದಲಂತೆ ಅವಳನ್ನು ಎದುರಿಗೆ ಕಾಣುವೆನೆ?"

---

# ಯಾಗಭಂಗ

ಅಗ್ನಿಗರ್ಭರ ಆಶ್ರಮವು ಭರದ್ವಾಜ ಆಶ್ರಮದಿಂದ ಒಂದು ಕೂಗಿನ ದೂರದಲ್ಲಿದ್ದಿತು. ಒಂದು ಯಾಗಮಾಡಬೇಕೆಂಬುದು ಅಗ್ನಿಗರ್ಭರ ಬಹುಕಾಲದ ಮನೋರಥವಾಗಿದ್ದಿತು. ಅಗ್ನಿಗರ್ಭರು ಆ ಬೆಳಗ್ಗೆ ಆ ವಿಷಯವನ್ನು ಭರದ್ವಾಜ ಮುನಿಗಳೊಂದಿಗೆ ಪ್ರಸ್ತಾಪಿಸಿದ್ದರು. ಮಹರ್ಷಿ ಭರದ್ವಾಜರು ತಾವೇ ಸ್ವತಃ ಬಂದು ಇದ್ದು ಯಾಗವನ್ನು ಪೂರ್ಣಗೊಳಿಸುವುದಾಗಿ ವಚನವಿತ್ತರು. ಅದರಿಂದ ಅಗ್ನಿಗರ್ಭರಿಗೆ ಬಹಳ ಸಂತೋಷವಾಯಿತು. ಆದರೆ ಅವರು ತಮ್ಮ ಮನೆಗೆ ಬಂದು ತಮ್ಮ ಹೆಂಡತಿಯಾದ ದಾಕ್ಷಾಯಿಣೀದೇವಿಗೆ ಆ ವಿಷಯವನ್ನು ತಿಳಿಸಿದಾಗ ಆಕೆಗೆ ಅಷ್ಟು ಸಂತೋಷವಾಗಲಿಲ್ಲ.

"ಈಗ ಯಾಗವನ್ನು ಯಾಕೆ ಮಾಡಬೇಕು? ನಾವು ಇಲ್ಲಿ ಸುಖವಾಗಿಯೇ ಇದ್ದೇವಲ್ಲ" ಎಂದಳು ದಾಕ್ಷಾಯಿಣಿ.

"ಮತ್ತೂ ಮತ್ತೂ ಕ್ಷೇಮವುಂಟಾಗುವುದಕ್ಕಾಗಿ" ಎಂದರು ಋಷಿ.

“ ಹೇಗೆ ಕ್ಷೇಮವುಂಟಾಗುತ್ತೆ ? ನೀವು ಕುದುರೆಯಿಂದ ಬಿದ್ದು ಕೈಕಾಲು ಮುರಿದುಕೊಂಡರೆ ಮಾಡುವುದೇನು ?” ಎಂದಳು ಆಕೆ.

“ ನಾನು ಕುದುರೆಯ ಮೇಲೆ ಏಕೆ ಏರಬೇಕು ?”

“ ಹಾಗಾದರೆ ಅಷ್ಟೊಂದು ದೂರವನ್ನೂ ನಡೆದುಕೊಂಡೇ ಹೋಗುತ್ತೀರಾ ? ಕಾಲು ನೋಯುವುದಲ್ಲ ?”

“ ನಾನು ಎಲ್ಲಿಗೆ ಅಷ್ಟೊಂದು ದೂರ ಹೋಗಬೇಕಾಗಿದೆ ?”

“ ಕುದುರೆ ಹೋಗುವೆಡೆಗಳಲ್ಲೆಲ್ಲಾ ಹೋಗಿ, ಕುದುರೆ ಯಾರನ್ನು ಭಂಗಿಸುವುದೋ ಅವರನ್ನೆಲ್ಲಾ ನೀವೂ ಭಂಗಿಸಬೇಡವೇ ?” ಎಂದಳು ದಾಕ್ಷಾಯಿಣೀ ದೇವಿ.

ಅಗ್ನಿಗರ್ಭರು “ ಕುದುರೆ ಯಾವುದು ? ಭಂಗಿಸುವುದಾವುದು ?” ಎಂದರು. ಅನಂತರ “ ಓಹೋ, ಅಶ್ವಮೇಧಯಾಗವನ್ನು ಕುರಿತು ಯೋಚಿಸುತ್ತಿದ್ದೀಯ ? ಅದು ರಾಜರು, ಕ್ಷತ್ರಿಯರು ಮಾಡುವ ಯಾಗ. ನಾನು ಮಾಡಬೇಕೆಂದಿರುವುದು ನಮ್ಮ ಆಶ್ರಮದಲ್ಲಿಯೇ ಒಂದು ಬ್ರಹ್ಮಯಾಗ ” ಎಂದರು.

“ ಹಾಗಾದರೆ ನನ್ನನ್ನು ಕರೆದುಕೊಂಡು ದೇಶವನ್ನೆಲ್ಲಾ ತೋರಿಸಿಕೊಂಡು ಬರುವುದಿಲ್ಲ ? ಆಶ್ರಮದಲ್ಲಿ ಇದ್ದಲ್ಲಿಯೇ ಇರುವುದಾದರೆ ಇವನ್ನೆಲ್ಲಾ ಯಾಕೆ ಮಾಡಬೇಕು ?”

“ಬ್ರಾಹ್ಮಣನಾಗಿ ಹುಟ್ಟಿದವನು ತಪಸ್ಸು ಮಾಡುವಂತೆ, ಯಾಗವನ್ನೂ ಮಾಡಬೇಕೆಂಬುದು ನಿನಗೆ ತಿಳಿಯದೆ ? ನೂರು ಯಾಗಗಳನ್ನು ಮಾಡಿ ಇಂದ್ರಪದವಿಯನ್ನು ಪಡೆಯುವರೆಂದು ನೀನು ಕೇಳಿಲ್ಲವೆ ? ”

“ನೀವು ಯಾಕೆ ನನ್ನನ್ನು ಬಿಟ್ಟು ಹೋಗಿ ಇಂದ್ರನಾಗಬೇಕು ?” ಎಂದು ಕೇಳಿದಳು ದಾಕ್ಷಾಯಿಣಿ.

“ ಸರಿ ! ಒಂದು ಯಾಗ ಮಾಡಿದ ಕೂಡಲೆ ಇಂದ್ರನಾಗಿಬಿಡುತ್ತೇನೆಯೇ ? ಹೀಗೆಲ್ಲ ಯಾಕೆ ಯೋಚಿಸುತ್ತೀ ? ನಿನ್ನನ್ನು ಬಿಟ್ಟು ಎಲ್ಲಿಯೂ ಹೋಗುವುದಿಲ್ಲ ” ಎಂದರು ಅಗ್ನಿಗರ್ಭರು.

ಅವರ ಹೆಂಡತಿ “ ನನಗೆ ಎಲ್ಲಾ ಗೊತ್ತು ” ಎಂದರು.

“ ನಿನಗೆ ಏನು ಎಲ್ಲಾ ಗೊತ್ತು ?”

"ನಿನುಗೆ ಇಂದ್ರನ ಅಪ್ಸರ ಸ್ತ್ರೀಯರ ಮೇಲೆ ಯಾಕೆ ಮನಸ್ಸು ಈ ವಯಸ್ಸಿನಲ್ಲಿ ?"

"ಶಾತಂ ಪಾಪಂ ! ನಾನು ಹಾಗೆ ಯೊಚಿಸಲೇ ಇಲ್ಲವಲ್ಲ. ನಾನು ಮಾಡುವುದು ಇದೊಂದೇ ಯಾಗ. ಸುಮ್ಮಸುಮ್ಮನೆ ಭಯಪಡಬೇಡ."

ದಾಕ್ಷಾಯಿಣಿಯು "ಯಾಗವೆಂದಮೇಲೆ ಹೋಮ ಬೆಳೆಯಬೇಕಲ್ಲ ? ತುಪ್ಪಕ್ಕೆ ಏನು ಮಾಡುತ್ತೀರಿ ?" ಎಂದು ಕೇಳಿದಳು.

ಅಗ್ನಿ ಗರ್ಭರು "ಅದಕ್ಕಾಗಿಯೇ ನಿನ್ನೊಂದಿಗೆ ಹೇಳುತ್ತಿರುವುದು. ನೆರೆಹೊರೆ ಆಶ್ರಮಗಳಲ್ಲಿ ಕೇಳಿ ಸ್ವಲ್ಪ ಸ್ವಲ್ಪವಾಗಿ ಕೂಡಿಸಿ ಒಂದು ಗಡಿಗೆ ತುಪ್ಪ ಮಾಡಿಡು. ಹೇಗಾದರೂ ಮಾಡಿ ಒಂದು ಗಡಿಗೆ ಸೇರಿಸಬೇಕು" ಎಂದು ಕೇಳಿಕೊಂಡರು.

ಅವರ ಹೆಂಡತಿಯು "ಇದಕ್ಕೆ ಮಾತ್ರ ನಾನು ಬೇಕು ? ಆ ಅಪ್ಸರ ಸ್ತ್ರೀಯರಿಗೇ ತುಪ್ಪ ತರುವಂತೆ ಯಾಕೆ ಹೇಳಬಾರದು ?" ಎಂದು ಗೊಣಗುಟ್ಟಿದಳು. ಮುನಿವರರು ಬಹಳ ಕಷ್ಟಪಟ್ಟು ಹೆಂಡತಿಯ ಭಯಗಳನ್ನೆಲ್ಲಾ ಹೋಗಲಾಡಿಸಿ ತಮ್ಮ ನಿತ್ಯ ಕರ್ಮಾನುಷ್ಠಾನಗಳಿಗೆ ತೆರಳಿದರು.

ಕೆಲವು ದಿನಗಳೊಳಗಾಗಿ ಅಗ್ನಿಗರ್ಭರ ಶಿಷ್ಯರು ಒಂದು ಆನೆ ಗಾತ್ರ ಸಮಿತ್ತುಗಳ ರಾಶಿಯನ್ನು ಸಂಗ್ರಹಿಸಿದರು. ದಾಕ್ಷಾಯಿಣೀ ದೇವಿಯೂ ಮತ್ತಾವ ಸಬೂಬನ್ನೂ ಹೇಳದೆ ಆವಶ್ಯಕವಾದಷ್ಟು ಹಸುವಿನ ತುಪ್ಪವನ್ನು ಸಂಗ್ರಹಿಸಿಟ್ಟಳು. ಯಾಗಮಾಡಲು ಗೊತ್ತುಮಾಡಿದ್ದ ಮುಹೂರ್ತವೂ ಸಮಿಾಪಿಸಿತು.

೨

ಅಗ್ನಿಗರ್ಭರ ಆಶ್ರಮದಿಂದ ಸುಮಾರು ಎರಡು ಯೋಜನ ದೂರದಲ್ಲಿ ಕಾಡಿನ ಮಧ್ಯದಲ್ಲಿ ಒಂದು ದೊಡ್ಡ ಮನೆ ಇತ್ತು. ಆದರೆ ಆಶ್ರಮಕ್ಕೂ ಅದಕ್ಕೂ ಬಹಳ ವ್ಯತ್ಯಾಸ. ಕಾಡಿನ ಆ ಮನೆಯಲ್ಲಿ ಬೆಳಗಿನ ಹೊತ್ತು ನವಿಲುಗಳು ಗರಿಗಳನ್ನು ಕೆದರಿಕೊಂಡು ನರ್ತನ ಮಾಡುವುದಿಲ್ಲ. ಎಳೆತನದ ಚೇಷ್ಟೆಯಿಂದ ಹಾಗೇನಾದರೂ ಒಂದು ನವಿಲು ಅಲ್ಲಿಗೆ ಹೋದರೆ ಅದಕ್ಕೆ ನೀವಾರ ಧಾನ್ಯವನ್ನು ಹಾಕುವವರು ಅಲ್ಲಿಲ್ಲ. ಧಾನ್ಯದ ಬದಲು ಅದಕ್ಕೆ ಮೈ ತುಂಬ ಬಾಣಗಳು ದೊರೆತಾವು. ಆಗ ತಾನೇ ಕಣ್ಣು ಬಿಡುತ್ತಿರುವ ಹುಲ್ಲೇಕರುಗಳು ಆ ಕಾಡಿನ

ಮನೆಯ ಕಡೆ ದಾರಿ ತಪ್ಪಿ ಸುಳಿದರೆ ಅವು ಅಲ್ಲಿಯೇ ಆಹುತಿಯಾಗುವುವು. ಈ ಕಾಡಿನ ಮನೆ ವಿರೂಪಾಕ್ಷನೆಂಬ ರಾಕ್ಷಸನ ವಾಸಸ್ಥಾನ.

"ಇಂದು ಯಾರೋ ಚಿಕ್ಕ ವಯಸ್ಸಿನವನು ಬಂದಿದ್ದನಲ್ಲ, ಅವನು ಯಾರು ?" ಎಂದು ವಿರೂಪಾಕ್ಷನು ತನ್ನ ಹೆಂಡತಿ ಜಾಂಬಲಳನ್ನು ಕೇಳಿದನು.

"ಬಂದಿದ್ದನಲ್ಲವೇ ? ಚೆನ್ನಾಗಿದೆ! ದಿನದಿನಕ್ಕೆ ಕಣ್ಣಿನ ಚುರುಕು ? ಬಂದಿದ್ದವಳು ಒಬ್ಬ ಸ್ತ್ರೀ. ಅಗ್ನಿಗರ್ಭರ ಪತ್ನಿ" ಎಂದಳು ಜಾಂಬಲ.

"ಅವಳು ಯಾಕೆ ಬಂದಿದ್ದಳು ?"

"ಆಕೆ ಕಮಂಡಲ ಒಂದನ್ನು ತಂದಿದ್ದಳು. ಅವಳ ಯಜಮಾನರದಂತೆ."

"ಅದೆಲ್ಲಾ ಸರಿ. ಆಕೆ ಇಲ್ಲಿಗೆ ಯಾತಕ್ಕಾಗಿ ಬಂದಳು ?"

"ಅದರಲ್ಲಿ ನೀರನ್ನೂ ತೆಗೆದುಕೊಂಡು ಹೋಗಬಹುದಂತೆ. ಬೇರೆ ಏನನ್ನು ಬೇಕಾದರೂ ತೆಗೆದುಕೊಂಡು ಹೋಗಬಹುದಂತೆ. ಈ ಮಣ್ಣು ಬಾನಿಯಂತೆ, ಎಡವಿ ಬಿದ್ದರೆ ಎಲ್ಲಿ ಒಡೆದು ಹೋಗುವುದೋ ಎಂಬ ಭಯವೇ ಇಲ್ಲ."

"ಅದೆಲ್ಲಾ ಸರಿ. ಅವಳು ಇಲ್ಲಿಗೆ ಯಾಕೆ ಬಂದಿದ್ದಳೆಂಬುದನ್ನು ಹೇಳು."

"ನಾನೇ ಬರಹೇಳಿದ್ದೆ. ಆವತ್ತು ಹೊಳೆಯಲ್ಲಿ ಕಂಡಾಗ 'ಸ್ವಲ್ಪ ಹಸುವಿನ ತುಪ್ಪ ಸಿಕ್ಕುವುದೇ' ಎಂದು ಕೇಳಿದಳು. ನಮ್ಮ ಹತ್ತಿರ ಅನೇಕ ಹಸುಗಳು ಇವೆಯಲ್ಲಾ ; 'ಬಂದು ಏನು ಬೇಕೋ ತೆಗೆದುಕೊಂಡು ಹೋಗು' ಎಂದು ಹೇಳಿದ್ದೆ. ಅದಕ್ಕಾಗಿಯೇ ಆ ಕಮಂಡಲವನ್ನು ತಂದಿದ್ದಳು. ಅಂತ ಹುದು ನನಗೂ ಒಂದು ಬೇಕು."

"ಹಸುವಿನ ತುಪ್ಪ ಅವಳಿಗೆ ಯಾತಕ್ಕಂತೆ, ವಿಚಾರಿಸಿದೆಯಾ ?"

"ನಾವು ಗಂಡಸರಂತೆ ಅದನ್ನೆಲ್ಲ ಅಲೌಕಿಕವಾಗಿ ಕೇಳುವುದಿಲ್ಲ. ಅಂತಹ ಕಮಂಡಲ ನನಗೂ ಒಂದು ಬೇಕು."

"ಅಗ್ನಿಗರ್ಭರು ಯಾಗ ಮಾಡುವಂತೆ ತೋರುತ್ತದೆ. ಅದಕ್ಕಾಗಿಯೇ ಹಸುವಿನ ತುಪ್ಪ ಕೇಳಿದ್ದಾರೆ. ನೀನು ಆಕೆಗೆ ಯಾಕೆ ತುಪ್ಪ ಕೊಟ್ಟೆ ?"

"ಯಾಗವನ್ನೇ ಮಾಡಲಿ. ನಿಮಗೇನಂತೆ ಅದನ್ನು ಕಟ್ಟಿಕೊಂಡು ?"

"ಮಾಡಲಿ ? ಚೆನ್ನಾಗಿ ಹೇಳಿದೆ. ರಾವಣೇಶ್ವರನ ಕಿವಿಗೆ ಬಿದ್ದರೆ ಏನು ಹೇಳುವನು ? ನನ್ನ ಆಧಿಪತ್ಯದಲ್ಲಿರುವ ಅರಣ್ಯದಲ್ಲಿ ಒಂದು ಯಾಗ ನಡೆದು ಅದನ್ನು ನಾನು ತಡೆಯದೇ ಹೋದರೆ——"

"ಪ್ರಮಾದವಲ್ಲವೆ! ನೀವು ಸುಮ್ಮನೆ ಇರಿ. ಆಕೆ ಬಹಳ ಒಳ್ಳೆಯವಳು. ಆಕೆಯ ತಮ್ಮ, ಮುಂದಲ ಸಲ ಅಯೋಧ್ಯೆಗೆ ಹೋದಾಗ ನನಗೂ ಅಂತಹ ಒಂದು ಕಮಂಡಲವನ್ನು ತರಿಸಿಕೊಡುವುದಾಗಿ ಹೇಳಿದಳು. ಅವರು ಯಾಗ ಮಾಡಿದರೆ ನಿಮ್ಮ ಪದ್ಧತಿಯಂತೆ ಹೋಗಿ ಅದರಲ್ಲಿ ಮಾಂಸವನ್ನು ಚೆಲ್ಲಬೇಡಿ."

"ಅವಳು ಒಳ್ಳೆಯವಳೆ; ಅಲ್ಲವೆಂದವರು ಯಾರು? ಇದ್ದರೂ ರಾಜ ಕಾರ್ಯವನ್ನು ನಿಲ್ಲಿಸುವುದು ಸಾಧ್ಯವೆ? ನನ್ನ ಕರ್ತವ್ಯವನ್ನು ನಾನು ಮಾಡ ಬೇಡವೆ? ನನ್ನ ಕುಲಾಚಾರ—"

"ಒಳ್ಳೆ ಕರ್ತವ್ಯ! ಒಳ್ಳೆ ಕುಲಾಚಾರ! ತಮ್ಮ ಪಾಡಿಗೆ ಇರುವವರನ್ನು ಹಿಂಸಿಸುವುದು! ಅವರು ತುಪ್ಪವನ್ನು ಸುಮ್ಮನೆ ಬೆಂಕಿಗೆ ಸುರಿದು ಹಾಳು ಮಾಡುತ್ತಾರೆ ಎಂದರೆ ನಮ್ಮ ಮನೆಯ ಒಳ್ಳೆಯ ಮಾಂಸವನ್ನೂ ಹಾಳು ಮಾಡಬೇಕೇ? ಹೀಗೆ ಮತ್ತೊಬ್ಬರನ್ನು ಹಿಂಸಿಸುವುದರಿಂದ ತಾನೇ ನಿಮಗೆ ಶಾಪ ಬರುವುದು; ಕಣ್ಣು ಕಾಣದೆ ಹೋಗುವುದು?"

"ಶಾಪವೂ ಆಯಿತು! ಗೀಪವೂ ಆಯ್ತು. ನನ್ನನ್ನು ಶಪಿಸುವ ಶಕ್ತಿ ಯಾರಿಗಿದೆ? ಅಸರನ್ನು ಧ್ವಂಸ ಮಾಡುತ್ತೇನೆ" ಎಂದು ವಿರೂಪಾಕ್ಷನು ಸ್ವಲ್ಪ ಸುತ್ತಮುತ್ತ ನೋಡಿಕೊಂಡೇ ಹೇಳಿದನು. "ನನಗೆ ಕಣ್ಣು ಕಾಣದೆ ಏನು? ಮನೆಯಲ್ಲೆಲ್ಲಾ ನೀವು ಕತ್ತಲೆ ಮಾಡಿ ಇಟ್ಟಿರುವುದರಿಂದ ಒಂದೊಂದು ಸಲ ತಬ್ಬಿಬ್ಬಾಗುತ್ತದೆ" ಎಂದನು.

"ಯಾವುದಕ್ಕೂ ನನ್ನ ಮೇಲೆ ತಪ್ಪು ಹೊರಿಸುವುದೊಂದೇ ನಿಮಗೆ ಗೊತ್ತು. ಆ ದಿನ ನಡು ಹಗಲಿನಲ್ಲಿ ಆಡಿನಮರಿಗೆ ಬದಲಾಗಿ ನಮ್ಮ ಮಗುವನ್ನೇ ಅಂಗಳದಲ್ಲಿ ಕಟ್ಟಿಹಾಕುವುದಕ್ಕೆ ಹೋಗಲಿಲ್ಲವೇ? ಕಣ್ಣು ಚೆನ್ನಾಗಿ ಕಾಣುತ್ತದೆಂಬುದಕ್ಕೆ ಅದಕ್ಕಿಂತ ಬೇರೆ ಏನು ಸಾಕ್ಷಿ ಬೇಕು?"

"ಸುಮ್ಮನೆ ಅದನ್ನೇ ಹೇಳುತ್ತಿದ್ದೀಯೆಲ್ಲ. ಆಡಿನ ಮರಿಯಂತೆ! ನಿನ್ನ ಮಗ ಯಾಕೆ ನಾಲ್ಕು ಕಾಲಿನಲ್ಲಿ ತೆವಳಿಕೊಂಡು ಬರಬೇಕಾಗಿತ್ತು? ಅದಿರಲಿ ಭರದ್ವಾಜ ಋಷಿಗಳಲ್ಲಿ ಹೋಗಿ ಈ ಬಗೆಯ ಕಣ್ಣುರೋಗಕ್ಕೆ ಔಷಧಿ ತಿಳಿದುಕೊಂಡು ಬಾ, ಎಂದು ಹೇಳಿದೆನಲ್ಲ. ಏನು ಮಾಡಿದೆ?"

"ಅವರನ್ನು ಕೇಳಿದೆ. ಇದರ ಹೆಸರು ಕ್ಷೀಣದೃಷ್ಟಿ" ಎಂದರು.

ದೃಷ್ಟಿ ಯಾವುದು, ಸೃಷ್ಟಿ ಯಾವುದು? ನನಗೆ ದೃಷ್ಟಿ ತಗಲುವುದಕ್ಕೆ ನಾನೇನು ಕರೆಯುವ ಹಸುವೇ? ಅಥವಾ ಹೊಸ ಸೊಸೆಯೆ!"

"ಅದರ ಹೆಸರು ಕ್ಷೀಣದೃಷ್ಟಿಯಂತೆ. ಅದಕ್ಕೆ ನನ್ನ ಮೇಲೆ ಯಾಕೆ ರೇಗುತ್ತೀರಿ?"

"ಸರಿ ಸರಿ, ಆಯಿತು. ಅದಕ್ಕೆ ಔಷಧಿ ಯಾವುದಂತೆ?"

"ಈಗ ಯಾವುದೂ ಔಷಧಿ ಇಲ್ಲವಂತೆ. ಇನ್ನೂ ಅನೇಕ ಸಹಸ್ರ ವರ್ಷಗಳನಂತರ........"

"ಸರಿ, ನಾನು ಅಲ್ಲಿಯವರೆಗೆ ಹೀಗೆಯೇ ಇರುತ್ತೇನೆಯೇ?"

"ನಿನ್ನ ಗಂಡನೊಂದಿಗೆ ಹೇಳು ಎಂದು ಅವರು ಹೇಳಿದರು. ನಾನೇನೋ ಇಂತವರಿಗೆ ಕಾಹಿಲೆ ಎಂದು ಹೇಳಲಿಲ್ಲ. ಆದರೂ ಅವರಾಗಿಯೇ ಹೇಳಿದರು. 'ನಿನ್ನ ಗಂಡನೊಂದಿಗೆ ಹೇಳು. ನಿತ್ಯ ಬೆಳಿಗ್ಗೆ ಎದ್ದು ಒಂದು ಸಲವಾದರೂ ಸ್ನಾನ ಮಾಡಹೇಳು. ಇನ್ನು ಮೇಲಾದರೂ ಮಾಂಸ ತಿನ್ನುವುದನ್ನು ಬಿಡ ಹೇಳು. ಸ್ವಲ್ಪ ಸ್ವಲ್ಪವಾಗಿ ಉಷ್ಣ ಕಡಿಮೆಯಾಗಿ ದಿನದಿನಕ್ಕೆ ಗುಣ ತೋರುವುದು' " ಎಂದರು.

ವಿರೂಪಾಕ್ಷನು ಕೋಪಾವೇಶದಿಂದ "ಅವರ ಕತ್ತನ್ನು ತಿರಚುತ್ತೇನೆ. ಅಧಿಕ ಪ್ರಸಂಗಿ! ಅವರೂ ಯಾಗಕ್ಕೆ ಬರುತ್ತಾರೆ. ಆಗಲೇ ಅವರ ಕೆಲಸ ಮುಗಿಸುತ್ತೇನೆ." ಎಂದು ಗರ್ಜಿಸಿದನು.

"ಯಾಕೆ ಇಷ್ಟು ಆವೇಶ? ಅವರನ್ನು ಹೋಗಿ ಕೇಳಿದುದರಿಂದ ಅವರಿಗೆ ತಿಳಿದುದನ್ನು ಹೇಳಿದರು. ಅವರನ್ನು ಯಾಕೆ ಬಯ್ಯುವುದು? ಇದು ಕಣ್ಣು ಕುರುಡಾಗುವುದಕ್ಕೇ ಮಾರ್ಗ."

"ನೀನು ಹೋಗು. ನಿನಗೆ ಏನೂ ತಿಳಿಯದು."

"ನನ್ನ ಮಗನಿಗೂ ಆಡಿನ ಮರಿಗೂ ಇರುವ ವ್ಯತ್ಯಾಸವಾದರೂ ನನಗೆ ತಿಳಿಯುವುದಿಲ್ಲ" ಎಂದುಕೊಂಡು ಆಕೆ ಅಡಿಗೆ ಮನೆಯೊಳಕ್ಕೆ ಹೋದಳು.

೩

ಯಾಗದ ದಿನ ಉದಯವಾಯಿತು. ಆಶ್ರಮದ ಸಂಭ್ರಮವಿರಲಿ. ಅದರಂತೆಯೇ ವಿರೂಪಾಕ್ಷನ ಮನೆಯಲ್ಲಿಯೂ ಸ್ವಲ್ಪ ಸಂಭ್ರಮವುಂಟಾಗಿತ್ತು. ವಿರೂಪಾಕ್ಷನು ಅಗ್ನಿಗರ್ಭರ ಆಶ್ರಮವನ್ನು ಕುರಿತು ಹೊರಟುದನ್ನು ಕಂಡು

ಆತನ ಮಗನು "ನಾನೂ ಜತೆಯಲ್ಲಿ ಬರುತ್ತೇನೆ" ಎಂದ. "ನೀನು ಆಕಾಶದಲ್ಲಿ ಹಾರಿ ಹೋಗುವುದನ್ನು ನಾನು ನೋಡಬೇಕು" ಎಂದ ಮಗ.

ವಿರೂಪಾಕ್ಷನು "ನಾನು ಹಾರಿಹೋಗುತ್ತೇನೆಂದು ಹೇಳಿದವರು ಯಾರು?" ಎಂದು ಕೇಳಿದ.

ಅವನ ಮಗನು ಹೆಮ್ಮೆಯಿಂದ "ಯಜ್ಞಗಳನ್ನೂ ದೇವತೆಗಳನ್ನೂ, ಧ್ವಂಸಮಾಡುವ ರಾಕ್ಷಸರೆಲ್ಲಾ ಆಕಾಶದಲ್ಲಿ ಹಾರಿ ಹೋಗುತ್ತಾರೆಂದು ನಮ್ಮ ದನಕಾಯುವ ಹುಡುಗ ಹೇಳಿದನಲ್ಲ? ನಾವೆಲ್ಲಾ ರಾಕ್ಷಸರೇ ತಾನೇ?" ಎಂದು ಕೇಳಿದ.

ವಿರೂಪಾಕ್ಷನಿಗೆ ಉತ್ತರ ಕೊಡುವುದು ಸುಲಭವಾಗಲಿಲ್ಲ. 'ಚಕ್ರವರ್ತಿಯಾದ ರಾವಣನಲ್ಲಿ ವಿಮಾನವಿರುವುದರಿಂದ ಅವನೊಬ್ಬನಿಗೆ ಆಕಾಶದಲ್ಲಿ ಹಾರಲು ಸಾಧ್ಯ. ಉಳಿದ ರಾಕ್ಷಸರಿಗೆ ಹೇಗೆ ಸಾಧ್ಯ? ಹೀಗಿದ್ದರೂ ಎಲ್ಲಾ ರಾಕ್ಷಸರಿಗೂ ಈ ಶಕ್ತಿಯಿದೆಯೆಂಬ ನಂಬಿಕೆಯೂ, ಭಯವೂ ಜನರಿಗೆ ಇದ್ದರೆ ಅದನ್ನು ಯಾಕೆ ಹೋಗಲಾಡಿಸಬೇಕು?' ಎಂದು ವಿರೂಪಾಕ್ಷ ಯೋಚಿಸಿದ. ಆದರೆ ಮಗನಿಗೆ ಹಾರಿ ತೋರಿಸುವುದು ಹೇಗೆ? ಎಂಬ ಸಮಸ್ಯೆ ಅವನಿಗೆ ಉಂಟಾಯಿತು. ಆ ವೇಳೆಗೆ ಸರಿಯಾಗಿ ಅವನ ಹೆಂಡತಿ ಜಾಂಬಲಾ "ಮಗುವನ್ನು ತೋಳಿನಲ್ಲಿ ಎತ್ತಿಕೊಂಡು ವೇಗವಾಗಿ ಹೋದರೆ ಆಯಿತು!" ಎಂದಳು.

ವಿರೂಪಾಕ್ಷನು ಆ ಸಲಹೆಯನ್ನು ಮನ್ನಿಸಲಿಲ್ಲ. ಹತ್ತು ಹದಿನೈದು ವರುಷಗಳ ಕೆಳಗೆ ಅವನಿಗಿದ್ದ ದೇಹಬಲ ಇಂದು ಇರಲಿಲ್ಲ. ಮಗುವನ್ನು ಎತ್ತಿಕೊಂಡು ಎರಡು ಯೋಜನ ದೂರ ನಡೆಯುವುದೆಂತು? ಆಗಲೇ ಹೊತ್ತು ಮೀರುತ್ತಾ ಬಂದಿತ್ತು. ಅವನು ಖಂಡಿತವಾಗಿ "ನನಗೆ ತೋಳು ಉಳುಕಿ ಬಾಧೆಯಾಗಿದೆ. ಮಗುವನ್ನು ಎತ್ತಿಕೊಂಡು ಹೋಗಲು ಸಾಧ್ಯವಿಲ್ಲ" ಎಂದನು.

ಮಗು ಅಳತೊಡಗಿತು. ಅವನನ್ನು ಸಮಾಧಾನ ಮಾಡುವುದರೊಳಗೆ ಇನ್ನೂ ಹೊತ್ತಾಗಿ ಹೋಯಿತು. ಕೊನೆಯಲ್ಲಿ "ಯಾಗದ ಅಗ್ನಿ ಕುಂಡಕ್ಕೆ ಎಸೆಯುವ ಮಾಂಸವೆಲ್ಲಿ?" ಎಂದು ವಿರೂಪಾಕ್ಷನು ಹೆಂಡತಿಯನ್ನು ಗದರಿಸಿದ. ಆಕೆಗೂ ಸಿಟ್ಟು ಬಂತು "ಒಳ್ಳೆಯ ಮಾಂಸವನ್ನು ತೆಗೆದುಕೊಂಡು ಹೋಗಿ, ಅದನ್ನು ತಿನ್ನುವುದನ್ನು ಅರಿಯದವರ ಮಧ್ಯದಲ್ಲಿ ವ್ಯರ್ಥವಾಗಿ ಏಕೆ ಎಸೆಯಬೇಕು? ನೆನ್ನೆ ರಾತ್ರಿ ಕಡಿದ ಆಡಿನ ರಕ್ತವನ್ನು ಆ ಮೂಲೆಯಲ್ಲಿ ಮಣ್ಣಿನ

ಬಾನಿಯಲ್ಲಿ ಇಟ್ಟಿದ್ದೇನೆ. ಯಾಗವನ್ನು ಅನಾಚಾರವಾಗಿ ಮಾಡಲು ಅದೇ ಎಲ್ಲಾ ಸಾಕು" ಎಂದಳು ಆಕೆ.

ವಿರೂಪಾಕ್ಷನಿಗೆ ಕೋಪ ಹೆಚ್ಚಾಯಿತು. "ಮಾಂಸಕ್ಕಾಗಿ ಹೊಸದಾಗಿ ಮೃಗವನ್ನು ಹಿಡಿದುಕೊಂಡು ಕುಯಿದು ಮಾಂಸವನ್ನು ತೆಗೆದುಕೊಂಡು ಹೋಗುವುದರೊಳಗೆ ಸಾವಕಾಶವಾಗಿ ಬಿಡುವುದು. ಅಲ್ಲಿಗೆ ಹೋಗುವುದರೊಳಗಾಗಿ ಯಾಗ ಮುಗಿದು ಹೋದರೆ ರಾವಣೇಶ್ವರನ ಕೋಪಕ್ಕೆ ಪಾತ್ರವಾಗಬೇಕಾಗಬಹುದು." ಈ ಭಯದಿಂದ "ಪದ್ಧತಿಗೆ ವಿರೋಧವಾದರೂ ರಕ್ತವೇ ಸಾಕು" ಎಂದುಕೊಂಡು ಅವನು ಆ ರಕ್ತದ ಬಾನಿಗೆ ಒಂದು ಅಡಿಕೆಪಟ್ಟಿಯನ್ನು ಮುಚ್ಚಿಕೊಂಡು ವೇಗವಾಗಿ ಯಾಗಶಾಲೆಯ ಕಡೆಗೆ ಧಾವಿಸಿದನು.

೪

ತಮ್ಮ ವಾಗ್ದಾನದಂತೆ, ಸೂಜಿಮೊನೆಗೆ ಸಹ ಸ್ಥಳವಿಲ್ಲದಷ್ಟು ನಿಬಿಡವಾಗಿ ಋಷಿಗಳೂ, ಋತ್ವಿಕ್‌ಗಳೂ "ವಾಧ್ಯಾರ್"ಗಳೂ ಅಗ್ನಿಗರ್ಭರ ಆಶ್ರಮದಲ್ಲಿ ನೆರೆದಿದ್ದರು. ಅವರಿಗೆಲ್ಲಾ ಇದ್ದದ್ದು ಒಂದೇ ಭಯ, ಒಂದೇ ಆಸೆ. "ಯಾಗ ನಡೆಯುವ ಸುದ್ದಿ ತಿಳಿದರೆ ರಾಕ್ಷಸರು ಬಂದು ಅದನ್ನು ಎಲ್ಲಿ ಕೆಡಿಸಿಬಿಡುತ್ತಾರೆಯೊ? ಅವರು ಬರುವುದಕ್ಕೆ ಮುಂಚೆ ಇದನ್ನು ಮುಗಿಸಿಬಿಡಬೇಕು" ಎಂಬುದೇ ಅವರ ಆಸೆಯಾಗಿದ್ದಿತು. ಒಂದು ಗಳಿಗೆಯನ್ನೂ ವ್ಯರ್ಥಮಾಡದೆ ತಮ್ಮ ಕಾರ್ಯದಲ್ಲಿಯೇ ಏಕಾಗ್ರರಾಗಿ, ತಲ್ಲೀನರಾಗಿ ಋಷಿಗಳು ಮಂತ್ರಗಳನ್ನು ಜಪಿಸುತ್ತಿದ್ದರು. ಹೋಮವೂ ಬೆಳೆಯಿತು. ತಮ್ಮಲ್ಲೆಲ್ಲಾ ಬಲಿಷ್ಠರಾಗಿದ್ದ ಇಬ್ಬರನ್ನು ಬಾಗಿಲಿನಲ್ಲಿ ಕಾವಲಿಗೆ ನಿಲ್ಲಿಸಿದರು. ಮುಕ್ಕಾಲುಪಾಲು ಕೆಲಸವಾಗಿತ್ತು. ಯಾಗ ಮುಹೂರ್ತವೂ ಸಮೀಪಿಸಿತ್ತು.

ಆ ಸಮಯದಲ್ಲಿ ಆನೆ ಓಡಿಬಂದಂತೆ ಭೂಮಿ ನಡುಗಿತು. ವಿರೂಪಾಕ್ಷ! ವಿರೂಪಾಕ್ಷನನ್ನು ದೂರದಲ್ಲಿ ನೋಡಿದ ಕೂಡಲೇ ಬಾಗಿಲಿನಲ್ಲಿ ನಿಂತಿದ್ದ ವೇದವಿತ್‌ಗಳಿಬ್ಬರಿಗೂ ನಡುಕವುಂಟಾಯಿತು. ಓಡಿಬಿಡಬೇಕೆಂಬ ಒಂದೇ ತೀರ್ಮಾನದಿಂದ ಇಬ್ಬರೂ ಒಂದೇ ಏಟಿಗೆ ಒಂದೇ ಕಾಲದಲ್ಲಿ ಮುಂದಕ್ಕೆ ನೆಗೆದರು. ತೆಂಗಿನಕಾಯಿ ಒಡೆವ ಶಬ್ದದೊಂದಿಗೆ ಅವರ ತಲೆ ಬುರುಡೆಗಳು ಒಂದನ್ನೊಂದು ಸಂಧಿಸಿದವು. ಅವರಿಬ್ಬರಿಗೂ ಆ ಗಾಬರಿಯಲ್ಲಿ ರಾಕ್ಷಸನೇ ತಮ್ಮನ್ನು ಕೊಡಲಿಯಿಂದ ಕಡಿದನೆಂಬ ಭಯವುಂಟಾಯಿತು. 'ಅಯ್ಯೋ, ರಾವಣೇಶ್ವರನೇ

ಬಂದ' ಎಂದುಕೊಂಡು ಅವರು ಕೆಳಗೆ ಬಿದ್ದು ಮೂರ್ಛೆ ಹೋದರು. ವಿರೂಪಾಕ್ಷನು ಅವರನ್ನು ಕಾಲಿನಿಂದ ಒದ್ದು ಒಕ್ಕಡೆಗೆ ಒತ್ತರಿಸಿ ಒಳಕ್ಕೆ ನುಗ್ಗಿದನು.

ಆ ವೇಳೆಗೆ ಯಾಗದ ಯಜಮಾನರು "ದುಷ್ಕೃತಾನಾಂ ವಿನಾಶಾಯ ಸ್ವಾಹಾ" (ಕೆಟ್ಟಕೆಲಸವನ್ನು ಮಾಡುವವರು ನಾಶವಾಗಲಿ) ಎಂದು ಹೇಳಿಕೊಂಡು ತುಪ್ಪವನ್ನು ಧಾರೆಯಾಗಿ ಹೋಮಕುಂಡದಲ್ಲಿ ಸಮರ್ಪಿಸುತ್ತಿದ್ದರು. ವಿರೂಪಾಕ್ಷನು ಸಿಡಿಲಿನ ಧ್ವನಿಯಿಂದ "ಹಾಗೋ, ಇಲ್ಲಿ ನೋಡಿ ನಾನು ಒಂದು ಮಂತ್ರ ಹೇಳುತ್ತೇನೆ. ಲಂಕೇಶ್ವರಾಯ ರಾವಣಾಯ ರಕ್ತಾಯ ಸ್ವಾಹಾ!" ಎಂದುಕೊಂಡು ತನ್ನ ಕೈಯಲ್ಲಿದ್ದ ಮಣ್ಣಿನ ಬಾಸಿಯನ್ನು ಹೋಮಕುಂಡದ ಮೇಲೆ ಹಾಗೆಯೇ ಹಾಕಿದನು.

ಋಷಿಗಳೆಲ್ಲಾ "ಹಾ! ಹಾ! ನಾರಾಯಣಾ" ಎಂದು ತಮ್ಮ ಇಷ್ಟದೇವತೆಯನ್ನು ಪ್ರಾರ್ಥಿಸಿ ಆ ದುಷ್ಕೃತ್ಯವನ್ನು ಕಣ್ಣಿನಿಂದ ನೋಡಲಾರದೆ ಕಣ್ಣನ್ನು ಮುಚ್ಚಿಕೊಂಡರು. ಆದರೆ ಭುಗಿಲ್ ಎಂದು ಅಗ್ನಿಯ ಜ್ವಾಲೆ ಬೀಸಿ ಅವರ ಕಣ್ರೆಪ್ಪೆಗಳು ಸುಟ್ಟಂತಾದವು. ಅವರು ಕಣ್ಣುಗಳನ್ನು ಬಿಟ್ಟರು. ಅವರು ನಿರೀಕ್ಷಿಸಿದಂತೆ ಅಗ್ನಿಕುಂಡ ತಣ್ಣಗಾಗಿ ಬೆಂಕಿಯ ಕಿಡಿಗಳು, ಬೂದಿ ಇದ್ದಲು ಆಗಿರುವುದರ ಬದಲಾಗಿ, ನೂರು ಆಹುತಿಗಳ ತುಪ್ಪ ಒಂದೇ ಆಹುತಿಯಲ್ಲಿ ಅರ್ಪಣೆಯಾದಂತೆ ಅಗ್ನಿಜ್ವಾಲೆ ಮೊದಲು ಇದ್ದುದಕ್ಕಿಂತ ಎರಡರಷ್ಟು ಉರಿಯ ನಾಲಗೆಗಳುಳ್ಳದುದಾಗಿ ಮೇಲೆದ್ದಿತು. ರಾವಣನ ಹೆಸರನ್ನು ಹೇಳಿ ರಕ್ತವನ್ನು ಹೋಮಮಾಡಿದರೂ ಋಷಿಗಳ ಯಾಗವೇ ಕೈಗೂಡಿದುದರಿಂದ ವಿರೂಪಾಕ್ಷನು, ಮತ್ತೇನನ್ನೂ ಯೋಚಿಸಲಾರದವನಾಗಿ ದಂಗು ಬಡಿದವನಂತೆ ಹೊರಟುಹೋದನು. ಋಷಿಗಳು ಯಾಗವನ್ನು ಪೂರ್ಣಗೊಳಿಸಿದರು. ಅಗ್ನಿಗರ್ಭರು 'ಕೃತಾರ್ಥನಾದೆ' ಎಂದು ಸಂತುಷ್ಟರಾದರು.

೫

ಅಗ್ನಿಗರ್ಭರ ಯಾಗಕ್ಕೆ ವಿಘ್ನವುಂಟಾಯಿತೆ? ಅಥವಾ ಇಲ್ಲವೆ? ಇದನ್ನು ಕುರಿತು ಅನೇಕ ವಾದ ವಿವಾದಗಳು ಉಂಟಾಗಿವೆ.

ಮದರಾಸು ವಸ್ತುಪ್ರದರ್ಶನ ಶಾಲೆಯಲ್ಲಿರುವ ಅಚ್ಚಾಗದ ನೈಮಿಷಾರಣ್ಯ ಕಾಂಡಂ ಎಂಬ ಗ್ರಂಥದ ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಈ ಸಂಗತಿಗೆ ಸಂಬಂಧಪಟ್ಟ ವಾದ ವಿವಾದಗಳನ್ನು ಇಷ್ಟವುಳ್ಳವರು ಓದಿ ಅರಿಯಬಹುದು.

ಕೆಲವರ ವಾದ ಇದು "ಅಗ್ನಿಗರ್ಭರ ಪೂರ್ವಜನ್ಮದ ಸುಕೃತದಿಂದ ಒಂದು ಯಾಗಮಾಡುವ ಯೋಗ ಅವರಿಗೆ ಇದ್ದಿತು. ಆದುದರಿಂದ ರಾಕ್ಷಸನು ರಾವಣನನ್ನು ಪ್ರಾರ್ಥಿಸಿದರೂ, ಆ ರಕ್ತವೂ ಕೂಡ ಹವಿಸ್ಸೇ ಆಗಿ ಅವರ ಯಾಗ ನೆರವೇರಿತು."

ಮೇಲಿನದು ಒಂದುವಾದ. ಮತ್ತೆ ಕೆಲವರ ವಾದ ಇದು; "ಅದನ್ನೆಲ್ಲಾ ಒಪ್ಪುವುದೇ ಆದರೆ ಯಾಗದ ಮಧ್ಯದಲ್ಲಿ ಯಾಗಕ್ಕೆಸಂಬಂಧಪಡದ, ಯಜ್ಞೋಪವೀತ ನಿತ್ಯ ಕರ್ಮಾನುಷ್ಠಾನಗಳಿಲ್ಲದ ಒಬ್ಬ ನಿಶಾಚರನು ತನ್ನ ಅಶುದ್ಧವಾದ ಕೈಗಳಿಂದ ಯಾವಾಗ ರಕ್ತವನ್ನು ಸಮರ್ಪಿಸಿದನೋ ಆಗಲೇ ಯಾಗವು ಭಂಗವಾಯಿತು. ಭಗವಂತನ ಅನುಗ್ರಹದಿಂದ ಆ ರಕ್ತ ತುಪ್ಪವಾಗಿ ಯಾಗ ಸಾಂಗವಾದರೂ, ಅಗ್ನಿಗರ್ಭರಿಗೆ ಯಾಗದ ಪೂರ್ಣಫಲ ದೊರಕಿತೆಂದು ಹೇಳಲು ಶಾಸ್ತ್ರಾಧಾರವಿಲ್ಲ."

ಈ ಎರಡು ಬಗೆಯ ಕಕ್ಷಿಗಳವರೂ ಅನೇಕ ಆಧಾರಗಳೊಂದಿಗೆ ತಮ್ಮ ತಮ್ಮ ವಾದಗಳನ್ನು ಸಮರ್ಥನೆಗೊಳಿಸಿದ್ದಾರೆ.

ವಿರೂಪಾಕ್ಷನ ಅಭಿಪ್ರಾಯವನ್ನು ಕೇಳುವವರೂ, ಅದನ್ನು ಗ್ರಂಥದಲ್ಲಿ ಬರೆಯುವವರೂ ಯಾರೂ ಇಲ್ಲ. ಮನೆಗೆ ಹೋಗಿ ಯಜ್ಞವನ್ನೂ ಋಷಿಗಳನ್ನೂ ಚೆನ್ನಾಗಿ ಬೈದು ತನ್ನ ಮನಸ್ಸಿನ ಖಿನ್ನತೆಯನ್ನು ಹೋಗಲಾಡಿಸಿಕೊಳ್ಳಬೇಕೆಂಬುದು ಅವನ ಅಭಿಪ್ರಾಯವಾಗಿದ್ದಿತು. ಆದರೆ ವಿರೂಪಾಕ್ಷನು ತನ್ನ ಮನೆಯೊಳಕ್ಕೆ ತಲೆಯಿಟ್ಟ ಕೂಡಲೆ ಜಾಂಬಲಾ ಹೀಗೆ ಕೂಗಿದಳು 'ಮನೆ ಒಳ್ಳೆಯ ಕಳ್ಳರ ಕೂಟವಾಗಿ ಹೋಯಿತು. ಕಣ್ಣೆದುರಿಗೇ ಸಾಮಾನುಗಳು ಕಳವಾಗುತ್ತಿವೆ. ಈ ಬೆಳಗ್ಗೆ ಆ ಮೂಲೆಯಲ್ಲಿ ಒಂದು ಬಾನಿ ಹಸುವಿನ ತುಪ್ಪ ಇಟ್ಟಿದ್ದೆ. ಈಗ ನೋಡಿದರೆ ಆ ಬಾನಿಯೇ ಇಲ್ಲ. ಯಾರನ್ನು ಕೇಳಿದರೂ 'ತಿಳಿಯದು' ಎನ್ನುತ್ತಾರೆ. ಬಾನಿ ತಾನಾಗಿಯೇ ಓಡಿಹೋಯಿತೆ? ಅದನ್ನು ಕದ್ದ ಕಳ್ಳನನ್ನು ಹಿಡಿದು ಅವನ ಮೂಳೆಗಳನ್ನು ಮುರಿದನಂತರವೇ ನಿಮಗೆ ಇವತ್ತಿನ ಊಟ. ಇದು ನಿಶ್ಚಯ' ಎಂದಳು.

ವಿರೂಪಾಕ್ಷನು ಕಣ್ಣನ್ನು ಹೊಸಕಿಕೊಳ್ಳುತ್ತಾ ಮಾತನಾಡದೆ ಒಳಕ್ಕೆ ಹೋದನು.

---

# ಉದ್ಯೋಗಂ

—()—

## " ಜ್ಞಾಪಕಾರ್ಥಂ "

" ಶ್ರೀಮುಖ ಶ್ರೀ ಕಾರ್ತಿಕ್ಕೈ ಕಾರ್ತಿಕ್ಕೈ ನಕ್ಷತ್ರವನ್ನೊಡಗೊಂಡ ಪೌರ್ಣಮಿಾ ದಿನ ನನ್ನನ್ನು ಬಿಟ್ಟು ಸ್ವರ್ಗಲೋಕಕ್ಕೆ ಹೋದ, ನನ್ನ ಪಂಚವರ್ಣದ ಗಿಳಿಯನ್ನು ಎಂದಿಗೂ ಮರೆಯಲಾರೆ —ಪಂಜಾಬಿ."

ಮೇಜಿನ ಮೇಲಿದ್ದ ಪತ್ರಿಕೆಯಲ್ಲಿ ಇದನ್ನು ಕುರಿತು ಓದಿದೆ. ಆಗ ರಾತ್ರಿ ಸುಮಾರು ಒಂಬತ್ತು ಗಂಟೆ ಇದ್ದಿರಬಹುದು. ನನ್ನ ಗೆಳೆಯ ಬಲ ರಾಮನ ಮಾವಂದಿರಾದ ದಿವಾನ್ ಬಹದ್ದೂರ್ ಹಂಸರಾಜಯ್ಯಂಗಾರ್‍ಯರ ತೋಟದಲ್ಲಿ ಉಳಿದಿದ್ದೆವು. ಅಂದೇ ಐಯಂಗಾರ್‍ಯರು ಮದರಾಸ್ ಸಹಾಯ ಪೋಲೀಸ್ ಕಮಿಷನರ ಹುದ್ದೆಯಿಂದ ನಿವೃತ್ತರಾಗಿದ್ದರು. ತಮಗೆ ವಿರಾಮ ಅಂದಿನಿಂದ ಪ್ರಾರಂಭವಾಗುವುದರ ಸಂತೋಷಕ್ಕಾಗಿ ಅವರು ಒಂದು ಸತ್ಕಾರ ಕೂಟವನ್ನು ಕೊಟ್ಟರು. ಅವರು, ಅವರ ಸಂಸಾರ, ಒಬ್ಬಳೇ ಮಗಳಾದ ಚಂದ್ರಮತಿ, ಅಳಿಯ ಬಲರಾಮು, ಅಳಿಯನ ಸ್ನೇಹಿತ ಎಂಬ ನೆಪದಿಂದ ನಾನು; ಒಂದುದಿನ ಹಸೆಮಣೆ ಮೇಲೆ ಕುಳಿತು ನನ್ನಿಂದ ಮಾಂಗಲ್ಯವನ್ನು ಕಟ್ಟಿಸಿ ಕೊಂಡ ಲಲಿತಾ – ನಾವು ಆರು ಜನರೇ ಕೂಟದಲ್ಲಿ ಸೇರಿದ್ದವರು. ಆದರೆ ಆ ಔತಣ ಸಮಾರಂಭವನ್ನು ಎಷ್ಟು ವೈಭವದಿಂದ ಏರ್ಪಡಿಸಿದ್ದರೆಂಬುದನ್ನು, ಅಯ್ಯಂಗಾರ್‍ರನ್ನು ತಿಳಿದವರಿಗೆ ನಾನು ಬೇರೆ ಹೇಳಬೇಕಾದುದಿಲ್ಲ. ನಾವು ಊಟಮಾಡಿ ಕೈತೊಳೆದುಕೊಂಡು ತೋಟದಲ್ಲಿ ಕುಳಿತಾಗ ನಮಗಿಂತ ಹೆಚ್ಚು ಉಲ್ಲಾಸವುಳ್ಳ ಆರುಜನರನ್ನು ದಕ್ಷಿಣ ಭಾರತದಲ್ಲಿ ಕಾಣುವುದು ಸಾಧ್ಯವಿರಲಿಲ್ಲ.

ತೋಟದಲ್ಲಿ ವಿದ್ಯುತ್ ದೀಪದ ಬೆಳಕು, ಅಲುಗಾಡುತ್ತಿರುವ ಎಲೆಗಳ ಸಂದಿಯಲ್ಲಿ ಒಂದೊಂದು ಸಲ ಕಾಣುತ್ತಲೂ ಒಂದೊಂದು ಸಲ ಮರೆಯಾಗು ತ್ತಲೂ ಇದ್ದಿತು. ಮೇಜಿನ ಮೇಲೆ ಆಂಗ್ಲೇಯ ಸಂಪ್ರದಾಯದಂತೆ ಚಿಕ್ಕ ಬಟ್ಟಲುಗಳಲ್ಲಿ ಕಾಫಿಯೂ, ಮಗ್ಗುಲಲ್ಲಿ ಮನೋಹರವಾದ ಹಣ್ಣುಗಳೂ,

ನಾಡು ಸಂಪ್ರದಾಯದಂತೆ ವೀಳ್ಯ ಅಡಕೆಯೂ ಊದುಬತ್ತಿಯೂ ಸಿದ್ಧ ವಾಗಿದ್ದುವು.

ಸ್ವಲ್ಪ ಹೊತ್ತು ಸಲ್ಲಾಪದಲ್ಲಿ ಕಳೆದೆವು. ಅನಂತರ ಐಯ್ಯಂಗಾರ್‍ಯರು ಇಂದು ಪತ್ರಿಕೆಯಲ್ಲಿ ವಿಶೇಷವೇನು ? ಎಂದು ಕೇಳಿದರು. ಮೇಜಿನ ಮೇಲಿನ ಒಂದು ಪತ್ರಿಕೆಯ ಶಿರೋಭಾಗದಲ್ಲಿದ್ದುದನ್ನು ನಾನು ಸ್ಪಷ್ಟವಾಗಿ ಓದಿದೆ. ಅದೇಯೇ ಈ ಕಥೆಯ ಪ್ರಾರಂಭದಲ್ಲಿ ವಿವರಿಸಿರುವ ಪಂಜಾಬಿಯ "ಜ್ಞಾಪಕಾರ್ಥ" ಪ್ರಲಾಪ.

ಕೂಡಲೇ ಐಯ್ಯಂಗಾರ್‍ಯರು "ಫೂ ಫೂ ಪಂಜಾಬಿ ಯಾವುದು ? ಪಂಚ ಗಿಳಿ ಯಾವುದು ! ಜ್ಞಾಪಕಾರ್ಥ ಯಾವುದು ! ಎಂತ ಹಂಬಗ್. ಇದರ ಅರ್ಥ ಈಗ ತಾನೇ ಪೋಲೀಸ್ ಖಾತೆಗೆ ಸೇರುತ್ತಿರುವ ಒಬ್ಬ ಕಾನಸ್ಟೆಬಲ್‌ಗೆ ಸಹ ತಿಳಿಯುತ್ತೆ. ಆದರೆ ಅದು ಹೇಗಾದರೆ ಏನು ? ಇನ್ನು ಅವನ್ನೆಲ್ಲ ಕುರಿತು ನನ ಗ್ಯಾಕೆ ಯೋಚನೆ" ಎಂದು ಹೇಳಿಕೊಂಡು ಸ್ವಲ್ಪ ಎದ್ದು ಕುಳಿತವರು ಮತ್ತೆ ಹಿಂದಕ್ಕೆ ಬಾಗಿ ಸೋಫಾದ ಮೇಲೆ ಬಿದ್ದುಕೊಂಡರು.

ತನ್ನ ಬೇಟೆ ಹತ್ತು ಮೈಲಿ ದೂರದಲ್ಲಿರುವಾಗಲೇ ಗಿಡಗನಿಗೆ ಮೂಗು ಬೆವರುವುದೆಂದು ಹೇಳುತ್ತಾರೆ. ಅದು ಸುಳ್ಳೊ ನಿಜವೋ ಇರಲಿ; ಆದರೆ ಸುತ್ತಮುತ್ತ ಒಂದು ಪತ್ತೇದಾರಿ ವಿಷಯ ಇದೆಯೆಂದರೆ ನನಗೆ ಹಾಗೆ ಒಂದು ವಿಶೇಷ ಉತ್ಸಾಹ ಆಗುವುದು. ಆದುದರಿಂದ ಐಯ್ಯಂಗಾರ್‍ಯರನ್ನು ಕುರಿತು "ಈ ವಿಷಯವನ್ನು ನೀವು ನಮಗೆ ವಿವರವಾಗಿ ಹೇಳಬೇಕು" ಎಂದು ಕೇಳಿದೆ.

ಐಯ್ಯಂಗಾರ್‍ಯರು ಸ್ವಲ್ಪ ನಕ್ಕು ಹೇಳಲು ಆರಂಭಿಸಿದರು. ಆ ಸಮಯ ಅವರ ಕುಟುಂಬ ಮೆಲ್ಲನೆ ಕೆಮ್ಮಿದರು. ಈ ಎಚ್ಚರಿಕೆಯನ್ನು ಕೇಳಿ ಐಯಂ ಗಾರ್‍ರು ಬಾಯಿ ಮುಚ್ಚಿಕೊಂಡು ಬಿಟ್ಟರು. ಇದೇನು ಕಣ್ಣಿಗೆ ಕಟ್ಟಿದ ಕತೆ ಕಿವಿಗೆ ಎಟಕಲಾರದೆಲ್ಲ ಎಂದುಕೊಂಡು ಮೇಜಿನ ಕೆಳಗೆ ಬಲರಾಮನು ನೀಡಿ ಕೊಂಡಿದ್ದ ಕಾಲನ್ನು ತಿವಿದೆ.

ಕೂಡಲೇ ಬಲರಾಮನು "ನೀವು ಸ್ವಲ್ಪವೂ ಕಳವಳಪಡಬೇಡಿ. ನಾನು ಒಂದನ್ನೂ ಹೊರಗೆ ಹೇಳುವುದಿಲ್ಲ. ಕೊನಷ್ಟೈ ಯಾವುದನ್ನಾದರೂ ಹೇಳಿ ದರೂ ಅವನ ಮಾತನ್ನು ಯಾರೂ ನಂಬುವುದಿಲ್ಲ. ಅವನೇ ಕಥೆ ಕಟ್ಟಿ ಹೇಳು

ತ್ತಾನೆಂದು ಭಾವಿಸುತ್ತಾರೆ. ಆದುದರಿಂದ ನೀವು ಈ ವಿಷಯವನ್ನು ಕುರಿತು ಧಾರಾಳವಾಗಿ ಹೇಳಬಹುದು.

ಹೀಗೆ ನಮ್ಮ ಪ್ರಾಣ ಸ್ನೇಹಿತರ ಹೊರತು ಬೇರೆ ಯಾರು ನಮಗೆ ಜಾಮೀನು ಆಗುತ್ತಾರೆ? ಬಲರಾಮನ ಮಾತಿನಿಂದಲೋ, ಅಥವಾ ಐಯಂಗಾರ್ಯರಿಗೆ ಒಳಗೂ ಹೊರಗೂ ಉಂಟಾಗಿದ್ದ ಸಂತುಷ್ಟಿಯಿಂದಲೋ ಅವರು ಪ್ರಸನ್ನ ಮನಸ್ಕರಾಗಿ ಚಂದ್ರಮತಿಯ ಕೈಯಲ್ಲಿ ತಮ್ಮ ಬೀಗದ ಕೈ ಗೊಂಚಲನ್ನು ಕೊಟ್ಟು "ನನ್ನ ಕಬ್ಬಿಣದ ಬೀರುವಿನಲ್ಲಿ ಮೇಲಿನಿಂದ ಎರಡನೆಯ ಕಾನಿಯಲ್ಲಿ ಎಡದ ಗೂಡಿನಲ್ಲಿ 'ಪ್ರಾರಂಭ' ಎಂದು ಬರೆದಿರುವ ಒಂದು ಕವರ್ ಇದೆ. ತೆಗೆದುಕೊಂಡು ಬಾ" ಎಂದರು.

ಹೀಗೆ ಸಾಂಗೋಪಾಂಗವಾಗಿ ಪ್ರಾರಂಭಿಸಿದ ಕೂಡಲೇ ನಾನೂ ಬಲರಾಮನೂ ಅವರ ಸಮೀಪಕ್ಕೆ ಹೋಗಿ ಆಸೆಯಿಂದ ಕುಳಿತೆವು. ಚಂದ್ರಮತಿ ತಂದುಕೊಟ್ಟ ಕವರಿನಿಂದ ಅಯ್ಯಂಗಾರ್ಯರು ಒಂದು ಅಚ್ಚುಮಾಡಿದ ಕಾಗದವನ್ನು ತೆಗೆದು ಇದರಲ್ಲಿ ಗುರುತುಮಾಡಿರುವ ಭಾಗವನ್ನು ಶ್ರದ್ಧೆಯಿಂದ ಓದಿ ಎಂದು ನನಗೆ ಕೊಟ್ಟರು.

"ಕಾಗದ ಬಹಳ ಕಾಲಕ್ಕೆ ಮುಂಚೆ ಅಚ್ಚುಹಾಕಿದ್ದ ಕಾಗದವಾದುದರಿಂದ ಹಳದಿಯ ಬಣ್ಣಕ್ಕೆ ತಿರುಗಿತ್ತು. ಅಕ್ಷರಗಳೆಲ್ಲ ಮಂಕುಮಂಕಾಗಿದ್ದವು. ಕೈಗೆ ತೆಗೆದುಕೊಳ್ಳುವಾಗಲೇ ಕಾಗದ ಒಡೆದು ಹೋಗುವಂತಿತ್ತು. ಸುಮಾರು ಮುವ್ವತ್ತು ವರುಷಗಳ ಕೆಳಗೆ ಅಚ್ಚುಹಾಕಿದ್ದ ದಿನಚರಿ ಪತ್ರಿಕೆ ಅದು. ಅದರ ಒಂದು ಕಡೆಯ ಕೆಲವು ಪಂಗ್ತಿಗಳನ್ನು ಸುತ್ತಿಹಾಕಿದ್ದ ಗೆರೆಗಳು ಆಗಲೇ ಮಸಕು ಮಸಕಾಗುತ್ತಿದ್ದವು. ಆ ಪಂಗ್ತಿಗಳು ಈ ಕೆಳಗಿನಂತಿದ್ದವು.

"ಹೋದ ವರುಷ ಜೂಜಿನಲ್ಲಿ ನನಗೆ ಜಯವನ್ನೂ ಧನವನ್ನೂ ಗಳಿಸಿ ಕೊಟ್ಟ ಪಂಚಕಲ್ಯಾಣಿ ಕುದುರೆ ಕೆಳಗೆ ಬಿದ್ದು ಒಂದು ಕಾಲನ್ನು ಮುರಿದುಕೊಂಡುದರಿಂದ ಅದನ್ನು ಈ ಕಾರ್ತಿಕ ಮಾಸ ಮುವ್ವತ್ತನೆ ತೇದಿ ರಾತ್ರಿ ಒಂಭತ್ತು ಗಂಟೆಗೆ ಸುಟ್ಟು ಹಾಕುವೆನು. ಆ ಕುದುರೆಯನ್ನು ಎಂದೆಂದಿಗೂ ಮರೆಯದ"

—ಪಟ್ವಾಣಿ.

ಅದನ್ನು ಓದಿ ನಾನು ಆಶ್ಚರ್ಯದಿಂದ ಮಾತನಾಡದೆ ಕುಳಿತೆ. ಐಯಂಗಾರ್ರು "ಈಗ ಏನು ಹೇಳುತ್ತೀರಿ" ಎಂದು ಮೊರೆದರು. ಇಂದಿನ ಪತ್ರಿಕೆ

ಯಲ್ಲಿರುವ ಜಾಹಿರಾತಿಗೆ ಇದು ಸ್ವಂತ ಅಣ್ಣನಾಗಿರುವುದಲ್ಲವೆ? ಪಂಜಾಬಿಗೆ ಬದಲಾಗಿ ಪಟ್ಟಾಣಿ! ಪಂಚವರ್ಣ ಗಿಳಿಗೆ ಬದಲಾಗಿ ಪಂಚವರ್ಣ ಕುದುರೆ! ಇದಕ್ಕೆಲ್ಲ ಒಂದು ಅಂತರಂಗ ಅರ್ಥ ಇದ್ದಿರಬೇಡವೆ?"

"ಅದಕ್ಕೇನು ಸಂದೇಹ? ಆದರೆ ಎರಡುಸಾವಿರರೂಪಾಯಿ ಬಹುಮಾನ ಸಿಕ್ಕುವುದೆಂದರೂ ಇದನ್ನು ಕಂಡು ಹಿಡಿಯಲು ನನ್ನಿಂದ ಸಾಧ್ಯವಿಲ್ಲ ಎಂದೆ."

"ಹಾ! ಆ ಸಮಯದಲ್ಲಿ ನಾನಿದ್ದ ಸ್ಥಿತಿಯಲ್ಲಿ ನೀವಿದ್ದಿದ್ದರೆ ಈ ಬಗೆಯ ಒಗಟಿಯನ್ನು ಬಿಡಿಸದೆ ಇಷ್ಟು ಬೇಗ ಬಿಡುತ್ತಿರಲಿಲ್ಲ; ಆಗ ನನಗೆ ವಯಸ್ಸು ಇಪ್ಪತ್ತೈದು. ಬಿ.ಎ.ಬಿ.ಎಲ್. ಪರೀಕ್ಷೆ ಮಾಡುವುದರಲ್ಲಿ ಪಿತ್ರಾರ್ಜಿತವಾದ ಆಸ್ತಿಯನ್ನೆಲ್ಲ ಮುಗಿಸಿಯಾಗಿತ್ತು. ಸ್ವತಂತ್ರವಾಗಿ ಸಂಪಾದಿಸೋಣವೆಂದರೆ ಬಿಳಿಯ ಕಾಗೆ ಕಣ್ಣಿಗೆ ಬಿದ್ದಾಗ ಮಾತ್ರ ಕಕ್ಷಿಗಾರ ಹಣದೊಂದಿಗೆ ನನ್ನಲ್ಲಿಗೆ ಬರುವಂತೆ ತೋರುತ್ತಿತ್ತು. ಆ ಸಂದರ್ಭದಲ್ಲಿ ಮನಸ್ಸಿನ ವ್ಯಾಕುಲತೆಯನ್ನು ನಾಶಮಾಡುವುದಕ್ಕಾಗಿಯೇ ಕೈಗೆ ಸಿಕ್ಕಿದ ಪುಸ್ತಕಗಳನ್ನು ಓದುತ್ತಿದ್ದೆ. ಆಗ ತಾನೇ ಶೆರ್‌ಲಾಕ್ ಹೋಮ್ಸ್‌ನ ಕತೆಗಳು ಪ್ರಕಟವಾಗಿ ಅವುಗಳಲ್ಲಿ ಕೆಲವು ಸಂಶಯ ಚಿಹ್ನೆ ಎಂಬ ಹೆಸರಿನಲ್ಲಿ ತಮಿಳಿಗೆ ಭಾಷಾಂತರವಾಗಿದ್ದವು. ಈ ಕಾಲದಲ್ಲಿ, ಹತ್ತು ಪುಟಗಳಿಗೆ ಒಂದು ಕೊಲೆಯಂತೆ ಬೆಳೆಯುವ ಪತ್ತೇದಾರಿ ಪೋಲಿ ಕತೆಗಳನ್ನು ಓದುವ ನಿಮಗೆ ಶರ್ಲಾಕ್ ಹೋಮ್ಸ್ ಕತೆಗಳು ನಮ್ಮ ಮನಸ್ಸನ್ನು ಆಕರ್ಷಿಸಿದ ಬಗೆ ಊಹಿಸುವುದಕ್ಕೂ ಸಾಧ್ಯವಿಲ್ಲ. ಆಡಂಬರ ವಿಲ್ಲದೆ, ಗುರಿ ತಪ್ಪದೆ ಅವರು ಮಾಡಿದ ಸಂಶಯ ಸಿದ್ಧಾಂತಗಳನ್ನು ನೆನೆದು ಕೊಂಡು ನಾನು ದಿನದಿನವೂ ಉಲ್ಲಾಸಹೊಂದುತ್ತಿದ್ದೆ. ಅದ್ಭುತವಾದ ಅಪ ರಾಧ ಒಂದನ್ನು ಕಂಡುಹಿಡಿದು ಅದರ ಮೂಲಕ ಒಂದು ಪೋಲೀಸ್ ಉದ್ಯೋ ಗವನ್ನು ಹೊಂದುವ ಕನಸನ್ನು ಕಂಡು ಕಣ್ಣು ಬಿಡುತ್ತಿದ್ದೆ – ನನ್ನ ಗಾಳಿ ಗೋಪುರ ಕತೆ ಇರಲಿ. ಈ "ಜ್ಞಾಪಕಾರ್ಥ" ನೋಡಿದರೆ ನಿಮಗೆ ಮೊದಲು ಏನು ತೋರುತ್ತೆ ಹೇಳಿ."

"ನನಗೇ?" ಎಂದು ಕೇಳಿದ ಬಲರಾಮು. "ಕಾಲು ಮುರಿದ ಕುದು ರೆಯನ್ನು ಗುಂಡಿಕ್ಕಿ ಕೊಲ್ಲುವುದು ಸಾಮಾನ್ಯ. ಆದರೆ ಅದಕ್ಕಾಗಿ ಪಟ್ಟಾಣಿ ಪತ್ರಿಕೆಗಳಲ್ಲಿ ಜ್ಞಾಪಕಾರ್ಥಕ್ಕೆಂದು ಪ್ರಕಟಿಸುವುದೆಂದರೇನು! ಅದರಲ್ಲಿಯೂ ಕುದುರೆಯನ್ನು ಸುಡುವುದಕ್ಕೆ ಮುಂಚಿತವಾಗಿಯೇ ಹೇಳುವುದಾದರೂ ಯಾಕೆ?

ನಾನು ಇದನ್ನು ನಂಬುವುದಿಲ್ಲ. ಅದಕ್ಕೆಲ್ಲ ಬೇರೆ ಅರ್ಥ. ಆ ಪಟ್ಟಾಣಿಯು ಜತೆಗಾರರಿಗೆ ಅದರ ಅರ್ಥ ತಿಳಿದಿರಬಹುದು. ಆದರೆ ಅವರ ನಿವಾಸಸ್ಥಾನ ತಿಳಿಯದುದರಿಂದ, ಈ ಪತ್ರಿಕೆಯ ಮೂಲಕ ಅರ್ಥವನ್ನು ಮರೆಸಿ ಅವರಿಗೆ ಮಾತ್ರ ತಿಳಿಯುವಂತೆ ಪ್ರಕಟಿಸಿದ್ದಾನೆ.

' ಶಹಬಾಸ್ ' ಎಂದು ಹಂಸರಾಜಯ್ಯಂಗಾರ್ಯರು ಮೆಚ್ಚಿದರು.

ನಾನು " ಏನು ಮಹಾ ಅದ್ಭುತ! ನಿಮ್ಮ ಅಳಿಯ ಮಾತ್ರ ಅವಸರ ಪಟ್ಟು ಮೊದಲು ಹೇಳದೆ ಇತರರಿಗೆ ಅವಕಾಶ ಕೊಟ್ಟಿದ್ದರೆ, ನಾನೂ ಅದನ್ನೇ ಹೇಳಿರುತ್ತಿದ್ದೆ. ಆದರೆ ಅಷ್ಟರಿಂದಲೇ ಪರವಶನಾಗಿ ನಿಲ್ಲದೆ, ಮುಂದೆ ಮಾಡ ಬೇಕಾದುದನ್ನೂ ತೋರಿಸುತ್ತಿದ್ದೆ. ಅದೇನೆಂದರೆ ಈ ಪತ್ರಿಕೆಯ ಮುದ್ರಣಾಲ ಯಕ್ಕೆ ಹೋಗಿ ಈ ಜ್ಞಾಪಕಾರ್ಥವನ್ನು ಪ್ರಕಟಿಸಿದವನು ಯಾರು?ಎಂಬುದನ್ನು ವಿಚಾರಿಸಬೇಕಾದುದು."

ಐಯ್ಯಂಗಾರ್ಯರು " ಅದು ಅಷ್ಟುಸುಲಭವಲ್ಲ " ಎಂದರು. " ಪತ್ರಿಕಾ ಕಛೇರಿಗಳವರು ಇಂತಹ ವಿಷಯಗಳನ್ನು ಬಹಿರಂಗ ಪಡಿಸುವುದಿಲ್ಲ. ಮೊದಲು ಅದನ್ನು ಕುರಿತು ವಿಚಾರಿಸುವಂತೆ ನನ್ನ ಸ್ನೇಹಿತರೊಬ್ಬರನ್ನು ಕಳುಹಿಸಿದೆ. ಆದರೆ ನನ್ನ ಸ್ನೇಹಿತರು ತಮ್ಮ ಮಾತನ್ನು ಮುಗಿಸುವುದರೊಳಗೆ ವ್ಯವಸ್ಥಾಪಕರು " ಇದೇನು ಆಫೀಸೊ, ಇಲ್ಲ ಕಾಡು ಹರಟೆಗಾರರ ಕೂಟವೋ, ಅಥವ ನೀವೇ ನಾದರೂ ಪೋಲೀಸ್ ಇನಿಸ್ಪೆಕ್ಟರೋ ?" ಎಂದು ಕೇಳಿದರಂತೆ.

"ನನ್ನ ಗೆಳೆಯ ಪ್ರತ್ಯುತ್ತರವನ್ನೇ ಹೇಳದೆ ಬೆಚ್ಚಿಬಿದ್ದು ಹೊರಗೆ ಬಂದು ಬಿಟ್ಟರು.

"ಸಾವಕಾಶವಾಗಿ ಯೋಚಿಸಿ ತಂತ್ರದಿಂದ ಕೆಲಸ ನಡೆಸಲು ಅವಕಾಶ ವಿರಲಿಲ್ಲ. ಆ ಜಾಹಿರಾತನ್ನು ನಾನು ಸ್ವಾಭಾವಿಕವಾಗಿ ಓದಿದ್ದು ೨೯ನೆ ತಾರೀಖಿನಂದು. ಅದರಲ್ಲಿದ್ದಂತೆ ಮರು ದಿನವೇ ಆ ಪಂಚವರ್ಣ ಕುದುರೆ ಯನ್ನು ಗುಂಡಿಕ್ಕಿ ಕೊಲ್ಲುವವರಾಗಿದ್ದರು. ಆ ಇಕ್ಕಟ್ಟಿನಲ್ಲಿ ಒಂದು ಕುಂಟ ಯುಕ್ತಿ ಹೊಳೆಯಿತು. ಮುದ್ರಣಾಲಯಕ್ಕೆ ಹೋಗಿ ಜಾಹೀರಾತು ಗುಮಾಸ್ತನ ಮುಂದೆ ನಿಂತೆ. 'ಸ್ವಾಮೀ, ನಮ್ಮ ಯಜಮಾನರು ನಿಮಗೆ ದೂರು ಕೊಟ್ಟು ಕಳುಹಿಸಿದ್ದಾರೆ. ಅವರು ಕೊಟ್ಟ ಜಾಹೀರಾತಿನಲ್ಲಿ ೩೧ನೆಯ ತಾರೀಖು ಎಂದು ಬರೆದುದನ್ನು ನೀವು ೩೦ನೆ ತಾರೀಖಾಗಿ ಬದಲಾಯಿಸಿ ಬಿಟ್ಟಿರಂತೆ'

ಎಂದು ಹೇಳಿದೆ. ಗುಮಾಸ್ತರು "ಅದು ಯಾವ ಜಾಹೀರಾತು?" ಎಂದು ಕೇಳಿದರು. ಕೈಯ್ಯಲ್ಲಿದ್ದ ಪತ್ರಿಕೆಯನ್ನು ತೋರಿಸಿದೆ. 'ಸ್ವಲ್ಪ ತಡೆಯಿರಿ' ಎಂದು ಹೇಳಿ ಎದ್ದು ಹೋದರು. ನನ್ನ ಮನಸ್ಸು ತವಕದಲ್ಲಿಯೇ ಇತ್ತು. ಅವಮಾನ ಮಾಡಿ ನನ್ನನ್ನು ಹೊರಕ್ಕೆ ತಳ್ಳುವರೇನೋ ಎಂದು ಹೆದರಿಯೇ ನಿಂತಿದ್ದೆ. ನನ್ನ ಅದೃಷ್ಟ. ಗುಮಾಸ್ತನ ಮನಸ್ಸಿನಲ್ಲಿ ಯಾವ ಸಂದೇಹವೂ ಉಂಟಾಗಲಿಲ್ಲ. ಸ್ವಲ್ಪ ಹೊತ್ತಿನೊಳಗಾಗಿ 'ಇಲ್ಲಿ ನೋಡಿ ನಿಮ್ಮ ಯಜಮಾನರು ಪ್ರಕಟನೆಗೆ ಕಳುಹಿಸಿದ ಕಾಗದ. ಅದರಲ್ಲಿಯೂ ೩ಂನೆಯ ತಾರೀಖು ಎಂದೇ ಬರೆದಿದೆ" ಎಂದರು. ನಾನು ಆ ಕಾಗದವನ್ನು ಬೇಗಬೇಗ ಓದಿ 'ನೀವು ಹೇಳುವುದೇ ಸರಿ. ನನ್ನನ್ನು ಮನ್ನಿಸಿ' ಎಂದು ಹೇಳಿ ಹೊರಕ್ಕೆ ಬಂದೆ.

"ಆ ಕಾಗದದ ತಲೆಯಲ್ಲಿ 'ಆಗ್ರಾಹೋಟೆಲ್' ಎಂದು ಅಚ್ಚು ಮಾಡಿತ್ತು. ಆ ಕಾಲದಲ್ಲಿ ಮೌಂಟ್ ರೋಡಿನಲ್ಲಿ ಆ ಹೆಸರಿನ ಒಂದು ಹೋಟೆಲ್ ಇತ್ತು. ಹೋಟೆಲಿನ ವಿಳಾಸದ ಕಾಗದದಲ್ಲಿ ಪಠಾಣಿ, ಜಾಹೀರಾತು ಬರೆದು ಕಳುಹಿಸಿದ್ದರು. ತನ್ನ ಹೆಸರು ವಿಳಾಸ ಕೊಟ್ಟು ಜಾಹೀರಾತು ಮಾಡಿದರೆ ಪ್ರಾಯಶಃ ಇತರರು ಅದರಲ್ಲಿ ಶ್ರದ್ಧೆ ವಹಿಸುವುದಿಲ್ಲವೆಂದು ಅವನು ಭಾವಿಸಿದನೇನೋ. ಅಂತೂ ಈ ದಾರಿಯಿಂದ ಅವನಿದ್ದ ವಿಳಾಸ ನನಗೆ ತಿಳಿದು ಬಿಟ್ಟಿತು.

"ಮರು ದಿನ [ ೩ಂನೇ ತಾರೀಖು ಬೆಳಿಗ್ಗೆ ] ಆಗ್ರಾಹೋಟೆಲನ್ನು ಸೇರಿದೆ. ದಿವಸಕ್ಕೆ ಐದು ರುಪಾಯಿ ಕೊಟ್ಟು ಅಲ್ಲಿ ವಾಸಿಸಲು ನನಗೆ ಶಕ್ತಿ ಇರಲಿಲ್ಲ. ಆದುದರಿಂದ ಅಲ್ಲಿ ಇಳಿದುಕೊಂಡಿರುವ ಒಬ್ಬರನ್ನು ನೋಡಲು ಬಂದವನಂತೆ ಅಂಗಳದಲ್ಲಿ ಓಡಾಡುತ್ತಿದ್ದೆ. ಒಟ್ಲರನ್ನು ಮಾತಿಗೆ ಎಳೆಯುವುದಕ್ಕಾಗಿ ಸೋಡಾಕ್ಕೆ "ಆರ್ಡರ್" ಕೊಟ್ಟೆ. ಹೀಗೆ ಅಲ್ಲಿಯೇ ಒಂದಾದ ಮೇಲೆ ಒಂದರಂತೆ ಸೋಡಾ ಲೆಮನ್‌ಗಳನ್ನು ಕುಡಿಯುತ್ತಾ ಎರಡು ಗಂಟೆ ಕಳೆದೆ. ಅಂದಿನಿಂದ ಈ ಎರಡು ಪಾನೀಯಗಳಲ್ಲಿಯೂ ನನಗೆ ಜನ್ಮ ದ್ವೇಷ. ಆದರೆ ಆ ಪಂಡನಿಗೆ ತಕ್ಕ ಫಲವೂ ದೊರೆಯಿತು. ಹೋಟೆಲಿನಲ್ಲಿ ಒಬ್ಬ ಪಠಾಣ ಇಳಿದುಕೊಂಡಿರುವನೆಂದೂ ಅವನು ಹೋಟೆಲಿಗೆ ಯಾವ ಕುದುರೆಯನ್ನೂ ಹೊಡೆದುಕೊಂಡು ಬಂದಿಲ್ಲವೆಂದೂ ಆ ರಾತ್ರಿ ಎಂಟೂವರೆ ಗಂಟೆಗೆ ಎಲ್ಲಿಗೋ ಹೋಗುವುದಕ್ಕಾಗಿ ಹೋಟೆಲಿನ ಕುದುರೆ ಗಾಡಿಗೇನೆ ಹೇಳಿಕೊಂಡಿದ್ದಾನೆಂದೂ ನನಗೆ ಗೊತ್ತಾಯಿತು.

"ಅದನ್ನು ಬೆನ್ನುಹತ್ತಿಹೋಗಲು ನೀವು ಒಂದು ಕುದುರೆ ಗಾಡಿ ಸಿದ್ಧ ಮಾಡಿಕೊಂಡಿರಾ ?"

"ಹಾಗೆಲ್ಲಿ ಮಾಡುವುದು ? ಇದೇನು ಲಂಡನ್ ನಗರವೆ ? ಇಲ್ಲಿ ಒಂದು ಕುದುರೆ ಗಾಡಿಯನ್ನು ಬೆನ್ನು ಹತ್ತಿ ಹೋದರೆ, ಮುಂದಲ ಗಾಡಿಯವನಿಗೆ ಅದು ಗೊತ್ತಾಗಿ ಬಿಡುವುದಿಲ್ಲ? ಅದೆಲ್ಲ ನಡೆಯದ ಕೆಲಸ. ಆದುದರಿಂದ ಮನಸ್ಸನ್ನು ಧೈರ್ಯ ಮಾಡಿಕೊಂಡು ಏಳು ಗಂಟೆಗೇ ಹೋಟಲಿಗೆ ಹೋಗಿ ಆ ಕುದುರೆ ಗಾಡಿಯ ಕೆಳಗಿನ ಹುಲ್ಲು ಬುಟ್ಟಿಯಲ್ಲಿ ಅವಿತುಕೊಂಡು ಮೇಲೆ ಹುಲ್ಲನ್ನು ಮುಚ್ಚಿ ಕೊಂಡೆ. ಕುದುರೆ ಬಂಡಿಗೆ ಸೇರಿರುವ ಅಂತಹ ಬುಟ್ಟಿಗಳನ್ನು ನೀವು ನೋಡಿರಬಹುದು. ಹಗಲಿನ ಬೆಳಕಾಗಿದ್ದರೆ ನಾನು ಹಾಗೆ ಧೈರ್ಯ ಮಾಡುತ್ತಿರಲಿಲ್ಲ. ಆ ರಾತ್ರಿ ಆ ಬುಟ್ಟಿಯಲ್ಲಿ ನಾನು ಪಟ್ಟ ಸಂಕಟದಿಂದ, ಅಲ್ಲಿಯವರೆಗೆ ನಾನು ಮಾಡಿದ ಎಲ್ಲ ಪಾಪಗಳಿಗೂ ಒಟ್ಟಾಗಿ ಪ್ರಾಯಶ್ಚಿತ್ತವಾಗಿ ನನಗೂ ಯಮಧರ್ಮರಾಯನಿಗೂ ಇದ್ದ ಲೆಕ್ಕಾಚಾರವೆಲ್ಲ ಪೂರ್ತಿ ತೀರ್ಮಾನವಾಯಿತು.

"ಸುಮಾರು ೯ ಗಂಟೆಗೆ ಗಾಡಿ ನಿಂತಿತು. ಪಟ್ಟಾಣಿ ಇಳಿದು ಗಾಡಿಯನ್ನು ರಸ್ತೆಯ ಪಕ್ಕದಲ್ಲಿ ನಿಲ್ಲಿಸುವಂತೆ ಹೇಳಿ ಹೋಗಿಬಿಟ್ಟನು. ನನ್ನ ಅದೃಷ್ಟ, ಇನ್ನೂ ಚೆನ್ನಾಗಿಯೇ ಉಳಿದಿತ್ತು. ಒಂದು ಮರದ ಕೆಳಗೆ ಬೆಳಕಿಲ್ಲದ ಸ್ಥಳದಲ್ಲಿ ಗಾಡಿಯನ್ನು ನಿಲ್ಲಿಸಿಬಿಟ್ಟು ಗಾಡಿಯವನೂ ಕುದುರೆಯನ್ನು ನಿಗಾ ನೋಡುವ ಹುಡುಗನೂ ಬೀಡಿ ತೆಗೆದುಕೊಳ್ಳಲು ಸ್ವಲ್ಪದೂರದಲ್ಲಿ ಒಂದು ಅಂಗಡಿಗೆ ಹೋದರು. ಆ ಸಮಯ ನೋಡಿಕೊಂಡು ಮೆತ್ತಗೆ ಬುಟ್ಟಿಯಿಂದ ಹೊರಕ್ಕೆ ಬಂದು, ನೆರಳಿನ ಮರೆಯಲ್ಲಿ ನಿಂತುಕೊಂಡೆ.

"ಸ್ವಲ್ಪ ಹೊತ್ತಿನೊಳಗಾಗಿ ಒಂದರ ಹಿಂದೆ ಒಂದರಂತೆ ಇನ್ನೂ ನಾಲ್ಕು ಗಾಡಿಗಳು ಅಲ್ಲಿಗೆ ಬಂದವು. ಒಂದೊಂದರಿಂದಲೂ ಒಬ್ಬೊಬ್ಬ ಮನುಷ್ಯ ಕೆಳಕ್ಕೆ ಇಳಿದನು. ಅವರೆಲ್ಲರೂ ಒಂದೇ ಮನೆಯ ಒಳಕ್ಕೆ ಹೋದುದರಿಂದ ಮೊದಲು ಬಂದ ಪಟ್ಟಾಣಿಯೂ ಸಹ ಅದರೊಳಕ್ಕೇ ಹೋಗಿರಬಹುದೆಂದೂ ಈ ಐದು ಜನರೂ ಈ ಜಾಗದಲ್ಲಿ ಆ ರಾತ್ರಿ ಒಂಬತ್ತು ಗಂಟೆಗೆ ಸೇರುವುದಕ್ಕೋಸ್ಕರವಾಗಿಯೇ ಆ ಜಾಹಿರಾತನ್ನು ಪ್ರಕಟಿಸಿದ್ದರೆಂದೂ ಅರಿತು ಕೊಂಡೆ.

"ಇಪ್ಪತ್ತು ವರ್ಷಗಳ ನಂತರ ಒಪ್ಪಿಕೊಳ್ಳುವುದರಲ್ಲಿ ಏನೂ ಅವಮಾನವಿಲ್ಲ –ಇಂದು ಆ ರೀತಿ ಐದುಜನ ಪಟಿಂಗರನ್ನು ನಾನು ಒಬ್ಬನೇ ಸಂಧಿಸುವುದೆಂದರೆ,

ಸ್ವಲ್ಪ ಹಿಂದೆಗೆಯುತ್ತೇನೆ. ಆದರೆ ಆಗಲೋ, "ಎಳೆಗರು ಭಯವನ್ನೇ ಕಾಣದು" ಎಂಬಂತೆ ಯಾವುದೋ ಉತ್ಸಾಹದಿಂದ ನಾನೂ ಆ ಮನೆಯನ್ನೇ ಪ್ರವೇಶಿಸಿದೆ. ಮುಂದುಗಡೆಯೇ ಮಹಡಿಯನ್ನು ಹತ್ತುವ ಮೆಟ್ಟಲುಗಳು ಕಣ್ಣಿಗೆ ಬಿದ್ದವು. ಮನೆಯಲ್ಲಿ ಕೆಳಗಿನ ಅಂತಸ್ತೆಲ್ಲಾ ಕತ್ತಲೆ ತುಂಬಿತ್ತು. ಮಹಡಿಯಲ್ಲಿ ಒಂದು ಕೊಠಡಿಯಿಂದ ಮಾತ್ರ ಸ್ವಲ್ಪ ಬೆಳಕು ಬರುತ್ತಿರುವುದು ಬಾಗಿಲಿನ ಕಂಡಿಯಲ್ಲಿ ಕಂಡಿತು. ನನ್ನ ಪಾದರಕ್ಷೆಯನ್ನು ತೆಗೆದಿಟ್ಟು ಮಹಡಿಯನ್ನು ಏರಿದೆ. ಮರದ ಮೆಟ್ಟಲು ಕಿರ್ರೆಂದು ಸದ್ದಾದಾಗಲೆಲ್ಲಾ ನನ್ನ ಹೃದಯ ಅದಕ್ಕಿಂತಲೂ ಹೆಚ್ಚು ಶಬ್ದದೊಡನೆ ಹೊಡೆದುಕೊಳ್ಳುತ್ತಿರುವುದು ನನಗೆ ಕೇಳಿಸುವಂತಿತ್ತು.

"ಕೊನೆಯಲ್ಲಿ ಮಹಡಿಯಲ್ಲಿ ಏರಿ, ಕದವಿನ ಹತ್ತಿರ ನಿಂತುಕೊಂಡು ಒಳಗೆ ನಡೆಯುತ್ತಿದ್ದ ಸಂಭಾಷಣೆಯನ್ನು ಕಿವಿಗೊಟ್ಟು ಕೇಳಿದೆ.

ಒಬ್ಬರು, "ನೀವು ಭಯಪಡುವುದು ಅನವಶ್ಯಕ" ಎಂದು ಒಡಂಬಡಿಸುವಂತೆ ಮಾತನಾಡುತ್ತಿದ್ದರು. "ನಮಗೆ ಏನು ಭಯ? ಇತರರಂತೆ ನಾವು ನೂರು ರೂಪಾಯಿ ನೋಟುಗಳನ್ನು ಅಚ್ಚುಮಾಡುತ್ತಿಲ್ಲವಲ್ಲಾ! ನಾವು ಮಾಡುತ್ತಿರುವುದೆಲ್ಲಾ ಐದು ರೂಪಾಯಿ ನೋಟುಗಳೇ ಅಷ್ಟೆ. ಇವುಗಳ "ನಂಬರು"ಗಳನ್ನು ಯಾರು ತಾನೇ ಗುರುತು ಹಾಕಿ ಇಟ್ಟುಕೊಳ್ಳುತ್ತಾರೆ? ಯಾರಿಗೂ ಸಂಶಯ ಬರುವುದಿಲ್ಲ. ನಾವು ನಾಲ್ಕು ಜನವೂ, ದೇಶದ ಮೂಲೆ ಮೂಲೆಗಳಲ್ಲಿ ಒಬ್ಬೊಬ್ಬರಂತೆ ತಿರುಗುತ್ತಾ ಈ ನೋಟುಗಳನ್ನು ಚಲಾವಣೆ ಮಾಡುತ್ತಿದ್ದೇವೆ. ಯಾವ ಕುದುರೆ ಜೂಜಿನಲ್ಲಾಗಲೀ ಇಷ್ಟು ಲಾಭ ಕೊಡುವ ಕುದುರೆ ಎಲ್ಲಿದೆ? ಈಗ ಅಚ್ಚುಗಳನ್ನು ಒಡೆದುಬಿಟ್ಟು, ನಮ್ಮ ನಮ್ಮ ಭಾಗವನ್ನು ತೆಗೆದುಕೊಂಡು ನಾವು ಬೇರೆ ಹೋಗುವ ಅವಶ್ಯಕತೆಯೇ ಇಲ್ಲವೆಲ್ಲಾ?"

ಮತ್ತೊಬ್ಬರು, "ಅವಶ್ಯಕವಿದೆ ಎಂದು ನಾನೇ ಹೇಳುತ್ತಿರುವೆನಲ್ಲಾ" ಎಂದು ಒತ್ತಿ ಹೇಳುತ್ತಿದ್ದರು. ಅದು ಪಟ್ಟಾಣಿಯ ತಮಿಳಿನಂತೆ ಇತ್ತು. "ನೀವು ನಾಲ್ಕು ಜನವೂ ಊರಿಂದೂರಿಗೆ ಸುತ್ತುತ್ತಾ ಹೋಗಿಬಿಡುತ್ತೀರಿ. ಇಲ್ಲಿದ್ದುಕೊಂಡು ನೋಟುಗಳನ್ನು ಅಚ್ಚುಮಾಡಬೇಕಾದವನು ನಾನು ತಾನೇ? ಪೋಲೀಸಿನವರು ನಿಮ್ಮನ್ನು ಹಿಡಿದರೆ ಏನು ಹೇಳುವಿರಿ? 'ಯಾರೋ ಖೋಟಾ ನೋಟನ್ನು ನಮಗೆ ದಾಟಿಸಿ ಬಿಟ್ಟರು' ಎಂದು ಹೇಳಿ ತಪ್ಪಿಸಿಕೊಂಡು

ಹೋಗಿ ಬಿಡುವಿರಿ. ಆದರೆ ಅಚ್ಚುಮಾಡುವ ಸ್ಥಳದಲ್ಲಿ ಪದಾರ್ಥಗಳೊಂದಿಗೆ ಹಿಡಿದರೆ, ಹದಿನಾಲ್ಕು ವರ್ಷ ಕಠಿಣ ಶಿಕ್ಷೆ ನನಗೆ ತಾನೇ ?"

"ಅದೆಲ್ಲಾ ನಿಶ್ಚಯವೇ. ಆದರೆ ಇದೊಂದೂ ಹೊಸ ವಿಷಯವಲ್ಲವಲ್ಲಾ? ಇದಕ್ಕೆ ಒಪ್ಪಿಕೊಂಡು ತಾನೇ ನೀವು ನಿಮಗೆ ಮಾತ್ರ ಎರಡು ಭಾಗ ಲಾಭವನ್ನು ತೆಗೆದುಕೊಳ್ಳುತ್ತಾ ಬರುತ್ತಿದ್ದೀರಿ. ಈಗ ನಮ್ಮ ಕುದುರೆಯನ್ನು ಸುಡುವುದಕ್ಕೆ ಹೊಸದಾಗಿ ಹುಟ್ಟಿಕೊಂಡ ಅವಶ್ಯಕತೆ ಏನು ?"

"ನಾನು ಹೇಳುತ್ತಲೇ ಇದ್ದೇನಲ್ಲಾ. ಎರಡು ಮೂರುಸಲ ಪೋಲೀಸಿನವರು ಈ ಕಟ್ಟಡದ ಬಾಗಿಲಿನಲ್ಲಿ ನಿಂತುಕೊಂಡು ಮೇಲೂ ಕೆಳಗೂ ಸುತ್ತಲೂ ಇದನ್ನು ಬಹಳ ಪರೀಕ್ಷಿಸಿದರು."

"ಈ ಸಣ್ಣ ವಿಷಯಕ್ಕಾಗಿಯೇ ನೀವು ಪಟ್ವಾಣಿಯಾಗಿ ಭಯ ಪಡುವುದುಂಟೇ ? ನಾನದನ್ನು ನಂಬುವುದಿಲ್ಲ. ನನಗೆ ತೋರುವುದು ಬೇರೆ ಕಾರಣ."

ಪಟ್ವಾಣಿ—(ಕೋಪದಿಂದ) "ನಿಮಗೆ ತೋರುವುದೇನು ?"

"ನಿಮ್ಮ ಆರ್ಭಟಕ್ಕೆ ನಾನು ಹೆದರುವವನಲ್ಲ. ನನಗೆ ತೋರುವುದೇನೆಂದರೆ, ನಾವು ನಾಲ್ವರನ್ನೂ ಇದರಿಂದ ಹೊರದೂಡಿ ಪೂರ್ಣಲಾಭವನ್ನೂ ನೀವೇ ಹೊಡೆಯಲು ನೋಡುತ್ತಿದ್ದೀರಿ."

ಆ ಸಮಯದಲ್ಲಿ ಐದು ಜನರೂ ದಡಬಡ ಎಂದು ಕುರ್ಚಿಯನ್ನು ಬಿಟ್ಟು ಎದ್ದು ನಿಂತ ಸದ್ದು ಕೇಳಿಸಿತು. ಅದುವರೆಗೆ ನನ್ನ ಪಕ್ಷವನ್ನು ಹಿಡಿದಿದ್ದ ಅದೃಷ್ಟ ದೇವತೆ ಆಗಲೀಗ ನನ್ನ ಕೈ ಬಿಟ್ಟಳು. ಹುಲ್ಲು ಬುಟ್ಟಿಯಲ್ಲಿ ಸವಾರಿ ಮಾಡಿಕೊಂಡು ಬಂದಿದ್ದಾಗ ನನ್ನ ಮೂಗಿನಲ್ಲಿ ಸೇರಿಕೊಂಡಿದ್ದ ಹುಲ್ಲು ಚೂರಿನ ಧೂಳಿನಿಂದ ಆ ಸಮಯದಲ್ಲಿ ನಾನು ಎಷ್ಟು ತಡೆದರೂ ನಿಲ್ಲದೆ ಸೀನು ಬರತೊಡಗಿತು. ಕೂಡಲೇ ಬಾಗಿಲನ್ನು ತೆರೆದುಕೊಂಡು ಹೊರಕ್ಕೆ ಬಂದ ಪಟ್ವಾಣಿ ನನ್ನನ್ನು ಕಂಡು, ಮೇಜಿನ ಮೇಲಿದ್ದ ಸೋಡಾ ಸೀಸೆಯನ್ನು ತೆಗೆದುಕೊಂಡು ಅದರಿಂದ ನನ್ನ ತಲೆಯ ಮೇಲೆ ಎತ್ತಿ ಬಾರಿಸಿದನು. ನಾನು ಜ್ಞಾನ ತಪ್ಪಿ ಕೆಳಗೆ ಬಿದ್ದೆ.

"ಈಗ ಕೊನಷ್ಟೈನ ನಾಲಿಗೆ ತುದಿಯಲ್ಲಿ ಧುಮುಕುತ್ತಿರುವ ಮಾತುಗಳು ಗೊತ್ತು. 'ಪೋಲೀಸಿನವನಾಗಿ ಹೋಗುವವನ ತಲೆ ಗಟ್ಟಿಯಾಗಿಯೇ

ಇರುತ್ತದೆ. ಸೋಡಾ ಸೀಸೆ ತಾನೇ? ತುಂಡುತುಂಡಾಗಿ ಒಡೆದು ಹೋಗಿರಬೇಕು' ಎನ್ನುತ್ತಾನೆ."

"ಅವರು ಹಾಗೆ ಯೋಚಿಸಿದರೂ ಅದನ್ನು ಎಂದಿಗೂ ಹೊರಗೆ ಹೇಳಿಬಿಡುವುದಿಲ್ಲವೆಲ್ಲಾ" ಎಂದು ಲಲಿತೆ ನನ್ನ ಪಕ್ಷವನ್ನು ಹಿಡಿದು ಹೇಳಿದಳು.

ಐಯ್ಯಂಗಾರ್ಯರು "ಅಷ್ಟಕ್ಕೇ ವಂದನೆ" ಎಂದರು. "ಆ ದಿನ ನನಗೆ ದೊರೆತ ಶಾಪ ಇದು [ತಲೆಯ ಹಿಂದೆ ಉದ್ದವಾಗಿದ್ದ ಒಂದು ಹಳ್ಳವನ್ನು ತೋರಿಸಿದರು] ನನಗೆ ಪ್ರಜ್ಞೆಬಂದಾಗ ಬೆಳಗಾಗಿ ಬಿಸಿಲು ಸಹ ಏರಿತ್ತು. ಆ ಕೊಠಡಿಯಲ್ಲಾಗಲೀ, ಮನೆಯಲ್ಲಾಗಲೀ ಮನುಷ್ಯರ ಸುಳಿವೇ ಕಾಣಲಿಲ್ಲ. ಹಾಗೂ, ಹೀಗೂ ನರಳುತ್ತಾ ಬಂದು ಒಂದು ಕುದುರೆ ಗಾಡಿಯನ್ನು ಗೊತ್ತುಮಾಡಿಕೊಂಡೆ. ಚಿಲ್ಲರೆ ದೇವತೆಗಳ ಹತ್ತಿರ ಹೋಗುವುದರಿಂದ ಪ್ರಯೋಜನವಿಲ್ಲವೆಂದರಿತು ನೆಟ್ಟಗೆ ಪೋಲೀಸ್ ಕಮೀಷನರಲ್ಲಿಗೆ ಹೋದೆ. ಅವರು ನಿವೃತ್ತ ವೇತನವನ್ನು ಹೊಂದಿ, ಸ್ವರ್ಗಸ್ಥರಾಗಿ ಸಹ ಅನೇಕ ವರ್ಷಗಳಾಗಿವೆ. ಆದರೂ ಅವರ ಹೆಸರನ್ನು ಹೊರಗೆಡಹಲು ನನಗೆ ಇಷ್ಟವಿಲ್ಲ. ಆಲ್ಬರ್ಟ್ ಎಂಬ ಹೆಸರನ್ನು ಇಟ್ಟುಕೊಳ್ಳೋಣ. ನಡೆದ ಸಂಗತಿಯನ್ನೆಲ್ಲಾ ಅವರೊಡನೆ ಹೇಳಿದೆ. ಗಾಯವನ್ನೂ ತೋರಿಸಿದೆ.

"ಮೊದಲೇ ನನ್ನೊಂದಿಗೆ ಯಾಕೆ ಬಂದು ಹೇಳಲಿಲ್ಲ?" ಎಂದು ಕೇಳಿದರು.

"ನನಗೆ ಮೂರ್ಛೆಯಿಂದ ಜ್ಞಾನಬಂದ ತಕ್ಷಣವೇ ಬಂದಿದ್ದೇನಲ್ಲ" ಎಂದೆ.

"ಅವಲ್ಲ. ನೆನ್ನೆಯೇ ಯಾಕೆ ಬರಲಿಲ್ಲ?"

"ನೆನ್ನೆ ನಿಮಗೆ ತೋರಿಸಲು ನನ್ನಲ್ಲಿ ಏನೂ ಇರಲಿಲ್ಲ. ಆ ಜಾಹಿರಾತು ಒಂದೇ. ಆ ಬಗೆಯ ಜಾಹಿರಾತುಗಳನ್ನು ನೀವು ನೋಡಿರಲಿಲ್ಲವೆಂದು ನಾನು ಹೇಗೆ ಭಾವಿಸಲಿ?"

ಆಲ್ಬರ್ಟ್ ತುಟಿಯನ್ನು ಕಡಿದುಕೊಂಡರು, "ಸರಿ ನೀವು ಹೋಗಿ ನಿಮ್ಮ ಆರೋಗ್ಯವನ್ನು ಸರಿಪಡಿಸಿಕೊಳ್ಳಿ. ಈ ವಿಷಯವನ್ನು ನಾನೇ ವಿಚಾರಿಸುತ್ತೇನೆ" ಎಂದರು.

"ನನ್ನ ಗಾಯ ಗುಣವಾಗಲು ಒಂದು ತಿಂಗಳು ಹಿಡಿಯಿತು. ಈ ಕಾಲದಲ್ಲಿ ನನ್ನ ಮನಸ್ಸಿನಲ್ಲಿ ಸ್ವಲ್ಪಸ್ವಲ್ಪವಾಗಿ ಯೋಚನೆ ಹೊಳೆದಿತ್ತು.

ಮೊದಲು ಆ ಪಂಚಕಲ್ಯಾಣಿ ಸಭೆಯವರ ಮನೆಗೆ ಹೋಗಿ ನೋಡಿ ಮತ್ತೆ ಯಾರೂ ಅಲ್ಲಿಗೆ ವಾಸಕ್ಕೆ ಬರಲಿಲ್ಲವೆಂಬುದನ್ನೂ ತೆರೆದಿದ್ದ ಬಾಗಿಲು ತೆರದ ಹಾಗೆಯೇ ಇದ್ದುದನ್ನೂ ಅರಿತೆ. ಅನಂತರ ಅದೇ ಪತ್ರಿಕೆಯಲ್ಲಿ ಮುಂದೆ ಕಾಣುವಂತೆ ಒಂದು ಜಾಹೀರಾತು ಕೊಟ್ಟೆ.

"ಒಂದು ಸಂತೋಷ ಸುದ್ದಿ.

ಅನಿರೀಕ್ಷಿತವಾಗಿ ನನ್ನ ಪಂಚವರ್ಣ ಕಲ್ಯಾಣಿ ಕುದುರೆಗೆ ಕಾಲು ಸರಿಯಾದುದರಿಂದ ಈ ಮುಂದಲ ೫ನೆ ತಾರೀಖಿನಿಂದ ಮುಂದಕ್ಕೆ ಮತ್ತೆ ಜೂಜಿನಲ್ಲಿ ಸೇರಿಸಿ ಓಡಿಸುವ ಇಚ್ಛೆ ಇದೆ. —ಪಟ್ಟಾಣಿ."

"ಐದನೆ ತಾರೀಖು ಎಷ್ಟು ಬೇಗ ಬರುತ್ತದೋ ಎಂದು ನಾನು ಎಷ್ಟು ಆತುರದಿಂದ ಕಾಯುತ್ತಿದ್ದೆನೆಂಬುದನ್ನು ನಿಮಗೆ ಹೇಳಬೇಕಾಗಿಲ್ಲ. ನನ್ನ ಆಸೆ ಏನಿದ್ದಿತೆಂದರೆ ಆ ಪಟ್ಟಾಣಿಯ ಗೆಳೆಯರ ಪೈಕಿ ಯಾವನಾದರೂ ಒಬ್ಬನಾದರೂ ಸಹ, ಇನ್ನು ಮೊದಲಿನಂತೆ, ಕೆಲಸ ಪ್ರಾರಂಭವಾಗುವುದೆಂಬರಿತು ಆ ಮನೆಗೆ ಬರಬಹುದೆಂದು ಸಂಧ್ಯಾಕಾಲ ಆರು ಗಂಟೆಗೆ ಮುಂಚಿತವಾಗಿಯೇ ಬೇಕಾದ ಆಯುಧಗಳೊಡನೆ ಆ ಮನೆಯಲ್ಲಿ ಸಿದ್ಧವಾಗಿದ್ದೆ. ಏಳು ಗಂಟೆಗೆಲ್ಲ ಕಿಟಕಿ ಬಾಗಿಲುಗಳನ್ನು ಮುಚ್ಚಿಬಿಟ್ಟು ಮಹಡಿಯಲ್ಲಿದ್ದ ಒಂದು ಕೊಠಡಿಯಲ್ಲಿ ಒಂದು ಸಣ್ಣ ದೀಪ ಹತ್ತಿಸಿದೆ. ಬೀದಿ ಬಾಗಿಲ ಕದವನ್ನು ಅರ್ಧ ತೆರೆದು ಅದರ ಹಿಂದೆ ಅವಿತುಕೊಂಡೆ. ದಪ್ಪ ಬಟ್ಟೆಯಿಂದ ಒಂದು ಉದ್ದವಾದ ಚೀಲವನ್ನು ಹೊಲಿದು ಅದರಲ್ಲಿ ಸಣ್ಣ ಮರಳನ್ನು ತುಂಬಿ ಬಾಯಿಕಟ್ಟಿ ಇಟ್ಟುಕೊಂಡಿದ್ದೆ. ಆಯುಧದೊಡನೆ ಅಲ್ಲಿ ಬರುವವರನ್ನು ನಿರೀಕ್ಷಿಸುತ್ತಾ ನಿಂತಿದ್ದೆ.

"ಬಹಳ ಹೊತ್ತು ಕಳೆದಂತೆ ತೋರಿತು. ಅನಂತರ ಬೀದಿ ಮೆಟ್ಟಲುಗಳನ್ನು ಒಬ್ಬ ಹತ್ತುತ್ತಿರುವ ಶಬ್ದ ಕೇಳಿಸಿತು. ನಾನು ಉಸಿರಾಡುವುದನ್ನೂ ನಿಲ್ಲಿಸಿಬಿಟ್ಟೆ. ಅವನು ಒಳಕ್ಕೆ ತಲೆ ಹಾಕಿದ್ದೇ ತಡ, ಅವನ ತಲೆಯ ಮೇಲೆ ಗೋಣೀ ಚೀಲದಿಂದ ಎತ್ತಿ ಬಿಟ್ಟೆ. ಅವನು ಕಾಲು ಮುದುರಿ ಕೆಳಗೆ ಬಿದ್ದನು. ಮುಂದಲ ಗಳಿಗೆಯಲ್ಲಿಯೇ ಅವನ ಸೊಂಟದ ಮೇಲೆ ಏರಿ ಕುಳಿತು, ಸಿದ್ಧವಾಗಿ ಇಟ್ಟುಕೊಂಡಿದ್ದ ಚಿಂದಿಯ ಚೆಂಡನ್ನು ಅವನ ಬಾಯಿಗೆ ತುರುಕಿದೆ. ಹಗ್ಗದಿಂದ ಅವನ ಕೈ ಕಾಲುಗಳನ್ನು ಕಟ್ಟಿ ಬಾಗಿಲನ್ನು ಮುಚ್ಚಿ ಬೀಗ ಹಾಕಿಕೊಂಡು ಮನೆಗೆ ಹೋಗಿಬಿಟ್ಟೆ. ಮತ್ತೊಬ್ಬ ಐವರ ಪೈಕಿ ಹೀಗೇ ಬಂದು ಸೇರಿದರೆ ಏನು ಮಾಡುವುದೆಂಬ ಭಯದಿಂದ ಹಾಗೆಮಾಡಿದೆ.

ನಾನು ಹೊಂದಿದ ಈ ಜಯದಲ್ಲಿ ಪೋಲಿಸಿನವನಿಗೆ ಅರ್ಧ ಕೊಡುವುದು ನನಗೆ ಇಷ್ಟವಿರಲಿಲ್ಲ. ಆದುದರಿಂದ ಪೋಲಿಸ್ ಸ್ಟೇಷನ್ನಿಗೆ ಹೋಗಿ ಹೇಳಲಿಲ್ಲ. ಆ ಕಾಲದಲ್ಲಿ ದಪ್ಪೆದಾರರನ್ನು ನಿದ್ದೆಯಿಂದ ಎಬ್ಬಿಸುವುದೂ ಸರಿಯಾಗಿ ತೋರ ಲಿಲ್ಲ. ಆದುದರಿಂದ ರಾತ್ರಿಯೆಲ್ಲ ಸಮಾಧಾನದಿಂದಿದ್ದು ಬೆಳಿಗ್ಗೆ ಅವರ ಬಂಗಲಿಗೆ ಹೋದೆ. ಆದರೆ 'ದೊರೆ'ಗಳನ್ನು ನೋಡಬೇಕೆಂದು ಹೇಳಿದಾಗ, ನೌಕರರಾರೂ ನನಗೆ ಸರಿಯಾದ ಪ್ರತ್ಯುತ್ತರ ಕೊಡಲಿಲ್ಲ. ಆ ಮೇಲೆ, "ನಾನು ಮುಖ್ಯವಾದ ಕೆಲಸಕ್ಕಾಗಿ ಬಂದಿದ್ದೇನೆ. ಅವರನ್ನು ನೋಡಿಯೇ ಆಗಬೇಕು" ಎಂದು ನಾನು ಹಟ ಹಿಡಿಯಲು ಅವರ ಬಟ್ಲರ್, "ಇಲ್ಲಿ ಬನ್ನಿ ಸಾರ್" ಎಂದು ಹೇಳಿ ನನ್ನನ್ನು ಒಳಕ್ಕೆ ಕರೆದು ಕೊಂಡು ಹೋದನು. ಅಲ್ಲಿ ದೊರೆಸಾನಿ ಅಮ್ಮಾ ಅಳುವಿನ ಕಣ್ಣೊಂದಿಗೆ ನನ್ನ ದೃಷ್ಟಿಗೆ ಬಿದ್ದಳು.

'ದೊರೆ ಎಲ್ಲಿ?' ಎಂದು ನಾನು ಕೇಳಿದ ಕೂಡಲೇ ಅವಳ ದುಃಖದ ಕಟ್ಟು ಒಡೆದು ಹರಿಯಿತು. 'ಅಯ್ಯೋ' ಅದೇ ಗೊತ್ತಿಲ್ಲದೆ ನಾನೂ ದುಃಖಿಸುತ್ತಿದ್ದೇ ನಲ್ಲ. ನೆನ್ನೆ ಸಂಜೆ ಎಂಟು ಗಂಟೆಗೆ ಮನೆ ಬಿಟ್ಟು ಹೋದವರು ಇನ್ನೂ ಬರಲಿಲ್ಲವಲ್ಲ ?' ಎಂದಳು.

"ಅವಸರದ ಕಾರ್ಯಕ್ಕಾಗಿ ಯಾವುದಾದರೂ ಬೇರೆ ಊರಿಗೆ ಹೋಗಿರ ಬಹುದೇನೋ ?" ಎಂದೆ.

"ಹಾಗಿರಲಾರದು. ಹತ್ತು ಗಂಟೆಗೇ ಹಿಂದಿರುಗುವುದಾಗಿ ಹೇಳಿಹೋದರು. ಅವಸರದ ಸಮಾಚಾರ ಬಂದು ಅದಕ್ಕಾಗಿ ಹೋಗಲಿಲ್ಲ. ಮೊದಲೇ ಸಿದ್ಧ ಮಾಡಿ ಇಟ್ಟುಕೊಂಡಿದ್ದ ಅಡಿಕೆ ತೊಗರು ಕಷಾಯವನ್ನು ಸೀಸೆಯಲ್ಲಿ ತುಂಬಿ ಕೊಂಡು ನಡೆದುಕೊಂಡೇ ಹೋದರು. ನಾಲ್ಕು ದಿನಗಳ ಕೆಳಗೆ ಒಂದು ತಮಿಳು ಜಾಹೀರಾತನ್ನು ನೋಡಿದಂದಿನಿಂದ ಬಗೆ ಬಗೆಯಾಗಿ ಪರೀಕ್ಷೆ ಮಾಡಿ ಆ ಕಷಾಯವನ್ನು ಮಾಡಿ ಇಟ್ಟು ಕೊಂಡರು.

"ಅಡಿಕೆ ತೊಗರು ಕಷಾಯವೇ? ಅದ್ಯಾಕೆ?" ಎಂದು ಆಶ್ಚರ್ಯದಿಂದಕೇಳಿದೆ.

"ನನಗೆ ಅದನ್ನು ಹೇಳಲಿಲ್ಲ. ಭಾರತೀಯರಂತೆ ವೇಷ ಹಾಕಿಕೊಳ್ಳು ವುದಕ್ಕಾಗಿ ಇರಬಹುದೆಂದು ನನಗೆ ತೋರುತ್ತೆ."

"ಭಾರತೀಯರಂತೆಯೇ ?" ಈ ಮಾತನ್ನು ಕೇಳಿ ನನ್ನ ಹೊಟ್ಟೆಯಲ್ಲಿ ಭಯ ಪ್ರಾರಂಭವಾಯಿತು. ಕೂಡಲೇ ಕುದುರೆ ಗಾಡಿಯನ್ನು ಏರಿ, ಸಾಧ್ಯ

ವಾದಷ್ಟು ಬೇಗ ನಾಗಾಲೋಟದಲ್ಲಿ ಓಡಿಸಿಕೊಂಡು ಹೋಗಿ ಪಂಚಕಲ್ಯಾಣಿ ಮನೆಯನ್ನು ಸೇರಿದೆ. ಹಾರಿ ಮೆಟ್ಟಲನ್ನು ಹತ್ತಿದೆ.

ಒಳಗಿನಿಂದ, 'ಓಪನ್! ಬಾಗಿಲು ತೆಗೆ' ಎನ್ನುವ ಮಾತುಗಳೂ, ಬಾಗಿಲನ್ನು ತಟ್ಟುವ ಶಬ್ದವೂ ಕೇಳಿಸಿತು! ಇಷ್ಟಾದರೂ ಕೈಕಟ್ಟನ್ನು ಬಿಚ್ಚಿ ಕೊಂಡು ಬಾಯಿಗೆ ತುರುಕಿದ್ದ ಬಟ್ಟೆಯನ್ನು ಕಿತ್ತು ಹಾಕಿದ್ದಾರಲ್ಲಾ! ಎಂದು ಕೊಂಡೆ.

ಬಾಗಿಲಿನಲ್ಲಿ ನಿಂತುಕೊಂಡೇ 'ಸಾರ್!' ಎಂದು ಕೂಗಿದೆ. ಒಳಗಿನ ಶಬ್ದ ಸ್ವಲ್ಪ ನಿಂತಿತು.

"ನಾನು ಈಗಲೇ ಬೀಗವನ್ನು ತೆಗೆಯುತ್ತೇನೆ. ಆದರೆ, ಕೂಡಲೇ ಹೊರಗೆ ಬರಬೇಡಿ."

"ಡ್ಯಾಮ್‌ಯು! ಯಾಕೆ ಬರಕೂಡದು!"

"ಕಾಲು ಗಂಟೆ ತಡೆಯಿರಿ. ಅಷ್ಟರಲ್ಲಿ ಬಾಗಿಲಿನ ಹತ್ತಿರ ಒಂದು ಹಂಡೆ ನೀರನ್ನೂ ಸಾಬೂನು ಬ್ರಷ್ಷು ಇವುಗಳನ್ನೂ ತಂದು ಇಡುತ್ತೇನೆ. ಬಾಗಿ ಲಿನಲ್ಲಿ ಒಂದು ಕುದುರೆ ಗಾಡಿಯನ್ನು ತಂದು ನಿಲ್ಲಿಸುತ್ತೇನೆ."

"ಮೊದಲು ಈ ಹಾಳು ಕಾಲಿನ ಕಟ್ಟುಗಳನ್ನು ಕತ್ತರಿಸಿ ಹಾಕು."

"ನಿಮ್ಮ ಸಮೀಪಕ್ಕೆ ಈಗ ಎಲ್ಲಾದರೂ ಬರುವುದುಂಟೇ! ಚೆನ್ನಾಗಿ ಹೇಳುತ್ತಿದ್ದೀರಿ. ಇತರ ಸಾಮಾನುಗಳನ್ನೆಲ್ಲಾ ಇಟ್ಟು ಬಿಟ್ಟು ನಾನು ಓಡಿ ಹೋಗಲು ಸಿದ್ಧನಾಗಿ ನಿಂತು ಬಾಗಿಲಿನ ಸಮೀಪದಲ್ಲಿ ಒಂದು ಚಾಕುವನ್ನು ಒಳಕ್ಕೆ ಎಸೆಯುತ್ತೇನೆ."

"ಹಾಗೆಯೇ ಆದರೂ ಮಾಡು. ಡ್ಯಾಂ ಯೂ."

ಅನಂತರ ಎಲ್ಲವೂ ಹಾಗೆಯೇ ನಡೆಯಿತೆಂದು ಇಟ್ಟುಕೊಳ್ಳಿ. ಇತರ ರ್‍ಯಾರಿಗೂ ತಿಳಿಯದಂತೆ ಆಲ್ಬರ್ಟ್ ತಮ್ಮ ಎಂದಿನ ವೇಶದಲ್ಲಿಯೇ ತಮ್ಮ ಬಂಗಲೆಯನ್ನು ಸೇರಿದರು.

"ಈ ಸಂಗತಿಯಿಂದ ನನ್ನ ಎಲ್ಲಾ ಆಶೆಗಳೂ ಮಣ್ಣುಗೂಡಿಹೋದವು. ಇನ್ನು ಮದರಾಸಿನಲ್ಲಿದ್ದು ಪ್ರಯೋಜನವಿಲ್ಲವೆಂದುಕೊಂಡು, ಬರ್ಮಾಕ್ಕೆ ಹೋಗಲು ತೀರ್ಮಾನಿಸಿದೆ. ಹಾಗೆ ತೀರ್ಮಾನಿಸಿದ ದಿನ ಟಪಾಲಿನಲ್ಲಿ ನನ್ನ ಹೆಸರಿಗೆ ಒಂದು ಕವರು ಬಂತು. ಅದರಲ್ಲಿ ಮರುದಿವಸ ಪ್ರಾತಃಕಾಲ ಒಂಬತ್ತು

ಗಂಟೆಗೆ ನಾನು ಗೌರ್ನಮೆಂಟ್ ಹೌಸಿನಲ್ಲಿ ಹಾಜರಾಗಿರಬೇಕೆಂದು ಸೂಚಿಸಲಾಗಿತ್ತು."

ಕೊನಸ್ಟೈ—(ಆಶ್ಚರ್ಯದೊಡನೆ) "ಜೈಲಿಗೆ ಎಳೆದುಕೊಂಡು ಹೋಗುವುದಕ್ಕೆ ಬದಲಾಗಿ, ಎಲ್ಲಾ ಬಿಟ್ಟು ಗೌರ್ನಮೆಂಟ್ ಹೌಸಿಗೆ ಬರಬೇಕೆಂದು ನಿಮಗೆ ಏಕೆ ಹೇಳಿಕಳುಹಿಸಿದ್ದರೋ ?"

ಐಯ್ಯಂಗಾರ್ಯರು ವಿವರಿಸಿ ಹೇಳಿದರು:-

"ಈ ಕಾಲದಂತೆ ಆಗ ಪಬ್ಲಿಕ್ ಸರ್ವಿಸ್ ಕಮಿಷನ್ ಎಂಬುದು ಇರಲಿಲ್ಲ. ಪೋಲೀಸ್ ಡೆಪ್ಯುಟಿ ಸೂಪರಿಂಟೆಂಡೆಂಟರವರ ಅಧಿಕಾರಕ್ಕೆ ಗವರ್ನರೇ ಜನರನ್ನು ಆರಿಸಿ ನೇಮಿಸುವುದು ಪದ್ಧತಿಯಾಗಿತ್ತು. ಆದರೆ ಯಾವಾಗಲೂ ಪೋಲೀಸ್ ಕಮಿಷನರ ಸಲಹೆಯನ್ನು ತೆಗೆದುಕೊಳ್ಳುತ್ತಿದ್ದರು."

"ಸರಿ, ಮರುದಿನ ಪ್ರಾತಃಕಾಲ ಗೌರ್ನಮೆಂಟ್ ಹೌಸಿನಲ್ಲಿ ಏನು ನಡೆಯಿತು ಎಂದು ನಾವೇ ಊಹಿಸಿಕೊಳ್ಳಬಲ್ಲೆವು" ಎಂದಳು ಚಂದ್ರಮತಿ. "ಕಳ್ಳರನ್ನೂ ಕೊಲೆ ಪಾತಕರನ್ನೂ ಹಿಡಿಯುವವರಿಗೆ ಸಾಧಾರಣವಾದ ಬಹುಮಾನಗಳನ್ನು ಕೊಡುತ್ತಾರೆ. ಆದರೆ, ಅವರನ್ನೆಲ್ಲಾ ಹಿಡಿಯುವ ಕಮಿಷನರನ್ನೇ ಹಿಡಿದವರಿಗೆ ಬರಿಯ ಬಹುಮಾನವನ್ನು ಮಾತ್ರ ಕೊಟ್ಟರೆ ಸಾಕೇ ? ಅದಲ್ಲದೆ ಮತ್ಯಾರಿಗೂ ತಿಳಿಯದಂತೆ ಕಮಿಷನರನ್ನು ಸೆರೆಯಿಂದ ಬಿಡುಗಡೆ ಮಾಡಿದ್ದಕ್ಕೆ ಯಾವ ಪ್ರತ್ಯುಪಕಾರವನ್ನು ತಾನೇ ಮಾಡಬಾರದು ?"

"ಅದೆಲ್ಲಾ ಸರಿಯೇ. ಕಮಿಷನರ ಮಾನವನ್ನು ಕಾಪಾಡಿ, ಇಂದಿನವರೆಗೆ ತಮ್ಮ ಬಾಯಿಗೆ ಬೀಗಹಾಕಿಕೊಂಡು ಇದ್ದವರಿಗೆ ಉದ್ಯೋಗ ಸಿಕ್ಕಿದುದು ನ್ಯಾಯವಾಗಿಯೇ ಇದೆ" ಎಂದು ನಾನು ಒಪ್ಪಿಕೊಂಡೆ.

§ § § §

ನಾನು ಐಯಂಗಾರ್ಯರನ್ನು ನೋಡಿ ಹೊಟ್ಟೇ ಕಿಚ್ಚು ಪಡಲಿಲ್ಲ. ಆದರೆ ನನಗೆ ಒಂದು ರಾಜ್ಯಕ್ಕೆ ದಿವಾನನಾಗಿ ಹೋಗಬೇಕೆಂದು ಬಹಳ ದಿವಸಗಳಿಂದ ಆಸೆ. "ಯಾರ ತಲೆಯ ಮೇಲೆ ಎತ್ತಿ ಒಂದು ಏಟನ್ನು ಹಾಕಿದರೆ ನನಗೆ ದಿವಾನ್ ಪದವಿ ದೊರೆಯುವುದೋ ?" ಎಂದು ಅಲ್ಲಿದ್ದ ಎಲ್ಲರನ್ನೂ ಕೇಳಿದೆ. ಪ್ರತ್ಯುತ್ತರ ಕೊಡಲು ಯಾರಿಗೂ ತಿಳಿಯಲಿಲ್ಲ.

———

# ಸಾವಿರದ ಎರಡನೆಯ ಕತೆ

## [ಯವನ ಯಾಮಿನಿ]



ಯವನ ಯಾಮಿನಿ ಕತೆಗಳ ಸಂಗತಿ ಎಲ್ಲರಿಗೂ ತಿಳಿದುದೇ. ಷಹರಿಯಾರ್ ಎಂಬ ಸುಲ್ತಾನನು ಯಾವುದೋ ಕಾರಣಕ್ಕಾಗಿ ಒಂದು ಪ್ರತಿಜ್ಞೆಯನ್ನು ಮಾಡಿದನು. ಆ ಪ್ರತಿಜ್ಞೆ ಏನೆಂದರೆ, ಪ್ರತಿದಿನವೂ ತಾನು ಒಬ್ಬ ಕನ್ನಿಕೆಯನ್ನು ವಿವಾಹವಾಗುವುದು, ಮರುದಿನ ಬೆಳಿಗ್ಗೆ ಅವಳ ಶಿರಚ್ಛೇದನವನ್ನು ಮಾಡಿಸುವುದು.

ಈ ವಿಪರೀತವಾದ ಶಪಥವನ್ನು ಕೇಳಿ ಮಂತ್ರಿಗಳೇ ಮೊದಲಾಗಿ ರಾಜ್ಯದಲ್ಲಿದ್ದವರೆಲ್ಲಾ ಪ್ರಲಾಪಿಸಲು ಪ್ರಾರಂಭಿಸಿದರು. ಆಗ ಮಂತ್ರಿಯ ಹಿರಿಯ ಮಗಳಾದ ಷಹರಾಜಾದ್ (ಷಹ್ರಾಜಾದ್) ಎಂಬುವಳು ಸುಲ್ತಾನನ ಶಪಥಕ್ಕೆ ತಾನೇ ಮೊದಲು ಬಲಿಯಾಗುವೆನೆಂದೂ ಸುಲ್ತಾನನು ತನ್ನನ್ನು ಮದುವೆಮಾಡಿಕೊಳ್ಳಬೇಕೆಂದೂ ಕೋರಿದಳು.

ತಮ್ಮ ಪ್ರಜೆಗಳ ಪೈಕಿ ವಿವೇಕಿಗಳಲ್ಲಿ ಉತ್ತಮರಾದವರನ್ನು ಮಂತ್ರಿಗಳನ್ನಾಗಿ ಆರಿಸಿಕೊಳ್ಳುವುದು ಆಗಿನ ರಾಜರ ಪದ್ಧತಿ. ಮಂತ್ರಿಯ ಮಗಳಿಗೆ ಮಂತ್ರಿಯ ಎರಡರಷ್ಟು ಸಾಮರ್ಥ್ಯವೂ ನಾಲ್ಕರಷ್ಟು ಧೈರ್ಯವೂ ಇರುವುದೆಂಬುದು ರಾಜ್ಯದಲ್ಲಿ ಎಲ್ಲರಿಗೂ ತಿಳಿದ ವಿಷಯವಾಗಿದ್ದಿತು.

ಇವಳು ಹಠ ಹಿಡಿದುದರಿಂದ, ಸುಲ್ತಾನನಿಗೆ ಆಕೆಯ ಬಯಕೆಯನ್ನು ತಿಳಿಸಿದರು. ಸುಲ್ತಾನನೂ ಮದುವೆಗೆ ಸಮ್ಮತಿಸಿದನು. ಆ ದಿನವೇ ಮದುವೆ ನಡೆದು ಹೋಯಿತು.

ಆ ಬೆಳಗಿನ ಜಾವ ಹೊತ್ತಿಗೆ ಮುಂಚೆ ಷಹ್ರಾಜಾದ್ ಕಣ್ಣುಬಿಟ್ಟಳು. ಆಗ ಮೊದಲೇ ಗೊತ್ತಾಗಿದ್ದಂತೆ ಆಕೆಯ ತಂಗಿ ದುನಿಯಾಸಾ "ಅಕ್ಕಾ, ಒಂದು ಕತೆ ಹೇಳು" ಎಂದು ಕೇಳಿದಳು. ಷಹ್ರಾಜಾದಳು ಸುಲ್ತಾನನ ಕಿವಿಗೆ ಬೀಳುವಂತೆ ಒಂದು ವಿನೋದದ ಕತೆಯನ್ನು ಹೇಳಲು ಪ್ರಾರಂಭಿಸಿದಳು. ಬೆಳಗಾದರೂ ಕತೆ ಮುಗಿಯಲಿಲ್ಲ. ಸುಲ್ತಾನನಿಗೆ ದರ್ಬಾರಿಗೆ ಹೊರಡುವ ಹೊತ್ತಾಯಿತು. ಅವನು ಕತೆಯ ಉಳಿದ ಭಾಗವನ್ನು ಈ ರಾತ್ರಿ ಕೇಳೋಣ. ಇವಳ

ಶಿರಚ್ಛೇದನ ನಾಳೆ ಬೆಳಿಗ್ಗೆ ಆಗಲಿ." ಎಂದು ಅಪ್ಪಣೆ ಮಾಡಿ ದರ್ಬಾರಿಗೆ ನಡೆದನು.

ಆದರೆ ಷಹ್ರಾಜಾದ್ ಆ ರಾತ್ರಿ ಹಿಂದಲ ಕತೆಯನ್ನು ಮುಗಿಸಿ ಮತ್ತೊಂದು ಹೊಸ ಕತೆಯನ್ನು ಪ್ರಾರಂಭಿಸಿದಳು. ಬೆಳಗಾದರೂ ಕತೆ ಮುಗಿಯಲಿಲ್ಲ. ಸುಲ್ತಾನನಿಗೆ ಕತೆಯನ್ನು ಪೂರ್ಣವಾಗಿ ಕೇಳಬೇಕೆಂದು ಉದ್ದೇಶವಿದ್ದುದರಿಂದ ಆ ದಿನವೂ ಅವನು ಅವಳ ತಲೆ ಕಡಿಸಲಿಲ್ಲ.

ಹೀಗೆ ಷಹ್ರಾಜಾದ್ ಸಾವಿರದ ಒಂದು ರಾತ್ರಿ ಬೇರೆ ಬೇರೆ ಕತೆಗಳನ್ನು ಪ್ರಾರಂಭಿಸಿ ಹೇಳಿ ಸುಲ್ತಾನನನ್ನು ತೃಪ್ತಿಗೊಳಿಸಿದಳು. ಸುಲ್ತಾನನು ತನ್ನ ಕ್ರೂರವಾದ ಪ್ರತಿಜ್ಞೆಯನ್ನು ರದ್ದುಮಾಡಿದನು.

ಯವನ ಯಾಮಿನೀ ಕತೆಗಳೆಂದು ಜಗತ್ತಿನಲ್ಲೆಲ್ಲಾ ಪ್ರಸಿದ್ಧವಾಗಿ ಆಬಾಲವೃದ್ಧರಿಗೂ ಆನಂದವನ್ನುಂಟುಮಾಡುತ್ತಿರುವ ಸಾವಿರದ ಒಂದು ಕತೆಗಳು ಇವೇಯೆ.

ಸಾವಿರದ ಎರಡನೆಯ ರಾತ್ರಿಯೂ ಅನಂತರದ ರಾತ್ರಿಗಳಲ್ಲಿಯೂ ಷಹ್ರಾಜಾದ್ ಯಾವುದಾದರೂ ಕತೆಗಳನ್ನು ಹೇಳಿದಳೇ? ಹೇಳಿದ್ದರೆ ಅವು ಯಾವ ಕತೆಗಳು ? ಹೇಳದಿದ್ದರೆ ಕಾರಣವೇನು ? ಇವು ಅಂದಿನಿಂದ ಪಂಡಿತರ ಬುದ್ಧಿಯನ್ನು ಕಲಕುತ್ತಿರುವ ಪ್ರಶ್ನೆಗಳು . ಈ ಪರಿಶೋಧನೆಯಲ್ಲಿ ಅವಿಚ್ಛಿನ್ನವಾದ ಶ್ರದ್ಧೆಯುಳ್ಳವರು ನನ್ನ ಸ್ನೇಹಿತರಾದ ಮೌಲಾನಾ ಷೇಕ್ ಅಬ್ದುಲ್ಲಾ ಸಾಹೇಬರು. ಒಂದು ಸಲ ನಾನು ಕಲ್ಲೀಕೋಟೆಗೆ ಹೋಗಿದ್ದಾಗ ಅಲ್ಲಿ ನನಗೆ ಒಂದು ಹಳೆಯ ಗ್ರಂಥ ಸಿಕ್ಕಿತು. ಆ ಗ್ರಂಥದ ಭಾಷೆ ಅರಬ್ಬಿ ಇರಬಹುದೆಂದು ನನಗೆ ಅನುಮಾನವಾಯಿತು. ಅದನ್ನು ನನ್ನ ಮಿತ್ರರಾದ ಮೌಲಾನಾ ಷೇಕ್ ಅಬ್ದುಲ್ಲರವರ ಕೈಗೆ ಕೊಟ್ಟೆ. ಅವರು ಇದು " ಸಾವಿರದ ಎರಡನೆಯ ರಾತ್ರಿಯ ಕತೆ" ಎಂದರು. ಅವರು ಆ ಗ್ರಂಥದಿಂದ ಅನುವಾದ ಮಾಡಿಕೊಟ್ಟುದನ್ನು ಇಲ್ಲಿ ಹೇಳುತ್ತೇನೆ.

## ಸಾವಿರದ ಎರಡನೆಯ ರಾತ್ರಿ

ಸಾವಿರದ ಎರಡನೆಯ ಬೆಳಿಗ್ಗೆ ಷಹ್ರಾಜಾದ್ ಆಲಿಬಾಬ ಮತ್ತು ನಲವತ್ತು ಕಳ್ಳರು ಎಂಬ ಕತೆಯನ್ನು ಹೇಳಿ ಮುಗಿಸಿದ ಒಡನೇ ಸುಲ್ತಾನನ ಆನಂದಕ್ಕೆ ಪಾರವಿಲ್ಲದುದಾಯಿತು. "ಷಹ್ರಾಜಾದ್ ನಿನ್ನ ಹಾಗೆ ಕತೆ ಹೇಳು

ವವರು ಈ ಲೋಕದಲ್ಲಿ ಇಲ್ಲ. ಹಿಂದೆ ಇರಲಿಲ್ಲ. ಮುಂದೆಯೂ ಜನಿಸುವುದಿಲ್ಲ. ನಿನ್ನ ತಲೆಯನ್ನು ಕತ್ತರಿಸುವುದನ್ನು ಅಲ್ಲಾ ಒಪ್ಪುವುದಿಲ್ಲ. ಆದುದರಿಂದ ನನ್ನ ಶಪಥವನ್ನೇ ಬಿಟ್ಟೆ" ಎಂದನು. ಷಹ್ರಾಜಾದ್ ವಿಧೇಯಳಾಗಿ "ಹುಜೂರ್, ದಾಸಿಯ ಈ ಅಲ್ಪ ಸೇವೆಗಾಗಿ ತಮ್ಮ ಪ್ರತಿಜ್ಞೆಯನ್ನು ಬಿಡುವುದೆ? ಆಗ ಊರಿನ ಜನರು ಏನು ಆಡಿಕೊಳ್ಳುತ್ತಾರೆ! ಒಬ್ಬ ಸ್ತ್ರೀಯ ಮೇಲೆ ತನಗೆ ಉಂಟಾದ ಮೋಹಕ್ಕಾಗಿ ಸುಲ್ತಾನನು ತನ್ನ ಭಾಷೆಯನ್ನೇ ಬದಲಾಯಿಸಿದ ನೆಂದು ಆಡಿಕೊಳ್ಳುವುದಿಲ್ಲವೆ? ಅಸತ್ಯ ಎಂಬ ಅಪವಾದ ತಮ್ಮನ್ನು ತಟ್ಟು ವುದು. ಎಲ್ಲಾದಕ್ಕಿಂತ ಹೆಚ್ಚಾದುದು ಪ್ರಾಣ. ಪ್ರಾಣಕ್ಕಿಂತ ಹೆಚ್ಚಾದುದು ರಾಜನ ವಾಕ್ಕು; ಅದಕ್ಕೂ ಮೇಲಾದುದು ಅಲ್ಲಾನ ನಾಮ ಎಂದಲ್ಲವೇ ಹೇಳಿ ರುವುದು. ಆದುದರಿಂದ ನಾನು ಕತೆ ಹೇಳುವುದು ನಿಂತರೆ ನಿಲ್ಲಲಿ. ನನ್ನ ತಲೆ ಯನ್ನು ಕಡಿಯುವುದೇ ನ್ಯಾಯ" ಎಂದಳು.

"ಒಳ್ಳೆ ಕಷ್ಟಕ್ಕೆ ಬಂತಲ್ಲಾ!" ಎಂದು ಸುಲ್ತಾನ್ ಕೈಹಿಸುಕಿಕೊಂಡನು.

ಆಗ ದುನಿಯಾಸಾ ಮೆಲುದನಿಯಲ್ಲಿ "ಅಕ್ಕಾ, ನಿನ್ನ ತಲೆಯನ್ನು ಕಡಿಯು ವುದಾಗಿ ತಾನೇ ಹುಜೂರ್ ಶಪಥ ಮಾಡಿದರು. ಅದು ಬರಿಯ ಒಂದು ಶಪಥ. ಆದರೆ ಈಗ ನಿನಗೆ ಯಾವ ಕೆಡಕನ್ನೂ ಮಾಡುವುದಿಲ್ಲ ಎಂದು ಅಲ್ಲಾನ ಮೇಲೆ ಆಣೆಯಿಟ್ಟು ವಾಗ್ದಾನಮಾಡಿದರೆ ಆಗ ಯಾವುದು ಜಯಿ ಸುವುದು? ಬರಿಯ ಶಪಥವೇ? ಅಥವಾ ಆಣೆಯೇ? ಹುಜೂರರು ತಮ್ಮ ಆಣೆಗೆ ಕಟ್ಟುಬಿದ್ದು ನಡೆದರೆಂದರೆ ಆಗ ಜನರು ಅವರನ್ನು ಹಾಸ್ಯಮಾಡುವು ದುಂಟೆ?" ಎಂದು ಕೇಳಿದಳು.

ಸುಲ್ತಾನನು "ಅಚ್ಛ ಅಚ್ಛ" ಎಂದು ಕೈಗಳನ್ನು ತಟ್ಟಿದನು. "ಷಹ್ರಾ ಜಾದ್, ಈಗಲೇ ಆ ಆಣೆಯನ್ನು ಮಾಡುತ್ತೇನೆ. ಅದರ ಮೇಲೆ ನೀನು ಇನ್ನಾವ ಕೋರಿ ಹಾಕುತ್ತೀಯೆ?" ಎಂದು ಕೇಳಿದನು.

ಷಹ್ರಾಜಾದಳು "ಯುಕ್ತಿಯಲ್ಲಿ ಹುಜೂರರನ್ನು ಗೆಲ್ಲುವುದು ಯಾರಿಂದ ತಾನೇ ಸಾಧ್ಯ?" ಎಂದಳು.

ದುನಿಯಾಸಾ "ಆದರೆ ಈಗ ಅಂತಹ ಆಣೆ ಯಾವುದೂ ಇಲ್ಲವಲ್ಲ" ಎಂದು ಜ್ಞಾಪಿಸಿದಳು.

ಸುಲ್ತಾನರು " ಅಲ್ಲಾನ ಹೆಸರಿನಲ್ಲಿ ನಾನು ಈಗಲೇ ಪ್ರಮಾಣಮಾಡುತ್ತೇನೆ. ಷಹ್ರಾಜಾದ್, ನಿನ್ನ ತಲೆಯ ಒಂದು ಚಿಕ್ಕ ಕೂದಲಿಗೂ ಕೇಡು ಬರದಂತೆ ರಕ್ಷಿಸುತ್ತೇನೆ" ಎಂದು ಹೇಳಿ ಕಾಲುಗಳನ್ನು ಎತ್ತಿ ಕೈಗಳನ್ನು ತೂಗಿ ಉಗ್ರವಾಗಿ ಪ್ರತಿಜ್ಞೆ ಮಾಡಿದರು.

ಷಹ್ರಾಜಾದ್ ತಲೆ ಬಾಗಿ ವಂದಿಸಿದಳು.

ಸುಲ್ತಾನ್ ಮುಂದುವರಿಸಿದನು: " ಈ ಮೂರು ವರ್ಷಗಳಲ್ಲಿ ನಿನ್ನ ತಂಗಿ ದುನಿಯಾಸಾ ಚೆನ್ನಾಗಿ ಬೆಳೆದು ವಿವಾಹಕ್ಕೆ ಅರ್ಹಳಾಗಿದ್ದಾಳೆ. ಆದುದರಿಂದ ಇವಳನ್ನು ನಾನು ಈವತ್ತೇ ವಿವಾಹವಾಗಬೇಕೆಂದು ತೀರ್ಮಾನಿಸಿರುತ್ತೇನೆ. "

ಸುಲ್ತಾನರ ಮಾತುಗಳನ್ನು ಕೇಳಿ ದುನಿಯಾಸಾ ತಲೆಬಾಗಿ ವಂದಿಸಿದಳು. ಎದ್ದು ಹೊರಗಡೆ ಹೋಗಲು ಸಿದ್ಧಳಾದಳು. ಸುಲ್ತಾನರು " ಎಲ್ಲಿಗೆ ಹೊರಟೆ " ಎಂದು ಕೇಳಿದರು. ದುನಿಯಾಸಾ " ಖಡ್ಗಧಾರಿಯನ್ನು ಕರೆಯಲು " ಎಂದಳು. ಸುಲ್ತಾನರು " ಅವನು ಯಾಕೆ ?" ಎಂದರು. ದುನಿಯಾಸಾ " ನನ್ನ ತಲೆಯನ್ನು ಕತ್ತರಿಸಲು " ಎಂದಳು.

ಸುಲ್ತಾನರು, "ಈಗ ಯಾಕೆ ನಿನ್ನ ತಲೆಯನ್ನು ಸೀಳಬೇಕು ?" ಎಂದು ಕೇಳಿದರು. ದುನಿಯಾಸಾ, "ಹುಜೂರ್ ಮತ್ತೇನು ? ಈಗ ಮದುವೆ ಮಾಡಿಕೊಂಡು ನಾಳೆ ಬೆಳಿಗ್ಗೆ ತಲೆ ಕತ್ತರಿಸುವ ಬದಲು ಈಗಲೇ ತಲೆಯನ್ನು ಕತ್ತರಿಸುವುದು ಒಳ್ಳೆಯದಲ್ಲವೇ ? ವಿವಾಹದ ಖರ್ಚಾದರೂ ನಿಮಗೆ ಉಳಿತಾಯವಾಗುವುದು " ಎಂದಳು.

ಸುಲ್ತಾನರು, "ಸುಮ್ಮನೆ ಇರು " ಎಂದರು. ದುನಿಯಾಸಾ, "ಸುಮ್ಮನೆ ಇದ್ದರೆ ಏನು ಫಲ ? ನಮ್ಮಕ್ಕನಂತೆ ಕತೆಗಳನ್ನು ಹೇಳುವುದಕ್ಕೆ ನನಗೆ ಸಾಧ್ಯವಿಲ್ಲ. ನಮ್ಮ ಅಕ್ಕನ ಮಾತು ಅಮೃತಧಾರೆ. ವೈ ಬೆಳದಿಂಗಳು. ಆದರೆ ಬರಿಯ ಸೌಂದರ್ಯದಿಂದ ಏನು ಪ್ರಯೋಜನ ? ನಾಳೆ ಬೆಳಿಗ್ಗೆ ನನಗೆ ಸಂಭವಿಸುವುದನ್ನು ನೆನೆಸಿಕೊಂಡರೆ ಈಗಲೇ ನನ್ನ ಕತ್ತಿನಲ್ಲಿ ಕತ್ತಿಯಾಡಿದಂತೆ ಆಗುತ್ತದೆ. ಅಪ್ಪಣೆ ಕೊಡಿ. ಈಗಲೇ ಹೋಗಿ ಖಡ್ಗಧಾರಿ........"

ಸುಲ್ತಾನರು " ಕುಳಿತುಕೋ " ಎಂದು ಗದರಿಸಿದರು. " ನಾನು ಇದೇ ತಾನೇ ಅಲ್ಲಾನ ಹೆಸರಿನಲ್ಲಿ ಪ್ರತಿಜ್ಞೆಮಾಡಲಿಲ್ಲವೆ ? ಅದನ್ನು ಕೇಳಿಯೂ........"

“ ನಿಮ್ಮ ಪ್ರತಿಜ್ಞೆಯಿಂದ ನಮ್ಮಕ್ಕನಿಗೆ ಪ್ರಯೋಜನವಾಯಿತು. ಅದು ನನ್ನನ್ನು ಹೇಗೆ ಕಾಯುತ್ತದೆ? ”

ಸುಲ್ತಾನರು “ ಅದೇ ರೀತಿ ನಿನ್ನ ಕಿರು ಬೆರಳಿಗೂ ಕೇಡು ಒದಗಗೊಡುವುದಿಲ್ಲವೆಂದು ಅಲ್ಲಾನ ಹೆಸರಿನಲ್ಲಿ ಆಣೆಯಿಡುತ್ತೇನೆ. ಇದರ ಮೇಲೆ ಮಾತನಾಡಲು ಯಾರಿಗೂ ಅವಕಾಶವಿಲ್ಲ ” ಎಂದರು.

ಅಂದು ದರ್ಬಾರು ನೆರೆದ ಕೂಡಲೇ ಸುಲ್ತಾನರು ತಮ್ಮ ಎರಡು ಆಣೆಗಳನ್ನು ಪ್ರಕಟಿಸಿದರು. ಅವುಗಳನ್ನು ಫರ್ಮಾನ್ ತಯಾರಿಸಿ ನಗರದಲ್ಲೆಲ್ಲಾ ಡಂಗೂರ ಹೊಡೆಸಿದರು.

ಆ ಸಾಯಂಕಾಲ ದುನಿಯಾಜಾಳ ವಿವಾಹ ನೆರವೇರಿತು.

ಮರುದಿನ ಬೆಳಿಗ್ಗೆ ಸುಲ್ತಾನರು ಪದ್ಧತಿಯಂತೆ ಕಣ್ಣು ಬಿಟ್ಟುಕೊಂಡು ಮಲಗಿದ್ದರು. ಷಹ್ರಾಜಾದ್ ನಿರ್ಯೋಚನೆಯಿಂದ ನಿದ್ದೆ ಮಾಡುತ್ತಿದ್ದಳು. ಸುಲ್ತಾನರು ಅವಳನ್ನು ಎಚ್ಚರಗೊಳಿಸಿ, “ಸಖೀ, ಎಲ್ಲ ನಿನ್ನೆಯ ಕತೆಗಿಂತ ಹೆಚ್ಚು ವಿನೋದವಾದ ಒಂದು ಒಳ್ಳೆಯ ಕತೆಯನ್ನು ಹೇಳು, ಕೇಳೋಣ ” ಎಂದರು.

ಅವಳು ತನ್ನ ಶಾಲುವನ್ನು ಮತ್ತಷ್ಟು ಸೌಕರ್ಯವಾಗಿ ಹೊದೆದುಕೊಂಡು ಮಲಗಿದಳು. ಅನಂತರ ನಿದ್ದೆ ತಿಳಿದ ಧ್ವನಿಯಲ್ಲಿ, “ ಕತೆಯೇ? ಮತ್ತೂ ಕತೆಯೇ? ಸಾವಿರದ ಒಂದು ರಾತ್ರಿಗಳು ಕತೆ ಹೇಳಿದುದು ಸಾಲದೇ? ನನಗೆ ಬಾಯಿ ನೋಯುತ್ತದೆ” ಎಂದು ಹೇಳಿ ಮತ್ತೆ ಕಣ್ಣು ಮುಚ್ಚಿಕೊಂಡು ಮಲಗಿಬಿಟ್ಟಳು.

ಅಬ್ಬಾ! ಸುಲ್ತಾನರ ಆಯುಸ್ಸಿನಲ್ಲಿ ಅವರೊಡನೆ ಇದುವರೆಗೆ ಯಾರೂ ಹೀಗೆ ಅಲಕ್ಷ್ಯದಿಂದ ಮಾತನಾಡಿರಲಿಲ್ಲ. ಅವರ ಸ್ವಭಾವದಲ್ಲಿ ಸಕ್ಕರೆಗಿಂತ ಮೆಣಸಿನಕಾಯಿಯೇ ಹೆಚ್ಚಾಗಿದ್ದಿತು. ಷಹ್ರಾಜಾದ್‌ಳ ಮಾತುಗಳನ್ನು ಕೇಳಿ ಅವರ ಮೈ ಉರಿಯಿತು, ಕಣ್ಣು ಕೆಂಪಾಯಿತು. “ ಏನೆಂದೆ? ನಾನು ಯಾರೆಂಬುದನ್ನು ಮರೆತುಬಿಟ್ಟೆಯ?” ಎಂದು ಸಿಡಿಲಿನಂತಹ ಧ್ವನಿಯಲ್ಲಿ ಗರ್ಜಿಸಿದರು!

ಷಹ್ರಾಜಾದ್ ಹೆದರಲಿಲ್ಲ. ಸಮಾಧಾನದ ಧ್ವನಿಯಲ್ಲಿ “ನಾನು ಏನೂ ಮರೆತಿಲ್ಲ. ನನ್ನ ಕೂದಲಿಗೆ ಸಹ ಕೇಡುಂಟಾಗುವುದಿಲ್ಲವೆಂದು ಅಲ್ಲಾನ ಮೇಲೆ ಆಣೆ ಇಟ್ಟ ಸುಲ್ತಾನರು ತಾವು ” ಎಂದಳು.

ಸುಲ್ತಾನನಿಗೆ ಒಂದು ಗಳಿಗೆ ನಾಲಗೆ ಏಳಲೇ ಇಲ್ಲ. ಅವರು ಕಷ್ಟದಿಂದ ಸಮಾಧಾನ ತಂದುಕೊಂಡು ದುನಿಯಾಸಾಳನ್ನು ನೋಡಿ, ಬೇಡಿಕೆಯ ದನಿಯಲ್ಲಿ "ಇಂದು ನೀನಾದರೂ ಒಂದು ಕತೆ ಹೇಳು. ಕೇಳೋಣ" ಎಂದು ಕೋರಿದರು.

ಆಕೆಯು "ನಾನೇ ? ನಾನೂ ಹುಜೂರರೂ ಒಂದೇ ಮಾದರಿ"ಎಂದಳು.

ಸುಲ್ತಾನರು 'ಅದ್ಯಾಕೆ ಹಾಗೆ ಹೇಳುತ್ತೀ ?' ಎಂದರು. ದುನಿಯಾಸಾ "ಹೌದು. ನನಗೂ ಕತೆ ಕೇಳುವುದರಲ್ಲಿ ಒಳ್ಳೆಯ ಸಾಮರ್ಥ್ಯವೇ ಹೊರತು, ಒಂದು ಸಣ್ಣ ಕತೆ ಹೇಳುವುದಕ್ಕೂ ನನಗೆ ಬಾರದು" ಎಂದಳು. ಸುಲ್ತಾನರು "ಏನು ! ನನಗೆ ಕತೆ ಹೇಳುವುದಕ್ಕೆ ಬರುವುದಿಲ್ಲವೆಂದು ತಿಳಿದೆಯ ? "ಎಂದರು. ದುನಿಯಾಸಾ "ಸಂದೇಹವೇನು ? ತಿಳಿದರೆ ಒಂದು ಕತೆ ಹೇಳಿ. ನೋಡೋಣ" ಎಂದಳು.

ಸುಲ್ತಾನರು 'ಹೇಳಲೇ ?' ಎಂದರು.

ದುನಿಯಾಸಾ 'ಹೇಳಿ' ಎಂದಳು.

ಸುಲ್ತಾನರು ಆಚೆ ಈಚೆ ನೋಡಿ ಕೆಮ್ಮಿ ಗಂಟಲನ್ನು ಸರಿಮಾಡಿಕೊಂಡು ಮುಂದಲ ಕತೆ ಪ್ರಾರಂಭಿಸಿದರು.

"ಒಂದೇ ಒಂದು ಊರಿನಲ್ಲಿ ಒಬ್ಬ ಹುಡುಗನಿದ್ದನು. ಆತನು ಬಹಳ ಬಡವ. ಆತನಿಗೆ ಒಂದು ಹಳೆ ದೀಪವನ್ನು ಕೊಟ್ಟರು."

ಷಹ್ರಾಜಾದ್ – ಕೊಟ್ಟವರು ಯಾರು ?

ಸುಲ್ತಾನ್ – ಅವನ ಚಿಕ್ಕಪ್ಪನೋ ದೊಡ್ಡಪ್ಪನೋ ಕೊಟ್ಟನು. ಯಾರು ಕೊಟ್ಟರೆ ಏನು ? ಆದೀಪವನ್ನು ಆ ಹುಡುಗನು ಒಂದು ಕಲ್ಲಿನ ಮೇಲೆ ತೇವನು. ಕೂಡಲೇ ಒಂದು ಭೂತ ಎದುರಿಗೆ ಬಂದಿತು.

ಷಹ್ರಾಜಾದ್– ನನ್ನದೇನೂ ಆಕ್ಷೇಪಣೆ ಇಲ್ಲ.

ಸುಲ್ತಾನ್ – ಯಾವುದಕ್ಕೆ ಆಕ್ಷೇಪಣೆ ಇಲ್ಲ ಎಂದು ಹೇಳುತ್ತಿರುವೆ ?

ಷಹ್ರಾಜಾದ್ – ನಾನು ಹುಜೂರರ ದಾಸಿ. ನನಗೆ ಸೇರಿದುದೆಲ್ಲಾ ಹುಜೂರರಿಗೆ ಸೇರಿದುದು ತಾನೇ ! ಆದುದರಿಂದ ನನ್ನ ಅಲ್ಲಾವುದ್ದೀನ್ ಮತ್ತು ಮಾಯಾದೀಪದ ಕತೆಯನ್ನು ಹುಜೂರರ ಕತೆಯನ್ನಾಗಿ ಭಾವಿಸಲು ನನಗೆ ಯಾವ ಆಕ್ಷೇಪಣೆಯೂ ಇಲ್ಲ. ಕತೆಯನ್ನು ಆಸೆಯಿಂದ ಕೇಳುತ್ತೇವೆ.

ಸುಲ್ತಾನ್—(ಕೋಪದಿಂದ) ಅವಸರ ಪಡಬೇಡ ; ನಾನು ನಿನ್ನ ಕತೆಯನ್ನು ಕದ್ದು ಹೇಳುತ್ತಿಲ್ಲ. ಈ ಕತೆ ಬೇರೆ ತೆರನಾಗಿ ನಡೆಯುವುದು; ಕೇಳಿ. ಆ ಭೂತ ಸರ್‍ರೆಂದು ಹುಡುಗನನ್ನು ಎತ್ತಿಕೊಂಡು ಅಂತರಿಕ್ಷಮಾರ್ಗದಲ್ಲಿ ಹಾರಿಹೋಯಿತು. ಅರ್ಧ ರಾತ್ರಿಗೆ ಬಾಗದಾದ್ ನಗರಕ್ಕೆ ಹುಡುಗನನ್ನು ಎತ್ತಿಕೊಂಡು ಹೋಯಿತು. ಆಗ ಬಾಗದಾದಿನ ಮಂತ್ರಿಯ ಮಗಳನ್ನು ಒಬ್ಬ ಗೂನು ಬೆನ್ನಿನವನಿಗೆ ಕೊಟ್ಟು ಮದುವೆ ನಡೆಯಲು ಸಿದ್ಧತೆಯಾಗುತ್ತಿದ್ದಿತು.

ದುನಿಯಾಸಾ— ಸರಿ, ಆ ಗೂನು ಬೆನ್ನಿನವನಿಗೆ ಬದಲಾಗಿ ಈ ಹುಡುಗನಿಗೆ ಮಂತ್ರಿಯ ಮಗಳನ್ನು ಮದುವೆ ಮಾಡಿದರು. ಅಷ್ಟೆ ತಾನೆ. ಇದೆಯೇ ಆವತ್ತು ಅಕ್ಕ ಹೇಳಿದ ಕಮಾಲ್ ಜಮಾನ್ ಪಡೌರಾ ಕತೆ.

ಸುಲ್ತಾನ್—ಅದಲ್ಲ. ಆ ಹುಡುಗ ಏನು ಮಾಡಿದ ಗೊತ್ತೆ? ನನಗೆ ಮದುವೆಯೇ ಬೇಡ ಎಂದು ಹೇಳಿ ಓಡಿಬಿಟ್ಟ. ಆದುದರಿಂದ ಇದು ಬೇರೆ ಕತೆ. ಓಡಿಹೋಗಿ ಹುಡುಗ ಒಂದು ಕಾಡಿನಲ್ಲಿ ಅವಿತುಕೊಂಡ. ಅಲ್ಲೊಂದು ಗುಹೆ ಇದ್ದಿತು. ಆ ಗುಹೆಯಲ್ಲಿ ಕಳ್ಳರೆಲ್ಲಾ ಸೇರಿಕೊಂಡು ಚಿನ್ನವನ್ನೂ ವಜ್ರವನ್ನೂ ಗುಡ್ಡೆ ಗುಡ್ಡೆ ರಾಶಿ ಹಾಕಿದ್ದರು.

ಷಹ್ರಾಜಾದ್—ಒಟ್ಟು ಎಷ್ಟು ಜನ ಕಳ್ಳರು?

ಸುಲ್ತಾನ್—ಎಷ್ಟು ಜನರೋ? ಹೂಂ! ನನಗೆ ಜ್ಞಾಪಕವಿಲ್ಲ.

ಷಹ್ರಾಜಾದ್—ಒಂದು ಪಕ್ಷ ನಲವತ್ತು ಇದ್ದಿರಬಹುದೇ?

ಸುಲ್ತಾನ್- (ಮುಖವನ್ನು ಗಂಟುಹಾಕಿಕೊಂಡು) ಹೂಂ, ಒಂದು ವೇಳೆ ನಲವತ್ತು ಇದ್ದಿರಬಹುದು ಆದರೆ ಕೊನೆಯಲ್ಲಿ ಎಲ್ಲರೂ ಸತ್ತು ಹೋದರು.

ದುನಿಯಾಸಾದ್—ಆ ಹುಡುಗನ ಹೆಸರೇನು?

ಸುಲ್ತಾನ್—ನನಗೆ ಈಗ ಜ್ಞಾಪಕವಿಲ್ಲ.

ದುನಿಯಾಸಾದ್—ನಾನು ಹೇಳಲೇ? ಮೊದಲನೆಯ ಅಕ್ಷರ 'ಆ'

ಷಹ್ರಾಜಾದ್—ಎರಡನೆಯ ಅಕ್ಷರ 'ಲಿ'

ದುನಿಯಾಸಾದ್—ಮೂರನೆಯ ಅಕ್ಷರ 'ಬಾ'

ಷಹ್ರಾಜಾದ್—ನಾಲ್ಕನೆಯ ಅಕ್ಷರ 'ಬಾ'

ದುನಿಯಾಸಾದ್—ಎಲ್ಲಾ ಕೂಡಿ ಆಲಿಬಾಬಾ ಮತ್ತು ನಲವತ್ತು

ಕಳ್ಳರು. ಅಕ್ಕ ನೆನ್ನೆ ಬೆಳಿಗ್ಗೆ ನೀನು ಹೇಳಲಿಲ್ಲವೆ? ಅದನ್ನೇ ತಮ್ಮ ಸ್ವಂತ ಕತೆಯಾಗಿ ನಮಗೆ ಬಡಿಸುತ್ತಿದ್ದಾರೆ.

ಷಹ್ರಾಜಾದ್—ಅದು ಹೋಗಲಿ, ಆ ಗುಹೆ ತೆರೆಯಲು ಹೇಳಬೇಕಾದ ಮಂತ್ರವಾವುದು ಹೇಳಿ ನೋಡೋಣ.

ಸುಲ್ತಾನ್—ಮಂತ್ರವೇ?

ಷಹ್ರಾಜಾದ್—ಹೌದು, ಮಂತ್ರವೇಯೆ. ಅದನ್ನು ಸಮಯದಲ್ಲಿ ಮರೆತುದರಿಂದಲೇ ಅಲ್ಲವೇ ಆಲಿಬಾಬನ ತಮ್ಮ ಕಾಸಿಮನು ನಾಲ್ಕು ತುಂಡುಗಳಾಗಿ ಕತ್ತರಿಸಲ್ಪಟ್ಟನು. ನಿಮಗಾದರೂ ಜ್ಞಾಪಕವಿದೆಯೋ ನೋಡೋಣ. ನೆನ್ನೆ ತಾನೆ ಹೇಳಿದೆನಲ್ಲ.

ಸುಲ್ತಾನ್—(ಕಷ್ಟಪಟ್ಟು ಆಲೋಚಿಸಿ) ಅದು ಊಟಮಾಡುವ ಒಂದು ವಸ್ತುವಿನ ಹೆಸರಲ್ಲವೇ? ಬಾದಾಮಿಕಾಯಿ, ಗೇರುಪೊಪ್ಪು, ಬೆಳ್ಳುಳ್ಳಿ ಗಡ್ಡೆ.

ದುನಿಯಾಸಾದ್—ಸೋರೆ ಬೀಜ, ಓ ಇಡಿದ ಹುಣಸೇಹಣ್ಣು!

ಇದಕ್ಕಿಂತ ಹೆಚ್ಚಾಗಿ ಸುಲ್ತಾನರು ಏನನ್ನೂ ಹೇಳಲಿಲ್ಲ. ಕೋಪದಿಂದ ಎದ್ದು ಹೊರಟು ಹೋದರು.

§ § § §

ಅರಬ್ಬೀ ಗ್ರಂಥದಲ್ಲಿ ಮುಂದೆ ಹೀಗೆ ಹೇಳಿದೆ. "ಈ ವಿವರಗಳೊಂದನ್ನೂ ಅರಿಯದ ನಾನು ಪದ್ಧತಿಯಂತೆ ಹೊತ್ತಿಗೆ ಸರಿಯಾಗಿ ದರ್ಬಾರಿಗೆ ಹೋಗಿ ಸೇರಿದೆ. ನಾನು ದರ್ಬಾರ್ ಪುರಾಣಿಕ. ಪ್ರತಿ ಬೆಳಗ್ಗೆಯೂ ದರ್ಬಾರಿಗೆ ಬಂದು, ಷಹ್ರಾಜಾದ್ ಆ ಬೆಳಗ್ಗೆ ಯಾವ ಕತೆ ಹೇಳಿದಳೆಂದು ಅವಳಿಂದ ತಿಳಿದುಕೊಂಡು ಸಾಯಂಕಾಲದೊಳಗಾಗಿ ಅವನ್ನು ಪುಸ್ತಕದಲ್ಲಿ ಬರೆಯುವುದು ನನ್ನ ಪದ್ಧತಿ. ಇದೇ ಸುಲ್ತಾನನು ನನಗೆ ವಹಿಸಿರುವ ಕೆಲಸ. ಹೀಗೆಯೇ ಸಾವಿರದ ಒಂದು ದಿನಗಳಿಂದಲೂ ನಡೆದು ಕೊಂಡು ಬಂದಿದೆ. ಆದುದರಿಂದ ಆ ಬೆಳಗ್ಗೆಯೂ ಪದ್ಧತಿಯಂತೆ ನಾನು ಸಂತೋಷವನ್ನು ನಟಿಸುತ್ತಾ, "ಈ ದಿನ ಎಂತಹ ವಿನೋದ ಕತೆಯೋ? ಇದುವರೆಗೆ ಹೇಳಿದವುಗಳಿಗಿಂತ ಹೆಚ್ಚು ಸ್ವಾರಸ್ಯವಾದ, ರಸವತ್ತಾದ ಕತೆ ಇರಬೇಕೆಂಬುದರಲ್ಲಿ ಸಂದೇಹವಿಲ್ಲ" ಎಂದು ನಿತ್ಯ ಹೇಳುತ್ತಿದ್ದಂತೆ ಹೇಳಿದೆ;

ಸುಲ್ತಾನನು ಕೋಪದಿಂದ "ಮುಟ್ಠಾಳ, ಈ ಇಬ್ಬರನ್ನು ಕುರಿತು ಅಲ್ಲಾನ ಆಣೆಯಾಗಿ ಅಭಯವನ್ನು ಕೊಟ್ಟುಬಿಟ್ಟೆ. ಆದರೆ ನಿನಗಾಗಿ ಏನೂ ಆಣೆ ಇಡಲಿಲ್ಲವಲ್ಲ. (ಸೇವಕನ ಕಡೆ ತಿರುಗಿ) ಇವನ ತಲೆಯನ್ನು ತತ್‍ಕ್ಷಣ ಕತ್ತರಿಸಿ" ಎಂದು ಆಜ್ಞೆ ಇತ್ತನು.

ಈ ಆಜ್ಞೆಯನ್ನು ಕೇಳಿ, ನಾನು ಗಡಗಡನೆ ನಡುಗಿ ಭೂಮಿಯಲ್ಲಿ ಬಿದ್ದೆ. ನನ್ನ ಅಪರಾಧವನ್ನು ಮನ್ನಿಸಬೇಕೆಂದು ಬೇಡಿದೆ. ಮಂತ್ರಿ ತನ್ನ ಮಕ್ಕಳಾದ ಇಬ್ಬರು ರಾಣಿಯರಿಂದಲೂ ಬೆಳಗ್ಗೆ ನಡೆದ ವೃತ್ತಾಂತವನ್ನು ಕೇಳಿ ಬಹು ಕಷ್ಟದಿಂದ ಸುಲ್ತಾನನನ್ನು ಸಮಾಧಾನಪಡಿಸಿದನು. ವ್ಯವಹಾರದಲ್ಲಿ ಅತಿ ನಿಪುಣರಾದ ಮಂತ್ರಿಗಳು "ಹುಜೂರ್, ಹೆಂಗಸರಂತೆ ಕತೆ ಹೇಳುವುದಕ್ಕೆ ನಮಗೆ ಬರಲಿಲ್ಲವೆಂಬುದು ಒಂದು ಅಯೋಗ್ಯತೆಯೆ? ಎಂದಿಗೂ ಅಲ್ಲ. ಇಲ್ಲದ್ದನ್ನೂ ಸುಳ್ಳನ್ನೂ ಹೇಳುವುದರಲ್ಲಿ ಅವರಿಗಿರುವ ಅಭ್ಯಾಸ ಬರಿಯ ಪುರುಷರಾದ ನಮಗೆ ಎಲ್ಲಿ ಬಂದೀತು?" ಎಂಬುದಾಗಿ ಸಮಾಧಾನ ಮಾಡಿದನು.

ಸುಲ್ತಾನನಿಗೆ ನನಗೆ ತಿಳಿದಮಟ್ಟಿಗೆ ನಾನೂ ಸ್ವಲ್ಪ ಸಮಾಧಾನ ಹೇಳಿದೆ. "ಹುಜೂರ್, ಸತ್ಯಸಂಧರಾದ ನಿಮ್ಮ ಬಾಯಿನಲ್ಲಿ ಸುಳ್ಳು ಕತೆಯೂ ಬರಲು ಸಾಧ್ಯವೆ? ಹಾಗೆ ತಮ್ಮ ಬಾಯಿಂದ ಅವು ಬರದುದು ತಮ್ಮ ಶ್ರೇಷ್ಠತೆಯನ್ನೂ, ಮೇಲ್ಮೆಯನ್ನೂ ತೋರಿಸುವುದೇ ಹೊರತು ಬೇರೆ ಇಲ್ಲ" ಎಂದೆ.

ಸುಲ್ತಾನನು ಸಮಾಧಾನದಿಂದ "ಬಹುತ್ ಅಚ್ಛ" ಎಂದು ಹೇಳಿ "ಮಂತ್ರಿ, ಈ ಪೌರಾಣಿಕನಿಗೆ ಒಂದು ಮೊಖಮಲ್‍ಅಂಗಿ ಪಾರಿತೋಷಕವಾಗಿ ಕೊಡಿಸು. ಆದರೆ ಇನ್ನು ಕತೆ ಕೇಳುವುದೂ ಇಲ್ಲ. ಹೇಳುವುದೂ ಇಲ್ಲ. ಆದುದರಿಂದ ಇನ್ನು ಇವನು ದರ್ಬಾರಿಗೆ ಬರಬೇಕಾದುದಿಲ್ಲ." ಹೀಗೆ ಹೇಳಿ ಸುಲ್ತಾನನು ಕಾಡುಮೃಗಗಳಿದ್ದ ಒಂದು ಅರಣ್ಯಕ್ಕೆ ಬೇಟೆಗಾಗಿ ಆಳುಗಳೊಡನೆ ಹೊರಟು ಹೋದನು.

ನಾನು ಪೊರೆ ಬಿಟ್ಟವನಾದೆ. ಹೊಸ ಅಂಗಿಯೊಡನೆ ಮನೆ ಸೇರಿದೆ. ಮೇಲಿನ ಕಾರಣದಿಂದ ತಾನೇ ನಾನು ದರ್ಬಾರಿಗೆ ಬರೆದು ಕೊಟ್ಟ ಕತೆಗಳು ಸಾವಿರದ ಒಂದು ರಾತ್ರಿಗಳವು ಮಾತ್ರ. ಆದರೆ ನನ್ನ ಪೌರಾಣಿಕ ಧರ್ಮವನ್ನು ನಾನು ಮರೆಯಲಿಲ್ಲ. ಸಾವಿರದ ಎರಡನೆಯ ರಾತ್ರಿಯ ಕತೆಯಾದ ಇದನ್ನು

ರಹಸ್ಯವಾಗಿ ಬರೆದಿದ್ದೇನೆ. ಕಡು ಕೋಪಿಷ್ಟನಾದ ಸುಲ್ತಾನನ ಆಗ್ರಹಕ್ಕೆ ನಾನಾಗಲೀ, ನನ್ನ ವಂಶದವರಾಗಲೀ ಬೀಳುವುದು ನನ್ನ ಇಷ್ಟವಲ್ಲ. ಆದುದರಿಂದ ಇನ್ನು ನಾಲ್ಕು ತಲೆಗಳು-ಅಂದರೆ ನನ್ನ ಮರಿಮಗನ ಕಾಲದವರೆಗೆ-ಇದನ್ನು ಯಾರೂ ಬಿಚ್ಚಕೂಡದು ಎಂದು ದಾವುದನ ಆಣೆಯನ್ನು ಹಾಕುತ್ತೇನೆ-ದರ್ಬಾರ್ ಪೌರಾಣಿಕ ಫಿರ್ದೂಸಿ."

---

# ಸಂಗೀತ

—೦—

ಈ ಸಂಗತಿಯನ್ನು ಓದುವವರು ಇದೊಂದು ಸುಳ್ಳು ಕಥೆ ಎಂದೇ ಭಾವಿಸಬಹುದು. ಆದರೆ ಅವರು ಹಾಗೆ ಭಾವಿಸುವುದು, ಸತ್ಯವೆಂಬುದೇ ಜನರಿಗೆ ಸುಳ್ಳಾಗಿ ಹೋಗಿರುವ ಈ ಕಾಲದ ವಿಶೇಷವೇ ಹೊರತು ಈ ಕತೆಯ ಕೊರತೆಯಲ್ಲ. ಅದು ಹೇಗಿದ್ದರೂ ಇರಲಿ. ನಾನಿರುವ ಈ ಅವಸ್ಥೆಯಲ್ಲಿ ಈ ಸಂಗತಿಯನ್ನು ಕೂಡಲೇ ಹೊರಗೆಡಹಿ, ವಾಚಕರ ನಂಬಿಕೆಯನ್ನೂ ಸಹಾಯವನ್ನೂ ಪ್ರಾರ್ಥಿಸಬೇಕಾಗಿದೆ.

ನನ್ನ ಅವಸ್ಥೆಗೆ ಕಾರಣರಾದ ಮಹಾನುಭಾವರು ತಮ್ಮ ಹೆಸರನ್ನು ನನಗೆ ಹೇಳಲಿಲ್ಲ. ಅವರು ಇಂಥವರೇ ಎಂದು ಹೇಳಲು ನಾನು ಅರ್ಹನಲ್ಲ. ಈ ಸಮಯದಲ್ಲಿ ಅವರು ಎಲ್ಲಿರಬಹುದೆಂದು ಅನುಮಾನಿಸುವುದಕ್ಕೂ ನನಗೆ ಶಕ್ತಿ ಇಲ್ಲ. ಅವರನ್ನು ನಾನು ಮತ್ತೆ ಕಾಣುತ್ತೇನೆಯೋ ಎಂದು ಯೋಚಿಸುವಾಗಲೆಲ್ಲ ನನಗೆ ಚಿಂತೆ ಬಂದು ಕವಿದುಕೊಳ್ಳುವುದು.

ಅವರ ದರ್ಶನ ನನಗೆ ಲಭಿಸಿದುದೇ ನಿರೀಕ್ಷಣೆಯನ್ನು ಮೀರಿದ ಒಂದು ವಿಷಯ. ಮುಂಜಾನೆ ಐದು ಘಂಟೆ ಇರಬಹುದು. ಮೈಲಾಪುರದಲ್ಲಿ ಶ್ರೀಕಪಾಲೇಶ್ವರ ದೇವಾಲಯದ ಪಶ್ಚಿಮ ಪಾರ್ಶ್ವದ ಬ್ರಾಡೀಸ್ ರಸ್ತೆಯಲ್ಲಿ ಹೋಗುತ್ತಿದ್ದೆ. ಪ್ರಕೃತಿಯೆಲ್ಲವೂ ನಿಶ್ಶಬ್ದವಾಗಿದ್ದ ಆ ಹೊತ್ತಿನಲ್ಲಿ ಕೊಳದ ಮೆಟ್ಟಲುಗಳ ಮೇಲಿನಿಂದ, ಯಾರೋ ವೀಣೆಯೊಂದಿಗೆ ಮನಸ್ಸನ್ನು ಕರಗಿಸುವ

ಧ್ವನಿಯಲ್ಲಿ ಹಾಡುತ್ತಿದ್ದುದ್ದ ಕಿವಿಗೆ ಬಿತ್ತು. ಆಸೆಯಿಂದ ಮೆಟ್ಟಲುಗಳ ಸವಿಪಾ ಪಕ್ಕೆ ಹೋಗಿ ಆ ಗಾನವನ್ನು ಅನುಭವಿಸುತ್ತಾ ನಿಂತೆ.

ಆಳಾಳಿ ಕರ್ಕೈಯಿನ್ರಿ ನಿರ್ಕವಿಲೆಯೋ ? ಕೊಡಿಯ
ಆಲಮುಮುದಾಗ ವಿಲ್ಲೈಯೋ ?
ಅಕ್ಕಡಲಿನ್ ಮಿಾದು ವಡ ವನ್ನಿರ್ಕ ವಿಲ್ಲೈಯೋ ?
ಅಂತರತ್ತಿಲ ಕೋಡಿ
ತಾಳಾಮನಿಲೈ ನಿರ್ಕ ವಿಲ್ಲೈಯೋ ? ಮೇರುವುಂ
ವಸುವಾಗ ವಳ್ಳೈಯ ವಿಲ್ಲೈಯೋ ?

[ಆಳವಾದ ಸಮುದ್ರ ದಡಮೀರದೆ ನಿಲ್ಲಲಿಲ್ಲವೆ ? ಕಠಿಣವಾದ ವಿಷ ಅಮೃತವಾಗ ಲಿಲ್ಲವೇ ? ಸಮುದ್ರದ ಮೇಲು ಭಾಗದಲ್ಲಿ (ಪರ್ವತ) ನಿಲ್ಲಲಿಲ್ಲವೇ. ಅಖಿಲ ಕೋಟಿ ಬ್ರಹ್ಮಾಂಡಗಳು ಆಧಾರವಿಲ್ಲದೆ ಅಂತರದಲ್ಲಿ ನಿಲ್ಲಲಿಲ್ಲವೇ ? ಮೇರು ಪರ್ವತ ಧನುಸ್ಸಾಗಿ ಬಗ್ಗಲಿಲ್ಲವೆ ?]

ಅವರ ಹಾಡಿನ ಮಂತ್ರಶಕ್ತಿಯನ್ನು ನಾನು ಹೇಗೆ ವರ್ಣಿಸಲಿ ? ಇದು ವರೆಗೆ ನಾವು ಕೇಳಿರಬಹುದಾದ ಎಲ್ಲಾ ಸಂಗೀತಗಳಿಗಿಂತಲೂ ಅದು ಅಧಿಕ ಆನಂದವನ್ನು ಕೊಟ್ಟಿತು. ಅಷ್ಟು ಮಾತ್ರವೇ ಅಲ್ಲ. ಅದರ ಗುಣವೇ ಬೇರೆ ಯಾಗಿದ್ದಿತು. ಅದನ್ನು ಕೇಳುವಾಗ ನನ್ನ ಕಿವಿ ಆನಂದದಲ್ಲಿ ಮುಳುಗಿತು. ಅಷ್ಟೇ ಅಲ್ಲ. ಇನ್ನೂ ಅನೇಕ ವಿಧಗಳಲ್ಲಿ ನಾನು ಅಸದೃಶ ಸುಖವನ್ನು ಅನು ಭವಿಸಿದೆ. ನನ್ನ ಬಾಳಿನಲ್ಲಿ ಯಾವು ಯಾವುವು ಅತ್ಯಂತ ಸುಂದರವಾದು ದೆಂದು ನಾನು ಭಾವಿಸಿರುವೆನೋ-ನದಿಯ ತೀರಗಳು, ಅಸ್ತಮಿಸುವ ಸೂರ್ಯ, ಸುಂದರ ವದನ-ಅವುಗಳೆಲ್ಲ ಆ ಗಾನಶಕ್ತಿಯಿಂದ ಮತ್ತೆ ದೇಹಗೊಂಡು ನನ್ನ ಮುಂದೆ ಪ್ರತ್ಯಕ್ಷವಾದವು. ಎಳೆ ಮಗುವಿನ ಕೈ ಬೆರಳ ಮೃದುಸ್ಪರ್ಶದಂತಹ ಇನಿದಾದ ತೆಂಗಾಳಿ ನನ್ನ ದೇಹವನ್ನು ಸ್ಪರ್ಶಿಸಿದ ರೀತಿ, ನನಗೆ ರೋಮಾಂಚನ ವಾಯಿತು. ಆ ತೆಂಗಾಳಿ ತಂದಿತೋ ಎಂಬಂತೆ ಶ್ರೀಗಂಧ ಗುಲಾಬಿ ಜಾಜಿ ಹೆವಳಮಲ್ಲಿಗೆ ಇವುಗಳ ವಿಧವಿಧಗಳಾದ ಸುಗಂಧಗಳು ನನ್ನನ್ನು ಸುತ್ತಿಸುತ್ತಿ ಮುಳುಗಿಸಿದುವು. ಹೀಗೆ ನನ್ನ ಪಂಚೇಂದ್ರಿಯಗಳನ್ನೂ ಮೋಹಗೊಳಿಸಿದು ದಲ್ಲದೆ ಆ ಗಾನದ ಗುಣ ನನ್ನ ಆತ್ಮವನ್ನೂ ಆಕರ್ಷಿಸಿತು. ಮತ್ತೊಬ್ಬರಿಗೆ ಹಿಂಸೆಮಾಡಬೇಕೆನ್ನುವ ಅಸಹನೆ ಕ್ರೌರ್ಯ ಮೊದಲಾದ ಒಂದೊಂದು ಭಾವನೆ

ಯೂ, ನೀರಿನಿಂದ ತೊಳೆದ ಕೊಳೆ ನಾಶವಾಗುವಂತೆ ಮನಸ್ಸನ್ನು ಬಿಟ್ಟು ಉದುರಿಹೋಗುವಂತೆ ತೋರಿತು. "ಅಗೋ ಅಲ್ಲಿ ಕಾಣುವ ಬಾಗಿಲನ್ನು ತೆರೆದರೆ ಕೂಡಲೇ ಸ್ವರ್ಗವನ್ನು ಕಾಣಬಹುದು. ಅಲ್ಲಿ ಪ್ರವೇಶಿಸಿದರೇ ಸಾಕು. ನೀನೂ ಅತ್ಯಾನಂದವನ್ನು ಹೊಂದಬಹುದು. ನಿನ್ನಂತೆ ಇತರರೂ ಮಹದಾನಂದವನ್ನು ಹೊಂದುತ್ತಾರೆ. ಇದನ್ನರಿತೇ ಜೀವಾತ್ಮಗಳು ಒಬ್ಬರಿಗೊಬ್ಬರು ಸಹಾಯ ಮಾಡಿಕೊಳ್ಳಬೇಕು." ಎಂಬ ಒಂದು ಭಾವನೆ ಮನಸ್ಸನ್ನು ವ್ಯಾಪಿಸಿತು.

ಆ ಸಮಯಕ್ಕೆ ಆ ಮಹಾನುಭಾವರು ನಾನು ಬಂದು ನಿಂತುದನ್ನು ಕಂಡು ಹಾಡನ್ನು ನಿಲ್ಲಿಸಿದರು. ಆ ಗಾನದ ಮಾಯ, ಮೋಹ ಮುಗಿದ ಕೂಡಲೇ ಅರ್ಧ ಕನಸಿನಲ್ಲಿ ಎಚ್ಚರಗೊಂಡವನಂತೆ ಮೈಲಾಪುರದ ಬ್ರಾಡೀಸ್ ರಸ್ತೆಯಲ್ಲಿ ನಾನು ಇರುವುದನ್ನು ಅರಿತೆ. ನಾನು ಅರಿಯದ ಯಾವುದೋ ಶಕ್ತಿಯಿಂದ ಆಕರ್ಷಿತನಾಗಿ ಹೋಗಿ ಅವರ ಎದುರಿಗೆ ನಿಂತೆ. ಅವರ ವಯಸ್ಸು ಸುಮಾರು ಇಪ್ಪತ್ತೈದು ಇದ್ದಿರಬಹುದು. ಆದರೆ ತಲೆಯಲ್ಲಿ ಜಡೆಯೂ ಅದಕ್ಕೆ ತಕ್ಕಂತೆ ಮುಖದಲ್ಲಿ ಗಡ್ಡ ಮೀಸೆಗಳೂ ಬೆಳೆದಿದ್ದವು. ಸೊಂಟದಲ್ಲಿ ಒಂದು ಸಾಧಾರಣ ಕಂಚಿಯ ಪಂಚೆಯನ್ನೂ ಎದೆಯಲ್ಲಿ ಕೃಷ್ಣಾಜಿನದ ಯಜ್ಞೋಪವೀತವನ್ನೂ ಧರಿಸಿದ್ದರು. ಅವರ ಕೈಯ್ಯಲ್ಲಿದ್ದ ವೀಣೆಯನ್ನು ಒಂದುವರೆ ಆಣೆಗೆ ಸಹ ಯಾರೂ ಕೊಳ್ಳುತ್ತಿರಲಿಲ್ಲ. ಯಾವುದೋ ಮರದಿಂದ ಅದನ್ನು ಮಾಡಿದ್ದರು. "ಈ ವಾದ್ಯದ ಸಹಾಯದಿಂದಲೇ ಈ ಯೌವ್ವನದಲ್ಲಿಯೇ ಇವರು ಇಷ್ಟು ಅದ್ಭುತವಾಗಿ ಹಾಡಿದುದು"? ಎಂದು ಆಶ್ಚರ್ಯಪಟ್ಟು ನಿಂತೆ.

"ಏನನ್ನು ಹುಡುಕುತ್ತೀದ್ದೀರಿ? ಏನು ಬೇಕು?" ಎಂದು ಅವರು ಕೇಳಿದರು. ಕೆಲವು ಸಂಗೀತ ವಿದ್ವಾಂಸರಿಗೆ, ಅವರು ಹಾಡುವಾಗ ಮಾತ್ರವೇ ಅವರ ಕೊರಳ ಧ್ವನಿ ಇಂಪಾಗಿರುತ್ತದೆ. ಈ ಮಹಾತ್ಮನಿಗೋ? ಹಾಗೆ ಇಲ್ಲ. ಅವರ ಧ್ವನಿಯ ಸುಖದಲ್ಲಿ ತಲ್ಲೀನನಾದ ನಾನು, ಇವರು ಯಾಕೆ ಮಾತನಾಡುವುದನ್ನು ನಿಲ್ಲಿಸಿಬಿಟ್ಟರು? ಎಂದು ವಿಷಾದಗೊಂಡೆನೇ ಹೊರತು "ಇವರು ಒಂದು ಪ್ರಶ್ನೆ ಕೇಳಿದ್ದಾರೆ. ಅದಕ್ಕೆ ಪ್ರತ್ಯುತ್ತರ ಹೇಳಬೇಕು" ಎಂಬುದನ್ನು ಯೋಚಿಸಲಿಲ್ಲ. ಅವರು ಮತ್ತೆ "ಏನು ಬೇಕು? ಏನನ್ನು ನೋಡುತ್ತೀರಿ?" ಎಂದು ಒತ್ತಾಯವಾಗಿ ಕೇಳಿದರು.

ಅದಕ್ಕೆ ನಾನು "ನೀವು ಯಾರೋ ಗೊತ್ತಾಗಲಿಲ್ಲವೆಲ್ಲ! ಇದಕ್ಕೆ ಮುಂಚೆ ನಿಮ್ಮನ್ನು ಕಾಣುವ ಭಾಗ್ಯ ಈ ನಗರಕ್ಕೆ ಉಂಟಾಗಲಿಲ್ಲವೆಲ್ಲ?" ಎಂದೆ.

"ಇದಕ್ಕೆ ಮೊದಲು ನಾನು ಇಲ್ಲಿಗೆ ಬಂದುದಿಲ್ಲ. ನಾನು ಒಬ್ಬ ಋಷಿ" ಎಂದರು ಅವರು.

"ಹಾಗೆಯೇ?" ಎಂದೆ.

"ಹಿರಿಯ ಋಷಿ ಗಣಗಳ ಮಧ್ಯದಲ್ಲಿ ನಾನು ಎಷ್ಟರವನು? ಒಬ್ಬ ಅಲ್ಪ. ಅದೂ ಅಲ್ಲದೆ ನಾನೊಬ್ಬ ಕಿರಿಯ ಋಷಿ"

ಕಿರಿಯ ಋಷಿ ಯಾರು? ಹಿರಿಯ ಋಷಿ ಯಾರು? ನನ್ನನ್ನು ಇವರು ಹಾಸ್ಯಮಾಡುತ್ತಿದ್ದಾರೆಯೋ? ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದವರಿಗೆ ಉಳಿದದ್ದು ಏನು ತಿಳಿದಿರಲಿ ತಿಳಿಯದಿರಲಿ, "ಋಷಿಗಳೆಂಬುವರು ಇಲ್ಲ; ಅದೆಲ್ಲ ಬರಿಯ ಕಟ್ಟು ಕತೆ" ಎಂಬುದಾದರೂ ತಿಳಿಯದೆ? ನಾನು ಓದಿದವನಲ್ಲ ಎಂದು ಇವರು ತಿಳಿದಿರುವಂತಿದೆ! ಅದರ ಹೊರತು ಇನ್ನೊಂದು ಸಂದೇಹವೂ ಉಂಟಾಯಿತು. ಅವರ ಮುಖವನ್ನು ಕುರಿತು ನೋಡಿದೆ. ಒಂದು ಚಿಕ್ಕ ಮಗುವಿನ ಮುಖದಂತೆ ಕಪಟರಹಿತವಾಗಿ ಶಾಂತವಾಗಿದ್ದಿತೇ ಹೊರತು ಹುಚ್ಚನಲ್ಲಿ ತೋರುವ ಚಿಹ್ನೆಗಳಾವುವೂ ತೋರಲಿಲ್ಲ. ಯಾವುದು ಹೇಗೆ ಬೇಕಾದರೂ ಇರಲಿ. ಇವರೇನೋ ಅತ್ಯದ್ಭುತವಾಗಿ ಹಾಡುತ್ತಾರೆ. ಅದರಲ್ಲಿ ಸಂದೇಹವಿಲ್ಲ. ಇದರ ಮೇಲೆ ಅವರು ತಾವು ಒಬ್ಬ ಋಷಿ ಎಂದೇ ಹೇಳಿಕೊಳ್ಳಲಿ. ತಾವೇ ಮಹಾವಿಷ್ಣು ಎಂದು ಬೇಕಾದರೂ ಸಾಧಿಸಲಿ. ಅದರಿಂದ ನನಗೇನು ಬಾಧಕ? ನನಗೆ ಬೇಕಾಗಿರುವುದು ಅವರು ಮತ್ತೆ ಹಾಡುವುದನ್ನು ಕೇಳಬೇಕಾಗಿರುವುದು ಮಾತ್ರ. ಅವರ ಇಷ್ಟದಂತೆ ಅವರು ಸಲ್ಲಾಪ ಮಾಡುವುದರಿಂದ ನನಗೇನು ಕಷ್ಟ?

ಹೀಗೆಲ್ಲ ಯೋಚಿಸಿ "ನೀವು ಒಬ್ಬ ಕಿರಿಯ ಋಷಿ ಎಂದು ಹೇಳಿಕೊಳ್ಳುತ್ತೀರಿ? ವಿನಯಕ್ಕಾಗಿ ಹಾಗೆ ಹೇಳುತ್ತಿರಬೇಕು. ಆದರೆ ಎಂತಹ ಋಷಿಯೇ ಆಗಲಿ, ಭಾರತ ದೇಶಕ್ಕೆ ಬಂದು ಬಹಳ ಕಾಲವಾಗಿದೆ ಎಂದು ಭಾವಿಸುತ್ತೇನೆ" ಎಂದೆ.

"ಹೌದು. ದೇಶದಲ್ಲಿ ಜನರು ಸಂಸ್ಕೃತ ಮಾತನಾಡುವುದನ್ನು ಬಿಟ್ಟಂದಿನಿಂದ ನಾವು ಇಲ್ಲಿ ಬರುವುದನ್ನು ನಿಲ್ಲಿಸಿಬಿಟ್ಟೆವು. ಸಾಧಾರಣವಾಗಿ ಒಂದು ಭಾಷೆ ತಿಳಿಯದೆ ಹೋದರೆ ಯಾವರೀತಿ ಕಲೆತು ಸಹವಾಸಮಾಡುವುದು ?"

"ಕಷ್ಟ ಮನುಷ್ಯರಿಗೆ ತಾನೆ? ಋಷಿಗಳಿಗುಂಟೆ? ಅವರಿಗೆ ಎಲ್ಲಾ ಭಾಷೆಗಳೂ ತಿಳಿದಿದೆಯಲ್ಲವೆ? ಈಗ ನೀವು ನನ್ನೊಂದಿಗೆ ಬಹಳ ಸುಲಭವಾಗಿ ತಮಿಳು ಮಾತನಾಡುತ್ತಿದ್ದೀರೆಲ್ಲಾ ?"

"ಹಾಗಲ್ಲ. ಋಷಿಗಳಿಗೆಲ್ಲ ಗೊತ್ತಿರುವುದು ಸಂಸ್ಕೃತ ಭಾಷೆ ಒಂದು ತಾನೇ? ಅಗಸ್ತ್ಯರೆನ್ನುವ ಮಹಾಋಷಿಯ ಹೆಸರನ್ನು ಕೇಳಿದ್ದೀರೆಲ್ಲ. ಅವರೊಬ್ಬರಿಗೆ ಮಾತ್ರ ತಮಿಳಿನಲ್ಲಿಯೂ ಪಾಂಡಿತ್ಯವುಂಟು. ಅವರು ನನ್ನ ಸ್ನೇಹಿತರು. ನಾನು ಅವರನ್ನು ಬಲಾತ್ಕರಿಸಿದುದರಿಂದ ಕೆಲವು ತಮಿಳು ಹಾಡುಗಳನ್ನೂ ಇಂದಿನ ತಮಿಳು ಮಾತುಗಳನ್ನೂ ಸ್ವಲ್ಪ ಕಲಿಸಿಕೊಟ್ಟು "ತಮಿಳು ನಾಡನ್ನು ಹೋಗಿ ನೋಡಿಕೊಂಡು ಬಾ" ಎಂದು ದಾರಿ ತೋರಿಸಿ ಕಳುಹಿಸಿದರು. ಸ್ವಲ್ಪ ತಪೋಧನವನ್ನು ವೆಚ್ಚಮಾಡಿ ಈ ಪಂಚೆಯನ್ನು ಸೃಷ್ಟಿಸಿಕೊಟ್ಟರು." ಎಂದು ಸ್ವಲ್ಪ ಹೆಮ್ಮೆಯಿಂದಲೇ ಪಂಚೆಯನ್ನು ತೋರಿಸಿದರು.

ಅಗಸ್ತ್ಯರೆಂದರೇನು ? ಇವರ ಸ್ನೇಹಿತರೆಂದರೇನು ? ಇನ್ನೊಂದು ಗಳಿಗೆಯಲ್ಲಿ ತಾನೂ ವಾಲ್ಮೀಕಿಯೂ ಸೋದರಮಾವ ಸೋದರತ್ತೆ ಮಕ್ಕಳೆಂದು ಬಾಂಧವ್ಯವನ್ನು ಹೇಳಿಕೊಳ್ಳಬಹುದು.

"ಅಗಸ್ತ್ಯರು ಇನ್ನೂ ಹಿಮಾಲಯದಲ್ಲಿ ತಾನೇ ವಾಸಿಸುತ್ತಿದ್ದಾರೆ. ಅಲ್ಲಿಂದ ಇಲ್ಲಿಗೆ ಬರುವುದಕ್ಕೆ ನಿಮಗೆ ಬಹಳ ದೇಹಶ್ರಮವಾಗಿರಬೇಕಲ್ಲವೆ ?" ಎಂದು ಗೊಣಗುಟ್ಟಿದೆ.

"ಸ್ವಲ್ಪ ಶ್ರಮವೇ. ಏನು ಮಾಡುವುದು ? ನಾಡನ್ನು ನೋಡಬೇಕೆಂದು ಮನಸ್ಸಿನಲ್ಲಿ ಆಸೆ ಹುಟ್ಟಿಬಿಟ್ಟಿತು. ಒಂದು ಆಸೆಯನ್ನು ತೀರಿಸಿಕೊಳ್ಳಬೇಕಾದರೆ ಅದಕ್ಕೆ ಆವಶ್ಯಕವಾದ ಶ್ರಮವನ್ನು ಅನುಭವಿಸಲೇಬೇಕಲ್ಲ ?"

"ಶ್ರಮವಿಲ್ಲದೆ ಸಂಚರಿಸಲು ನಾನು ಒಂದು ದಾರಿ ತೋರಿಸುತ್ತೇನೆ" ಎಂದೆ.

"ಅದು ಹೇಗೆ ?"

"ನನ್ನ ಮೋಟಾರ್ ಕಾರ್‌ನಲ್ಲಿ."

" ಮೋಟಾರ್ ಕಾರ್ ಎಂದರೆ ಯಾವುದು ? ಅದನ್ನು ಅಗಸ್ತ್ಯರು ನನಗೆ ಹೇಳಿಕೊಡಲಿಲ್ಲವೆಲ್ಲ ? "

" ಅದು ತಮಿಳು ಮಾತಲ್ಲ. ಇಂಗ್ಲಿಷ್ "

" ಅದಕ್ಕೆ ಸಂಸ್ಕೃತದಲ್ಲಿ ಏನು ಹೆಸರು ? "

" ಅದಕ್ಕೆ ಸರಿಯಾದ ಮಾತು ಸಂಸ್ಕೃತದಲ್ಲಿ ಇಲ್ಲವೆಂದು ತೋರುತ್ತದೆ. ನಿಮಗೆ ಆಕ್ಷೇಪಣೆ ಇಲ್ಲದಿದ್ದಗೆ, ಮಾತಿಗಾಗಿ ಹುಡುಕುವುದಕ್ಕಿಂತ, ಆ ವಸ್ತುವನ್ನೇ ನೋಡಿ ತಿಳಿದುಕೊಳ್ಳಬಹುದು. ಅದನ್ನು ಹೊರಕ್ಕೆ ತರುವುದಕ್ಕಾಗಿಯೇ ಅದರ ಲಾಯಕ್ಕೆ ಹೋಗುತ್ತಿದ್ದೆ " ಎಂದೆ.

ಕೂಡಲೇ "ನಾನೂ ಬರುತ್ತೇನೆ" ಎಂದು ಹೇಳಿಕೊಂಡು ಅವರು ವೀಣೆಯನ್ನು ಎತ್ತಿಕೊಂಡು ಆಸೆಯೊಡನೆ ಹೊರಟರು. ಲಾಯಕ್ಕೆ ಹೋದೆವು. ಗಾಡಿಯನ್ನು ಹೊರಕ್ಕೆ ತಂದು, ಹಿಂದಲ ಆಸನದಲ್ಲಿ ವೀಣೆಯನ್ನಿಟ್ಟು ಮುಂದಲ ಆಸನಗಳಲ್ಲಿ ನಾವಿಬ್ಬರೂ ಕುಳಿತೆವು. ಗಾಡಿ ಹೊರಟಿತು. ಹೊಸ ಆಟದ ಸಾಮಾನನ್ನು ಕಂಡರೆ ಮಗುವಿಗೆ ಎಂತಹ ಸಂತೋಷವುಂಟಾಗುವುದೋ ಆ ಸಂತೋಷವನ್ನು ಅವರಲ್ಲಿ ಕಂಡೆನು.

" ಇದು ಬಹಳ ಉಲ್ಲಾಸವಾಗಿದೆ. ಇಷ್ಟು ವೇಗದಲ್ಲಿ ಹೋಗುವುದೆಲ್ಲ ? ಇದಕ್ಕೆ ಕಾಲು ನೋಯುವುದಿಲ್ಲವೆ ?" ಎಂದು ಕೇಳಿದರು.

" ಅದಕ್ಕೆ ಜೀವವೂ ಇಲ್ಲ. ಕಾಲೂ ಇಲ್ಲ. ಉರುಳುತ್ತಿರುವ ಚಕ್ರಗಳು ಮಾತ್ರ ಇವೆ"

"ಹಾಗೆಯೇ. ದೇವೇಂದ್ರನ ರಥದಂತೆಯೆ ?"

"ಸ್ವಲ್ಪ ಹೆಚ್ಚು ಕಡಿಮೆ ಹಾಗೆಯೇ. ನೀವು ಆಗಾಗ ಅದರಲ್ಲಿ ಕುಳಿತು ಸಂಚಾರಮಾಡಿದ್ದೀರಲ್ಲವೆ ?"

"ಆಗಾಗ ಇಲ್ಲ. ನಾನು ಹೇಳಿದೆನೆಂದು ಯಾರಲ್ಲಿಯೂ ಹೇಳಬೇಡಿ. ತನ್ನ ರಥದಲ್ಲಿ ಇತರರು ಹೋಗುವುದು ದೇವೇಂದ್ರನಿಗೆ ಅಷ್ಟು ಇಷ್ಟವಿಲ್ಲ. ಎಂದಾದರೂ ಒಂದು ದಿನ ನಾಟ್ಯವೋ ಸಂಗೀತವೋ ಅಮೃತರಸವೋ ಅವನಿಗೆ ಹೆಚ್ಚಾದ ತೃಪ್ತಿಯನ್ನುಂಟುಮಾಡಿದರೆ ಅವನು "ಮಾಧವೀ, ಇವರನ್ನು ಸ್ವಲ್ಪ ನಮ್ಮ ರಥದಲ್ಲಿ ಕುಳ್ಳಿರಿಸಿ ಎರಡು ಮೂರು ಲೋಕಗಳನ್ನು ಸಂಚಾರಮಾಡಿಸಿಕೊಂಡು ಬಾ " ಎಂದು ಅಪ್ಪಣೆ ಮಾಡುವುದು ಪದ್ಧತಿ.

"ಈ ಮೋಟಾರು ಕಾರು ಮೇಘದಲ್ಲಿ ಸಂಚರಿಸಲಾರದು. ಭೂಮಿಯ ಮೇಲೆ ಗಟ್ಟಿಯಾದ ಸಮ ನೆಲವಿದ್ದರೆ ಮಾತ್ರವೇ ಸಂಚರಿಸಬಲ್ಲದು.

"ಈಗ ನಾವು ಎಲ್ಲಿಗೆ ಹೋಗುತ್ತಿದ್ದೇವೆ?"

"ಮೂರು ಯೋಜನ ದೂರದಲ್ಲಿರುವ ಶಿಂಗಪೆರುಮಾಳ್ ಗುಡಿ ಎಂಬಲ್ಲಿಗೆ ಹೋಗಬೇಕೆಂಬುದು ನನ್ನ ಉದ್ದೇಶ. ನಿಮ್ಮ ಅಭ್ಯಂತರವಿಲ್ಲ ತಾನೆ?"

"ಗುಡಿಯೆ! ಬಹಳ ಸಂತೋಷ!"

"ಆ ದೇವಾಲಯದಲ್ಲ ನನ್ನ ಪರಿಚಿತರೊಬ್ಬರಿಗೆ ಈಗ ವಿವಾಹ"

"ವಿವಾಹವೆ? ಇನ್ನೂ ಸಂತೋಷ! 'ದೇವರನ್ನು ದರ್ಶಿಸುವಂತೆಯೇ, ಉತ್ತಮರಾದ ದಂಪತಿಗಳನ್ನು ದರ್ಶಿಸುವುದು ಆದರ್ಶ ಕಾರ್ಯ'

"ಆ ದಂಪತಿಗಳನ್ನು ನೋಡಿದ ಮೇಲೆ, ವಿವಾಹವನ್ನು ನಿಲ್ಲಿಸಿಬಿಟ್ಟರೇ ಪುಣ್ಯಕಾರ್ಯವಲ್ಲವೆ? ಎಂದು ನಿಮಗೆ ತೋರುವುದು."

"ಇದೇನು ಹೀಗೆ ಹೇಳುತ್ತೀರಿ? ಮಂಗಳಕರವಾದ ಕಾರ್ಯವನ್ನು ನಿಲ್ಲಿಸಬಹುದೆ?"

"ಹದಿನೈದು ವಯಸ್ಸಿನ ಹೆಣ್ಣನ್ನು ಅರವತ್ತೆರಡು ವಯಸ್ಸಿನ ಪುರುಷ ಮದುವೆಯಾಗಲಿದ್ದಾನೆ. ಇದರಲ್ಲಿ ಮಂಗಳವೆಲ್ಲಿ ಬಂತು? ನನಗೆ ಕಾಣುವುದಿಲ್ಲವಲ್ಲ?"

"ಹರಹರ! ಹೆಣ್ಣಿಗಿಂತ ನಾಲ್ಕರಷ್ಟು ವಯಸ್ಸಾದವನೆ? ಇದು ತುಂಬ ನ್ಯಾಯವಿರೋಧವಲ್ಲವೆ? ಅಥವಾ ಅವನೇನಾದರೂ ಚ್ಯವನ ಋಷಿಯಂತೆ ಚ್ಯವನಪ್ರಾಶ ಲೇಹವನ್ನು ತಿಂದು ಎರಡನೆಯ ಬಾರಿ ಯವ್ವನ ಹೊಂದಿದವನೆ? ಆದರೆ ಹಾಗೆ ಮಾಡಲು ಔಷಧಿ ಮಾತ್ರವೇ ಸಾಲದಲ್ಲ; ಅವರಂತೆ ತಪೋಬಲವೂ ಇರಬೇಕಲ್ಲ?"

"ಈ ಅಳಿಯ ಅಂತಹ ಯಾವ ತಪಸ್ಸನ್ನೂ ಮಾಡಿಲ್ಲ. ಇವರ ಆಯಸ್ಸು ಪೂರ್ತಾ ಇವರು ಮಾಡಿರುವ ತಪಸ್ಸೆಲ್ಲ ತುಂಬ ಹಣ ಗಳಿಸುವುದಕ್ಕಾಗಿಯೇ. ಹಣವನ್ನೇನೋ ಅಪರಿಮಿತವಾಗಿಯೇ ಸಂಪಾದಿಸಿದರು. ಯವ್ವನವನ್ನಂತೂ ಸಂಪಾದಿಸಲೇ ಇಲ್ಲ. ಉಳಿಸಿಕೊಳ್ಳಲೂ ಇಲ್ಲ. ಹುಟ್ಟುವಾಗಲೇ ಗೂನು. ಈಗ ಮುಪ್ಪು. ನಡೆಯುವಾಗ ಕಾಲು ತತ್ತರಿಸುತ್ತೆ. ಬೆರಳು ನಡುಗುತ್ತೆ. ದೃಷ್ಟಿಮಂದ. ಈ ಸುಂದರಿಯ ದೌರ್ಭಾಗ್ಯದಿಂದ ಅವರ ದೃಷ್ಟಿ

ಪೂರ್ಣವಾಗಿ ನಾಶವಾಗದೆ ಇನ್ನೂ ಅರ್ಧ ಕಣ್ಣು ಕಾಣುತ್ತಿರುವುದರಿಂದ ಅವಳನ್ನು ಕಂಡು ಮೋಹಿಸಿದರು. ಗಿಳಿಗೂ ಕಪಿಗೂ ನಡೆಯುವ ಈ ವಿವಾಹವನ್ನು ಆಶೀರ್ವದಿಸುವುದಕ್ಕಾಗಿಯೇ ನಾವು ಇಷ್ಟು ವೇಗವಾಗಿ ಹೋಗುತ್ತಿರುವುದು."

"ಈ ದೊಡ್ಡ ಅನ್ಯಾಯವನ್ನು ರಾಜ ಯಾಕೆ ತಡೆಯುವುದಿಲ್ಲ ?"

"ನಮ್ಮ ರಾಜ ಇರುವುದು ಬಹು ದೂರವಲ್ಲಿ. ಆತನ ನೌಕರರ ಕಿವಿಗೆ ಬೀಳದಿರಲಿ ಎಂದೇ, ಪಟ್ಟಣ ಬಿಟ್ಟು ಯಾರಿಗೂ ತಿಳಿಯದ ಈ ಸಣ್ಣ ಹಳ್ಳಿಯ ಗುಡಿಯೊಂದರಲ್ಲಿ ಈ ವಿವಾಹವನ್ನು ನಡೆಸುತ್ತಿದ್ದಾರೆ."

"ಗುಡಿಯಲ್ಲಿ ದೇವರು ಇದ್ದಾರೆ. ಅಲ್ಲವೆ ?"

"ದೇವರಿಲ್ಲದ ಗುಡಿಯೆ ?

"ಆಕೆ ದೇವರ ಕಾಲ ಮೇಲೆ ಬಿದ್ದು ಅಳಲಾರಳೆ ? ಅವಳಿಗೆ ನಿಜವಾಗಿ ವಿಮೋಚನೆ ಸಿಕ್ಕುವುದು"

"ಅವಳು ಯಾಕೆ ಅಳುತ್ತಾಳೆ ? ಈ ವಿವಾಹವನ್ನು ಬಯಸುವವಳು ಅವಳೇಯೆಲ್ಲ !"

"ಹೀಗೂ ಉಂಟೆ ? ಅವಳಿಗೆ ಯಾಕೆ ಈ ವಿಪರೀತವಾದ ಆಸೆ ?"

"ಅವಳ ಆಸೆ ಮದುವೆಗಾಗಿ ಅಲ್ಲ. ಈ ಮದುವೆಯ ಮೂಲಕ ತನ್ನ ತಾಯಿ ತಂದೆಗಳನ್ನು ಕಾಪಾಡಬೇಕೆಂಬುದೇ ಅವಳ ನಿಜವಾದ ಆಸೆ."

"ನೀವು ಹೇಳುವುದು ನನಗೆ ಅರ್ಥವೇ ಆಗುವುದಿಲ್ಲವೆಲ್ಲ !"

"ನೀವು ಕತೆಗಳನ್ನು ವಾಡಿಕೆಯಾಗಿ ಓದುತ್ತಿದ್ದರೆ ನಾನು ಹೇಳಿದುದು ವಿವರಿಸದಿದ್ದರೂ ಕೂಡಲೇ ಅರ್ಥವಾಗಿಬಿಡುತ್ತಿತ್ತು."

"ಓಹೋ, ನನಗೆ ಎಲ್ಲಾ ಕತೆಗಳೂ ಗೊತ್ತು. ಪುರಾಣ ಇತಿಹಾಸ ಇವನ್ನೆಲ್ಲ ಒಂದು ಅಕ್ಷರವನ್ನೂ ಬಿಡದೆ ಅರಿತಿದ್ದೇನೆ"

"ನಾನು ಹೇಳಿದುದು ಆ ಬಗೆಯ ಕತೆಗಳಲ್ಲ. ಸಿನಿಮಾ ಕತೆಗಳನ್ನು ಓದಿರುವಿರಾ ?"

"ಸಿನಿಮಾ ಎಂಬುವರು ಯಾರು ? ವಾಲ್ಮೀಕಿ ವೇದವ್ಯಾಸ ಅವರಿಗಿಂತ ಇವರು ಹೆಚ್ಚು ಜ್ಞಾನಿಯೆ ?

"ಸಿನಿಮಾ ಎಂದರೆ ಒಬ್ಬ "ಅವರು" ಅಲ್ಲ. ಅನೇಕ ಅವರುಗಳು. ಅವರಿಗಿರುವ ಭಕ್ತ ಕೋಟಿಯನ್ನು ಎಣಿಸಿ ನೋಡಿದರೆ ಅವರೇ ಈ ಕಾಲದ ದೊಡ್ಡ ದೇವರುಗಳು"

"ನನಗೆ ಇದೊಂದೂ ಅರ್ಥವಾಗುವುದಿಲ್ಲವಲ್ಲ! ಅಗಸ್ತ್ಯರು ಇವನ್ನೆಲ್ಲ ನನಗೆ ವಿವರಿಸದೆ ಬಿಟ್ಟುಬಿಟ್ಟರಲ್ಲ: ಅದೂ ಹೋಗಲಿ, ಈ ಹೆಣ್ಣು ಯಾಕೆ ಹೀಗೆ ಮಾಡುತ್ತಾಳೆ? ನನಗೆ ತಿಳಿಯುವಂತೆ ವಿವರವಾಗಿ ಹೇಳಿ."

"ಕೇಳಿ ಹೇಳುತ್ತೇನೆ. ಇವತ್ತಿನ ಮುಹೂರ್ತದ ಅಳಿಯಂದಿರು ಬಡ್ಡಿಗಾಗಿ ಹಣ ಸಾಲ ಕೊಡುವವರು. ನಮ್ಮ ಜಗತ್ತಿನಲ್ಲಿ, ಸಮಯದಲ್ಲಿ ಹೀಗೆ ಸಾಲ ಕೊಡುವುದೇ ದೊಡ್ಡ ಉಪಕಾರವಾಗಿದೆ. ಆದರೆ ಕೆಲವರು ಈ ಸಹಾಯವನ್ನೇ ಇತರರನ್ನು ಕಟ್ಟುವ ಸಂಕೋಲೆಯಾಗಿ ಪರಿವರ್ತಿಸುವುದೂ ಉಂಟು. ಇಂತಹ ಅಕೃತ್ಯಗಳ ವಿಷಯಗಳಲ್ಲಿ ಈ ಅಳಿಯಂದಿರಿಗೆ ತಿಳಿಯದ ತಂತ್ರ ಯಾವುದೂ ಇಲ್ಲವೇ ಇಲ್ಲ. ಇವರೂ ಹೆಣ್ಣಿನ ತಂದೆಯೂ–ಇಬ್ಬರ ಹೆಸರನ್ನೂ ಹೊರಗೆಡಹಲು ನನಗೆ ಇಷ್ಟವಿಲ್ಲ–ಹತ್ತಿರದ ಬಂಧುಗಳಾಗಬೇಕು. ಹೆಣ್ಣಿನ ತಂದೆ ಸುಮಾರು ಇಪ್ಪತ್ತು ವರುಷಗಳಿಗೆ ಮುಂಚೆ ತಮ್ಮ ವಿವಾಹ ಕಾಲದಲ್ಲಿ ಈತನಿಂದ ಸಾಲ ಪಡೆದರು. ನಂಬಿಕೆಯಿಂದಲೂ ಮದುವೆಯಾಗುವ ಉತ್ಸಾಹದಲ್ಲಿಯೂ ಸಾಲದ ಪತ್ರವನ್ನು ಸರಿಯಾಗಿ ಓದಿ ನೋಡದೆ ರುಜು ಹಾಕಿಬಿಟ್ಟರು. ಅಲ್ಲಿಂದ ಈಚೆಗೆ ಪ್ರತಿ ವರುಷವೂ ತಾವು ಒಪ್ಪಿಕೊಂಡಂತೆ ಬಡ್ಡಿ ಸಲ್ಲಿಸುತ್ತಾ ಬರುತ್ತಿದ್ದಾರೆ. ಸಾಲ ಕೊಟ್ಟಿರುವ ಗೂನರಿಗೆ ಯಾರೂ ಹೆಣ್ಣು ಕೊಡಲು ಒಪ್ಪಲಿಲ್ಲ. ಸುಮಾರು ಹತ್ತು ವರುಷಕ್ಕೆ ಹಿಂದೆ ಒಬ್ಬ ಅನಾಥ ಹುಡುಗನನ್ನು ದತ್ತು ಮಗನೆಂದು ಬೆಳೆಸತೊಡಗಿದರು. ಕಳೆದ ಹತ್ತು ವರುಷಗಳಿಂದ ಈ ಹುಡುಗನಿಗೂ ಹುಡುಗಿಗೂ ಸ್ನೇಹ ಬೆಳೆದು ಈಗ ಯವ್ವನದಲ್ಲಿ ಪ್ರೇಮವಾಗಿ ಅರಳಿದೆ. ಇವರಿಬ್ಬರಿಗೇ ವಿವಾಹವೆಂಬುದು ಬಾಯಿ ಬಿಟ್ಟು ಹೇಳದಿದ್ದರೂ–ಎರಡು ಮನೆಯವರೂ ಮನವೊಪ್ಪಿ ಸಮ್ಮತಿಸಿದ್ದ ವಿಷಯ. ಹೀಗೆ ಮದುವೆಯಾಗಿ ಬಿಟ್ಟರೆ ತಾವು ತೆಗೆದುಕೊಂಡ ಅಸಲನ್ನು ಹಿಂದಕ್ಕೆ ಕೊಡದಿರಬಹುದೆಂದು, ಹೆಣ್ಣಿನ ತಂದೆ ಯೋಚಿಸಿ, ಮಿತವಾಗಿ ಸಂಸಾರ ಮಾಡದೆ, ತಮ್ಮ ವರಮಾನವನ್ನೆಲ್ಲ ಹೆಣ್ಣಿನ ವಿದ್ಯೆಗೂ ಸುಖಕ್ಕೂ ಧಾರಾಳವಾಗಿ ಖರ್ಚುಮಾಡುತ್ತಾ ಬಂದರು. ಆದುದರಿಂದ ಸಾಲ ತೀರಲಿಲ್ಲ.

" ಈಗ ಸಕಾಲ ಒದಗಿ ಬಂದು ಪ್ರೇಮವರಳಿರುವ ಈ ಯುವತಿಯನ್ನು ನೋಡಿ, ಸಾಲ ಕೊಟ್ಟ ಆ ಗೂನನಿಗೆ ಒಂದು ಹೊಸ ಆಸೆ ಉಂಟಾಯಿತು. " ಆ ಹುಡುಗನಿಗೆ ಬೇರೆ ಯಾವುದಾದರೂ ಹೆಣ್ಣನ್ನು ಹಿಡಿದು ಕಟ್ಟಿದರಾಯಿತು. ಲೋಕದಲ್ಲಿ ಹೆಣ್ಣುಗಳಿಗೇನು ಕಡಿಮೆ ? " ಎಂದು ಯೋಚಿಸಿದನು. ಪಾಪ ಆ ಹುಡುಗ, ಅನಾಥನಾಗಿದ್ದ ತನ್ನನ್ನು ಹತ್ತು ವರುಷದಿಂದ ಬೆಳೆಸಿದ ತಂದೆ ಯಂತಿದ್ದ-ಅವರನ್ನು ಎದುರಿಸಿ ಮಾತನಾಡಲಾರದೆ ತತ್ತರಿಸಿದ. ಕೊನೆಗೆ "ಇವರ ಆದರವೂ ಬೇಡ ಆಸ್ತಿಯೂ ಬೇಡ. ಎಲ್ಲಿಯಾದರೂ ಹೋಗಿ ಕೂಲಿ ಕೆಲಸ ಮಾಡಿ ತನ್ನನ್ನೂ ತನ್ನ ಹೆಂಡತಿಯನ್ನೂ ಕಾಪಾಡಿಕೊಳ್ಳಬಹುದೆಂದು" ಯೋಚಿಸಿದನು. ಆ ಸಮಯದಲ್ಲಿ ಗೂನ ತನ್ನ ಎರಡನೆಯ ಸಿಡಿಲನ್ನು ಬಿಟ್ಟರು. " ಮರಕತಳನ್ನು ನಾನೇ ಮದುವೆಯಾಗುತ್ತೇನೆ." ಎಂದು; ಜತೆಯಲ್ಲಿ ಸಾಲದ ಪತ್ರವನ್ನೂ ತೆಗೆದು ಗಟ್ಟಿಯಾಗಿ ಓದಿದರು. ಮರಕತಳನ್ನು ತಾನು ಮದುವೆ ಮಾಡಿಕೊಂಡ ಕೂಡಲೇ ಹಣ ತೀರಿತೆಂದು ಭಾವಿಸಿ ಪತ್ರವನ್ನು ಹಿಂದಕ್ಕೆ ಕೊಡುವುದಾಗಿಯೂ, ಹಾಗೆ ವಿವಾಹಕ್ಕೆ ಸಮ್ಮತಿಸದಿದ್ದರೆ ನ್ಯಾಯಸ್ಥಾನದಲ್ಲಿ ವ್ಯಾಜ್ಯ ಹಾಕುವುದಾಗಿಯೂ ಶಪಥ ಮಾಡಿದರು. ಪತ್ರದಲ್ಲಿ ಬಾಯಲ್ಲಿ ಹೇಳಿದುದರ ಎರಡರಷ್ಟು ಬಡ್ಡಿ ಬರೆದಿದ್ದಿತು. ಬಡ್ಡಿಗೆ ಬಡ್ಡಿಯೂ ಬರೆದಿದ್ದಿತು. ಅದುವರೆಗೆ ಸಲ್ಲಿಸಿದ ಹಣದ ಬಗ್ಗೆ ಕೇವಲ ಎರಡುಸಲವಲ್ಲದೆ ಉಳಿದುದನ್ನು 'ವಸೂಲಿ' ಬರೆದಿರಲಿಲ್ಲ. ಹೀಗೆ ಹೆಣ್ಣಿನ ತಂದೆ ಮೋಸಹೋಗಿದ್ದರು. ಅಸಲು ಬಡ್ಡಿಗಳ ಲೆಕ್ಕ ನೋಡಿದರೆ ಅವರು ತಮ್ಮ ಮನೆ ಮಠ ಜಮೀನು ಎಲ್ಲವನ್ನೂ ಮಾರಿ, ಹೊಟ್ಟೆಗೆ ಒದ್ದೆ ಬಟ್ಟೆ ಕಟ್ಟಿಕೊಂಡು ಹೊರಟರೂ ತೀರುವಂತಿರಲಿಲ್ಲ. ತಮ್ಮ ಸಮಸ್ತ ಆಸ್ತಿಯನ್ನು ಸಾಲಗಾರನಿಗೆ ಕೊಟ್ಟು, ತಾವು ಎಲ್ಲಿಯಾದರೂ ಕಣ್ಮರೆಯಾಗಿ ಹೋಗಿ ಮಗಳಿಗಾದರೂ ಸೌಖ್ಯವನ್ನು ಒದಗಿಸಿಕೊಡೋಣ ವೆಂದು ಅವರು ಯತ್ನಿಸಿದರು. ಆ ಸುದ್ದಿ ತಿಳಿದ ಕೂಡಲೇ ಆ ಯುವತಿ ತನ್ನಿಂದ ತಂದೆತಾಯಿಗಳಿಗೆ ಕಷ್ಟ ಬೇಡವೆಂದುಕೊಂಡು ತನ್ನ ಆಯಸ್ಸಿನ ಪೂರ್ಣ ಸುಖವನ್ನು ತ್ಯಾಗಮಾಡಿ ಆ ಗೂನನನ್ನೇ ವಿವಾಹಮಾಡಿಕೊಳ್ಳುವು ದಾಗಿಯೂ, ಯಾರಾದರೂ ತಡೆದರೆ ಭಾವಿ ಬಿದ್ದು ಪ್ರಾಣತ್ಯಾಗಮಾಡುವುದಾ ಗಿಯೂ ತೀರ್ಮಾನಿಸಿದಳು. ಏನು ಹೇಳಿದರೂ ಅವಳು ಆ ತೀರ್ಮಾನವನ್ನು ಬದಲಾಯಿಸಲಿಲ್ಲ. ಈ ರೀತಿ ಈ ವಿವಾಹಕ್ಕೆ ಇಂದು ನಿಶ್ಚಯವಾಗಿದೆ.

ಈ ಪುಣ್ಯ ಕೆಲಸಕ್ಕೆ ಮನುಷ್ಯರು ವಾಸವಿರುವ ಮನೆ ಅರ್ಹವಲ್ಲವೇನೋ ಎಂಬಂತೆ ಪ್ರಾರ್ಥನೆಯ ಸ್ಥಳವಾದ ಈ ದೇವಾಲಯ ಹುಡುಕಿದಂತೆ ದೊರೆಯಿತು. ಗೂನರಿಗೂ ನನಗೂ ಸಂಗೀತದ ಮೂಲಕ ಪರಿಚಯ. ನಾನೊಬ್ಬನೇ ಈ ವಿವಾಹಕ್ಕೆ ಆಹ್ವಾನಿತ. ಆದುದರಿಂದ ಆ ಗುಡಿಯ ದೇವತೆಯಾದರೂ ದಾರಿ ತೋರಿ ಮದುವೆಯನ್ನು ನಿಲ್ಲಿಸಬಾರದೆ? ಎಂಬ ಆಸೆಯೊಡನೆ ಅಲ್ಲಿಗೆ ಹೋಗುತ್ತಿದ್ದೇನೆ" ಎಂದು ನನ್ನ ಮಾತನ್ನು ಮುಗಿಸಿದೆ.

"ಮರೆ ಹೊಕ್ಕವರನ್ನು ದೇವರು ಕೈ ಬಿಡುವುದಿಲ್ಲ." ಎಂದು ಆ ಮಹಾನುಭಾವರು ಮೃದುವಾಗಿ ಹೇಳಿದರು. ನಾನು ಮೌನವಾಗಿದ್ದೆ. ಉಳಿದ ದಾರಿಯನ್ನು ಮೌನವಾಗಿಯೇ ಕಳೆದೆವು.

ಊರನ್ನು ಸೇರಿದ ಕೂಡಲೇ ಅಲ್ಲಿಯ ಛತ್ರವನ್ನು ಹುಡುಕಿಕೊಂಡು ಹೊರಟೆವು. ಛತ್ರದ ಜಗಲಿಯ ಮೇಲೆ ಗೂನರು ಕುಳಿತಿದ್ದರು. ತಾವು ಮಾಡುವ ಕಾರ್ಯಕ್ಕೆ ಅವರು ಇತರ ಸಾಕ್ಷಿಗಳನ್ನು ಕರೆಸುವ ಸ್ಥಿತಿಯಲ್ಲಿರಲಿಲ್ಲ. ಅವರಿಗೇ ಮನಸ್ಸಿನಲ್ಲಿ ಸ್ವಲ್ಪ ಲಜ್ಜೆಯುಂಟಾಗಿದ್ದಿರಬೇಕು. ಆದುದರಿಂದ ಮೋರೆಯನ್ನು ಸ್ವಾಭಾವಿಕವಾಗಿದ್ದುದಕ್ಕಿಂತಲೂ ಸ್ವಲ್ಪ ಹೆಚ್ಚಾಗಿಯೇ ಸಿಡುಕು ಮಾಡಿಕೊಂಡು "ಯಾರು ನಿನ್ನ ಈ ಸ್ನೇಹಿತ? ದಾಡಿ, ಕೈಯ್ಯಲ್ಲಿ ಕಟ್ಟಿಗೆ ತುಂಡು?" ಎಂದು ವ್ಯಗ್ರವಾಗಿ ಕೇಳಿದರು.

" ಇವರು ಒಬ್ಬ ಸಂಗೀತ ವಿದ್ವಾಂಸರು " ಎಂದೆ.

ಅಷ್ಟರಲ್ಲಿ ಆ ಮಹಾನುಭಾವರು" ಇದು ಸೌದೆಯ ತುಂಡಲ್ಲ,ಇದೊಂದು ವೀಣೆ. ಇವನ್ನು ವಿಶ್ವಕರ್ಮ ಮಾಡಿ ನನಗೆ ಕೊಟ್ಟರು" ಎಂದು ಹೆಮ್ಮೆಯಿಂದ ಹೇಳಿದರು.

" ಓಹೋ ವಿಶ್ವಕರ್ಮನೆ? " ಎಂದು ಗೂನರು ವ್ಯಂಗ್ಯವಾಗಿ ನಕ್ಕರು. " ನೀನೇನು ಕಿನ್ನರನೋ? ಕುದುರೆ ಮುಖವೇ ಇಲ್ಲವಲ್ಲ? ನೀನೇ ನಾರದ ಋಷಿ ಎಂದೇ ಹೇಳಿಕೊಂಡು ಬಿಡು! ಇವನು ಸಂಗೀತ ವಿದ್ವಾಂಸನಂತೆ! ಕ್ಷೌರಮಾಡಿಸಿಕೊಳ್ಳುವುದಕ್ಕೆ ಕಾಸಿಲ್ಲವೆಂದು ಕಾಣುತ್ತೆ. ಯಾರೋ ಒಬ್ಬ ಮ್ಯಾಡ್ ಬೆಗ್ಗರ್" ಎಂದರು.

" ಇವರು ಹೇಳುತ್ತಿರುವುದೇನು ? ನನಗೆ ಅರ್ಥವಾಗಲಿಲ್ಲವಲ್ಲ ? ಮ್ಯಾಡ್ ಬೆಗ್ಗರ್ ಎಂದರೆ ಏನರ್ಥ?" ಎಂದು ಆ ಮಹಾತ್ಮರು ನನ್ನನ್ನು ಕೇಳಿದರು.

" ಅವರು ಏನೋ ಇಂಗ್ಲಿಷ್ ಹೇಳುತ್ತಿದ್ದಾರೆ. ಅದನ್ನು ನಾವು ಗಮ ನಿಸಬೇಕಾದುದಿಲ್ಲ." ಎಂದು ನಾನು ಸಮಾಧಾನ ಹೇಳಿದೆ.

" ನನಗೆ ಕೋಪ ಬರುವುದಿಲ್ಲ. ಭಯಪಡಬೇಡಿ. ಇಂಗ್ಲಿಷ್ ನನಗೆ ತಿಳಿಯದಿದ್ದರೂ ಅವರ ಧ್ವನಿಯಿಂದ ಆ ಮಾತು ನಿಂದೆ ಎಂಬುದು ಗೊತ್ತಾಗು ವುದಿಲ್ಲವೆ? ಹಾಗಿದ್ದರೂ ನಾನು ಕೋಪಿಸಿಕೊಳ್ಳುವುದಿಲ್ಲವೆಲ್ಲ. ಸಂಕೋಚ ಪಡದೆ ಆ ಮಾತುಗಳಿಗೆ ತಮಿಳಿನಲ್ಲಿ ಅರ್ಥ ಹೇಳಿ ಎಂದು ಅವರು ಸ್ವಲ್ಪ ಖಂಡಿತವಾಗಿಯೇ ಕೇಳಿದರು. ಅವರ ಮಾತನ್ನು ತಿರಸ್ಕರಿಸಲು ನನಗೆ ಸಾಧ್ಯ ವಾಗಲಿಲ್ಲ.

" ಬೆಗ್ಗರ್ ಎಂದರೆ ತಿರುಕ—"

" ಸರಿ. ನಾನು ಒಬ್ಬ ತಿರುಕ. ಮ್ಯಾಡ್ ಎಂದರೋ?

" ಮ್ಯಾಡ್ ಎಂದರೆ ಹುಚ್ಚ" ಎಂದೆ.

" ಹಾಗೋ ? " ಎಂದರು. ಅವರ ಪ್ರಯತ್ನವಿಲ್ಲದೆ ಅವರ ಕಣ್ಣು ಗಳಿಂದ ಕಿಡಿಗಳು ಹಾರಿದುವು. ಆದರೆ ಕೂಡಲೇ ಮರೆಯಾದುವು. ಅನಂತರ ಮುಖದಲ್ಲಿ ಎಂದಿನಂತೆ ಶಾಂತಿ ವಿರಾಜಿಸಿತು.

ಗೂನರು " ಏನು, ನಿನ್ನ ಮ್ಯಾಡ್ ಬೆಗ್ಗರ್ ಸ್ನೇಹಿತ, ಹುಬ್ಬುಗಂಟು ಹಾಕಿಕೊಂಡರೆ ನಾನು ಭಯಪಡುವೆನೆಂದು ಯೋಚಿಸಿದನೋ ? " ಎಂದು ಹಾಸ್ಯಮಾಡುತ್ತಾ ತನ್ನ ಪ್ರಾತರನುಷ್ಠಾನಗಳಲ್ಲಿ ಒಂದಾದ, ಚುಟ್ಟ ಸೇದು ವುದಕ್ಕಾಗಿ, ಒಂದು ಚುಟ್ಟದ ತುದಿಯನ್ನು ಹತ್ತಿಸಿ ಬಾಯಲ್ಲಿಟ್ಟುಕೊಂಡರು.

"ಅಬ್ಬಬ್ಬಾ! ಉರಿಯುವ ಕಡ್ಡಿಯನ್ನು ಬಾಯಲ್ಲಿಟ್ಟುಕೊಳ್ಳುತ್ತಾರೆಲ್ಲ!" ಎಂದು ಆ ಮಹಾತ್ಮರು ಆಶ್ಚರ್ಯ ಪಟ್ಟರು.

ಗೂನರು ಚುಟ್ಟವನ್ನು ಬಾಯಿಂದ ತೆಗೆದು, " ಕೆಲಸ ನೋಡ ಹೋಗಯ್ಯ" ಎಂದು ಅವರನ್ನು ಗದರಿಸಿ ಬಾಯಲ್ಲಿಯೂ ಮೂಗಿನಲ್ಲಿಯೂ ಹೊಗೆ ಬಿಡಲು ಪ್ರಾರಂಭಿಸಿದರು.

ಕೂಡಲೇ ಆ ಮಹಾನುಭಾವರು "ಅಯ್ಯಯ್ಯೋ, ಇವರು ಬೆಂಕಿ ಹತ್ತಿಸಿ ಕೊಂಡು ಉರಿಯುತ್ತಿದ್ದಾರೆಲ್ಲ? ನೀವು ಸುಮ್ಮನೆ ಇದ್ದೀರಲ್ಲ ಎಂದು ಪರಿತಪಿ ಸಿದರು. "ಅಪಕಾರಕ್ಕೆ ಪ್ರತಿಯಾಗಿ ಉಪಕಾರ ಮಾಡಬೇಡವೆ ? " ಎಂದು ಕೊಂಡು, ಬಳಿಯಲ್ಲಿ ಯಾರೋ ಮುಖ ತೊಳೆದುಕೊಳ್ಳುವುದಕ್ಕಾಗಿ ತೆಗೆದು

ಕೊಂಡು ಹೋಗುತ್ತಿದ್ದ ಚೊಂಬನ್ನು ಕಿತ್ತುಕೊಂಡು, ಅದರಲ್ಲಿದ್ದ ನೀರನ್ನು ಗೂನರ ತಲೆಯ ಮೇಲೆ ಸುರಿದು ಬಿಟ್ಟರು.

ತಣ್ಣೀರು ತಗಲಿದ ಕೂಡಲೇ ಗೂನರ ದೇಹ ಪೂರ್ತಿ ಸಂಕುಚಿತವಾಗಿ ಅವರು ಗಡ ಗಡನೆ ನಡುಗಿದರು.

"ಹೆಲ್‌ಅಂಡ್ ಡಾಮ್ನೇಶನ್! ಹಾಳಾದವನೇ!" ಎಂದು ಕೂಗಿದರು. "ಬೇಕೆಂದೇ ನನ್ನ ತಲೆಯಲ್ಲಿ ತಣ್ಣೀರು ಸುರಿದು ಬಿಟ್ಟು ನನಗೇ ಉಪಕಾರ ಮಾಡುವವನಂತೆ ನಟಿಸುತ್ತೀಯಾ ?" ಎಂದು ಇಂಗ್ಲಿಷ್ ತಮಿಳು ಉರ್ದು ಈ ಮೂರು ಭಾಷೆಗಳಲ್ಲಿಯೂ ತಮಗೆ ತಿಳಿದ ಬೈಗಳವನ್ನೆಲ್ಲಾ ಕ್ರಮವಾಗಿ ಪಠಿಸಿದರು. ಆ ಮಹಾನುಭಾವರು ಅದನ್ನು ಸ್ವಲ್ಪವೂ ಲಕ್ಷಿಸದೆ ವೀಣೆಯನ್ನು ಕೈಯ್ಯಲ್ಲಿ ತೆಗೆದುಕೊಂಡು ಪುನ್ನಾಗರಾವಳಿ ರಾಗದಲ್ಲಿ ಹಾಡಲು ಆರಂಭಿಸಿದರು.

ಪೊನ್ನೋಡು ಮಣಿಯುಂ ಡಾಸಾತ್
　　ಪುಲೈಯನುಂ ಕಿಳೈ ನೆನ್ರು
ತನ್ನೆಯುಂ ಪುಗಳ್ದು ಕೊಂಡು
　　ಜಾತಿಯಿನ್ ಮಣಮುಂ ಶೆಯ್ವಾರ್ ;
ಮಣ್ಣರಾ ಯಿರುಂದ ಪೇರ್ಗಳ್
　　ವಗೈಕೆಟ್ಟು ಪೋವಾ ರಾಯಿನ್
ಪಿನ್ನೆಯು ಮಾರೋ ವೆನ್ರು
　　ಪೇಶು ವಾ ರೇಶು ವಾರೇ

ನೀತಿಹೀನನೂ ಉತ್ತಮರೊಡನೆ ಸೇರಿದರೆ —ಹೊನ್ನು ವಜ್ರದೊಂದಿಗೆ ಸೇರಿದಂತೆ— ಉತ್ಕೃಷ್ಟತೆಯನ್ನುಂಟು ಮಾಡಿಕೊಳ್ಳುವನು. ರಾಜರಾದವರೂ ಸಹ ನೀತಿಗೆಟ್ಟು ಹೋದರೆ (ತಿರಸ್ಕಾರದಿಂದ) ಇವರು ಯಾರೋ ಎಂದು ಹೇಳುವವರು ಹೇಳಿಯೇ ಹೇಳುತ್ತಾರೆ. ]

ಆನಂದವನ್ನೇ ಕರಗಿಸಿ ಸುರಿಸಿದಂತಿದ್ದ ಆ ಸಂಗೀತವನ್ನು ಕೇಳಿದ ಕೂಡಲೇ ಆ ಗೂನರ ಮುಖದಲ್ಲಿ, ಮೊದಲು ನೀರನ್ನು ತಮ್ಮ ಮೇಲೆ ಸುರಿದಾಗ ಆದ ಬದಲಾವಣೆಗಿಂತಲೂ ಹೆಚ್ಚು ಆಶ್ಚರ್ಯಕರವಾದ ಬದಲಾವಣೆಗಳನ್ನು ಕಂಡೆನು. ಮೊದಲು ಅವರು ಬೈಗಳವನ್ನು ನಿಲ್ಲಿಸಿ ಸ್ವಲ್ಪ ಹೊತ್ತು ಆಹಾ ಎಂದು ಬಾಯನ್ನೇ ತೆರೆದು ಆಶ್ಚರ್ಯದಿಂದ ಸುಮ್ಮನೆ ನಿಂತರು. ಅನಂತರ ತಮ್ಮ ಮೇಲೆ ಮುತ್ತಿಗೆ ಹಾಕಲು ಬಂದ ಸದ್ಗುಣವನ್ನು ಎದುರಿಸಿ

ಹೋರಾಡುವುದರಲ್ಲಿ ಉಸಿರು ಕಟ್ಟಿ ಒದ್ದಾಡುತ್ತಿರುವಂತೆ ಎರಡು ಮೂರು ಸಲ ದೇಹವನ್ನು ಕುಲಕಿಸಿ ನಿಟ್ಟುಸಿರುಬಿಟ್ಟರು. ಅನಂತರ ಅಲುಗಾಡದೆ ಶಾಂತ ವಾಗಿ ಕುಳಿತರು. ಆಮೇಲೆ ತಮಗೇ ತಿಳಿಯದಂತೆ ಮುಖವನ್ನು ಅರಳಿಸಿ ಆಹಾ ಆಹಾ ಎಂದು ಎರಡು ಸಲ ಮೆಲ್ಲನೆ ಉಸುರಿದರು. ಅನಂತರ ಧಡೀರನೆ ಎಚ್ಚೆತ್ತವರ ಹಾಗೆ ತಮ್ಮ ಸ್ವಾಭಾವಿಕವಾದ ಸಿಡುಕು ಮುಖವನ್ನು ತೋರಿಸಿ ಕೊಂಡು "ನಿನ್ನ ಸ್ನೇಹಿತ ಭಲೆ ಆಸಾಮಿ. ಕಟ್ಟಿಗೆಯ ತುಂಡಿನಂತಿರುವ ವೀಣೆ ಯನ್ನು ನುಡಿಸಿ ತನ್ನ ಹಾಡಿನ ಶಕ್ತಿಯಿಂದ ನನ್ನ ಕೋಪವನ್ನು ಮರೆಯಿಸಿ ನನ್ನ ಬಾಯಿಂದ ಶಾಬಾಸ್ ಎನ್ನಿಸಿಬಿಟ್ಟ. ಇನ್ನು ಸ್ವಲ್ಪ ಹೊತ್ತು ಇಲ್ಲೇ ನಾನು ನಿಂತರೆ ನನ್ನ ಹಣವನ್ನೆಲ್ಲ ಅವನಿಗೆ ಕೊಡುವಂತೆ ಮಾಡಿಬಿಡುವನು. ನಾನು ಓಡಿ ಬಿಡುವೆನು" ಎಂದು ಹೇಳಿ ಛತ್ರದೊಳಕ್ಕೆ ಹೋಗಿ ಬಾಗಿಲನ್ನು ಪಠಾರನೆ ಮುಚ್ಚಿ ಒಳ ಅಗಣಿಯನ್ನು ಹಾಕಿಕೊಂಡರು.

ಆ ಮಹಸೀಯರು ಹಾಡುವುದನ್ನು ನಿಲ್ಲಿಸಿ ಸ್ವಲ್ಪ ಮುಗುಳು ನಗೆಯೊ ಡನೆ 'ಬನ್ನಿ ದೇವಾಲಯಕ್ಕೆ ಹೋಗಿ ಸ್ವಾಮಿ ದರ್ಶನ ಮಾಡಿಕೊಂಡು ಬರೋಣ' ಎಂದರು.

"ಹಾಗೆಯೇ ಆಗಲಿ ಸ್ವಾಮಿ, ಇನ್ನು ನೀವು ಮಾಡುವ ಕಟ್ಟಳೆಗಳಿಗೆಲ್ಲ ನಾನು ವಿಧೇಯ. ನನಗೆ ಒಂದು ವರವನ್ನು ಕೊಡಬೇಕು" ಎಂದು ಪ್ರಾರ್ಥಿಸಿದೆ.

"ಏನು ವರ ಕೇಳುತ್ತೀರಿ?"

"ಇಂದಿನ ಮುಹೂರ್ತದಲ್ಲಿ ಮೇಳದವನನ್ನು ನಿಲ್ಲಿಸಿಬಿಟ್ಟು ತಾವೇ ದಯವಿಟ್ಟು ಹಾಡಬೇಕು"

"ಹಾಗೆಯೇ ಆಗಲಿ"

ನಾವು ಪುಷ್ಕರಿಣಿಯಲ್ಲಿ ಸ್ನಾನಮಾಡಿ ಅನುಷ್ಠಾನಗಳನ್ನು ಮುಗಿಸಿ ಕೊಂಡು ದೇವರ ದರುಶನಮಾಡಿ ಹೊರ ಪ್ರಾಕಾರಕ್ಕೆ ಬರುವ ವೇಳೆಗೆ ಮುಹೂ ರ್ತದ ಸಮಯ ಸಮೀಪಿಸಿತು. ಆ ಪ್ರಾಕಾರದ ಒಂದು ಮೂಲೆಯಲ್ಲಿ ಈ ರಸಾಭಾಸವಾದ ವಿವಾಹ ಪ್ರಾರಂಭವಾಯಿತು. ಆಗ ತಾನೆ ಮದುವೆ ಗಂಡು ಕೋಲನ್ನು ಊರಿಕೊಂಡು ನಡೆದು ಬಂದು ಹಸೆಮಣೆ ಏರಿದರು. ಸಾಲದ ಪತ್ರ

ವನ್ನೂ ಒಂದು ಫೌಂಟನ್ ಪೆನ್ನನ್ನೂ ಸೊಂಟದಿಂದ ತೆಗೆದು ನೆಲದ ಮೇಲೆ ಮಗ್ಗುಲಲ್ಲಿ ಇಟ್ಟುಕೊಂಡರು. ಎರಡು ಕಣ್ಣುಗಳೂ ಊದಿ ಸೀಬೆಯ ಹಣ್ಣಿನಂತೆ ದಪ್ಪವಾಗಿದ್ದ ಅವರ ದತ್ತು ಮಗ, ಕೈಗಳನ್ನು ಕಟ್ಟಿಕೊಂಡು ಅವರ ಹಿಂದೆ ನಿಂತನು. ಅವನು ಕೈಕಟ್ಟಿಕೊಂಡಿರುವುದನ್ನು ಗಮನಿಸಿ ನೋಡಿದರೆ, "ಅದು ಮರ್ಯಾದೆಗಾಗಿ ಅಲ್ಲ, ತನ್ನನ್ನೂ ಮೀರಿ ತನ್ನ ಕೈಗಳು ಆ ಗೂನರ ಬೆನ್ನೆಲುಬುಗಳನ್ನು ಪುಡಿಪುಡಿ ಮಾಡಾವು ಎಂಬ ಭಯದ ಎಚ್ಚರಿಕೆಗಾಗಿ ಎಂದು ತೋರುತ್ತಿದ್ದಿತು. ಮರಕತಳೊ ? ಪಾಪ ! ವಸಂತ ಕಾಲದಲ್ಲಿ ಹೊರಗೆ ಇಣಕಿ ನೋಡುವ ಚಿಗುರಿನಂತೆ, ಮೃದುವಾದ ದೇಹವುಳ್ಳ ಆ ಪರಮ ಸುಂದರಿ, ಕಣ್ಣುಗಳಲ್ಲಿ ನೀರು ಸುರಿಸುತ್ತಾ, ತುಟಿಗಳಿಂದ ಹಲ್ಲುಗಳನ್ನು ಕಚ್ಚಿ ದುಃಖವನ್ನು ಅಡಗಿಸಿಕೊಂಡು ಹಸೆ ಮಣೆಯ ಮೇಲೆ ಎಷ್ಟು ದೂರ ಸಾಧ್ಯವೋ ಅಷ್ಟು ದೂರದಲ್ಲಿ ಕುಳಿತಿದ್ದಳು. ಅವಳ ತಾಯಿ ತಂದೆಗಳೋ, ಇನ್ನು ದೇವರೇ ನಮ್ಮ ಮಗಳನ್ನು ಕಾಪಾಡಬೇಕೆಂದು ಎಣಿಸಿ ದೀನರಾಗಿ ದೇವಾಲಯದ ಸನ್ನಿಧಿಯನ್ನೇ ದೃಷ್ಟಿಸಿ ನೋಡುತ್ತಿದ್ದರು. ಪುರೋಹಿತರೂ ಮೇಳದವರೂ ಈ ಬಗೆಯ ವೈಭವವನ್ನು ಕಂಡು ಆಶ್ಚರ್ಯಪಟ್ಟು ಏನನ್ನೂ ಮಾಡಲಾರದೆ ದಿಗ್ಭ್ರಾಂತರಾಗಿ ನಿಂತರು.

ಆ ಸಮಯದಲ್ಲಿ "ಸ್ವಾಮಿ ಈಗ ಒಂದು ಹಾಡನ್ನು ಕೃಪೆಮಾಡಬೇಕು" ಎಂದು ಆ ಮಹಾತ್ಮರನ್ನು ಪ್ರಾರ್ಥಿಸಿದೆ. ಅವರು ಕೂಡಲೇ ತಮ್ಮ ಸ್ವರ್ಣಕಂಠದಲ್ಲಿ ಪ್ರಾರಂಭಿಸಿದರು.

" ಕಲ್ಲಾರ್ಕ್ಕಂ ಕಟ್ರವರ್ಕ್ಕಂ "
ಕಳಿಪ್ಪರುಳುಂ ಕಳಿಪ್ಪೇ

[ಕಲಿಯದವರಿಗೂ ಕಲಿತವರಿಗೂ ಆನಂದವುಂಟುಮಾಡುವ ಫಲವೇ]

ಮೊದಲು ಸ್ವರಗಳನ್ನು ಅವರು ಅಂತರದಲ್ಲಿ ಉಸುರಿದ ಒಡನೆಯೇ ಗೂನರು ಬೆಚ್ಚಿಬಿದ್ದು " ಇವನು ಇಲ್ಲಿಗೂ ಬಂದು ಬಿಟ್ಟನೆ ? " ಎಂದು ಗೊಣಗುಟ್ಟುತ್ತಾ ಹಸೆಯನ್ನು ಬಿಟ್ಟು ಮೇಲೆದ್ದು ನೋಡುತ್ತಾ ನಿಂತುಕೊಂಡರು. ಅನಂತರ ಹಾಗೆ ಬಿಟ್ಟು ಹೋಗಲು ಶಕ್ತಿಯಿಲ್ಲದವರಾಗಿ ಮೊದಲಿನಂತೆಯೇ ಕುಳಿತು ಹಾಡನ್ನು ಕೇಳತೊಡಗಿದರು. ಅಲ್ಲಿದ್ದ ಪ್ರತಿಯೊಬ್ಬರೂ ಆ ಸಂಗೀತದ

ಮಹತ್ವದಲ್ಲಿ ಕಟ್ಟುಬಿದ್ದು ಬಗೆ ಬಗೆಯ ಮುಖಭಾವದಲ್ಲಿ ನಿಂತರು. ಆದರೆ ನನ್ನ ದೃಷ್ಟಿಯೆಲ್ಲಾ ಆ ಮದುಮಗನ ಮೇಲೆಯೇ ಇತ್ತು.

" ಕಾಣಾರ್‍ಕ್ಕುಂ ಕಂಡವರ್‍ಕ್ಕುಂ
ಕಣ್ಣಳಿಕ್ಕುಂ ಕಣ್ಣೆ "

[ನಿನ್ನ ಕಾಣದವರನ್ನೂ ಕಂಡವರನ್ನೂ ರಕ್ಷಿಸುವ ಕಣ್ಣೇ]

ಗೂನರು ಆಹಾ! ಆಹಾ! ಎಂದರು. ತಮ್ಮ ದೃಷ್ಟಿ ತಮ್ಮ ಬಾಲ್ಯದೆಸೆಯನ್ನು ಮುಟ್ಟಿ ಆ ಬಾಲ್ಯವೆಲ್ಲ ಮತ್ತೆ ಹಿಂದಿರುಗಿದಂತೆ ಕಣ್ಣುಗಳನ್ನು ಬಿಟ್ಟು ನೋಡಿದರು.

"ವಲ್ಲಾರ್‍ಕ್ಕುಂ ಮಾಟ್ಟಾರ್‍ಕ್ಕುಂ
ವರಮಳಿಕ್ಕುಂ ವರಮೇ
ಮದಿಯಾರ್‍ಕ್ಕುಂ ಮದಿಪ್ಪವರ್‍ಕ್ಕುಂ
ಮತಿಕೊಡುಕ್ಕುಂ ಮತಿಯೇ "

[ಮಿತ್ರರಿಗೂ ದ್ವೇಷಿಗಳಿಗೂ ವರ ಕೊಡುವ ಶ್ರೇಷ್ಠನೇ, ಬುದ್ಧಿಯುಳ್ಳವರಿಗೂ ಮತ್ತರಿಗೂ ಬುದ್ಧಿ ಕೊಡುವ ಜ್ಞಾನವೇ]

ಗೂನರು ಆಹಾ ಆಹಾ ಎಂದು ನಕ್ಕರು, "ಇವನು ನಿಜವಾಗಿಯೂ ಮರಕತಳನ್ನು ಮದುವೆಯಾಗುತ್ತಾನೆ. ಈ ಮುದುಕನಿಗೆ ಇವಳು ಅಡಿಯಾಳಾಗುತ್ತಾಳೆ; ಎಂದಲ್ಲವೇ ನೀವೆಲ್ಲ ಯೋಚಿಸುತ್ತಿರುವುದು ? ನಿಜವನ್ನು ಒಪ್ಪಿಕೊಳ್ಳಿ " ಎಂದು ನನ್ನ ಕಡೆ ತಿರುಗಿ ಪೆಚ್ಚು ನಗೆಯನ್ನು ನಕ್ಕರು.

"ನಲ್ಲಾರ್‍ಕ್ಕುಂ ಪೊಲ್ಲಾರ್‍ಕ್ಕುಂ
ನಡುನಿನ್ರ ನಡುವೇ"

[ಒಳ್ಳೆಯವರಿಗೂ ಕೆಟ್ಟವರಿಗೂ ನಡುವೆ ನಿಂತ ಮಧ್ಯವೇ]

ಹಸೆಮಣೆಯಲ್ಲಿದ್ದ ಮೊಳೆ ಒಂದು, ತಮ್ಮನ್ನು ಚುಚ್ಚಿದಂತೆ ಗೂನರು ಥಟ್ಟನೆ ಬೆಚ್ಚಿಬಿದ್ದು ಎದ್ದು ದೂರ ನಿಂತರು. " ಏನಪ್ಪ ಹುಡುಗ, ಧಾಂಡಿಗ ಬ್ರಹ್ಮಚಾರಿಯಾಗಿ ನಿಂತಿದ್ದೀಯಲ್ಲ. ಹಸೆಮಣೆಯಲ್ಲಿ ಕೂಡುವುದಕ್ಕೇನು ? " ಎಂದು ತಮ್ಮ ದತ್ತು ಮಗನನ್ನು ನೋಡಿ ಗದರಿಸಿದರು. ನಾನು ಹುಡುಗನ ಕೈಹಿಡಿದು ತಂದು ಹಸೆಮಣೆ ಮೇಲೆ ಕೂರಿಸಿದೆ.

"ನರರ್ಗಳಕ್ಕುಂ ಸುರರ್ಗಳುಕ್ಕುಂ
ನಲಂ ಕೊಡುಕ್ಕುಂ ನಲಮೇ"
[ಸತ್ಪುರುಷರಿಗೂ ದೇವತೆಗಳಿಗೂ ಆನಂದವುಂಟುಮಾಡುವ ನಲವೇ]

"ಪುರೋಹಿತರೇ ಎಲ್ಲಿ ನೋಡುತ್ತಿದ್ದೀರಿ? ಹೆಣ್ಣು ಗಂಡು ಕಾಯ್ದು ಕೊಂಡಿರುವುದು ಕಾಣುವುದಿಲ್ಲವೆ? ಮಂತ್ರ ಹೇಳುವುದಕ್ಕೇನು?'' ಎಂದು ಗೂನರು ಗದರಿಸಿದರು.

ಅವರು ಹೇಳಿದುದು ಸಾಲದೆಂದು ನನ್ನ ಕೈಲಾದುದನ್ನು ನಾನೂ ಮಾಡಿದೆ. "ಪುರೋಹಿತರೇ, ಈ ಹಾಡು ಮುಗಿಯುವುದರೊಳಗಾಗಿ ಸಪ್ತ ಪದಿಯನ್ನಾದರೂ ಪೂರೈಸಿ ಮದುವೆಯನ್ನು ಬದಲಾಯಿಸದಂತೆ ಮಾಡಿದರೆ, ನಿಮಗೆ ಎರಡರಷ್ಟು ಸಂಭಾವನೆ ಕೊಡಿಸಲು ನಾನು ಹೊಣೆ'' ಎಂದೆ.

"ಎಲ್ಲಾರ್ಕ್ಕುಂ ಪೊದುವಿಲ್ ನಡಂ
ಇದುಕ್ಕಿನ್ರ ಪರಮೇ
ಎನ್ನರಸೇ ಯಾನ್ ಪುಗಳುಂ
ಇಶೈಯು ಮಣಂ ದರುಳೇ"

[ಎಲ್ಲರೂ ಸಮನಾಗಿ ನಡೆವಂತೆ ಮಾಡುವ ಶ್ರೇಷ್ಠನೇ; ನನ್ನರಸನೇ ನಿನ್ನನ್ನು ಕೊಂಡಾಡುವ ಇಚ್ಚೆಯನ್ನು ಕೊಡು]

ಮಹಾತ್ಮರನ್ನು ನೋಡಿ "ಸ್ವಾಮಿ ಹಾಡನ್ನು ಮಾತ್ರ ನಿಲ್ಲಿಸಬೇಡಿ'' ಎಂದು ಪ್ರಾರ್ಥಿಸಿದೆ.

ಭಕ್ತಾಪಾಯ ಭುಜಂಗ ಗಾರುಡಮಣಿಃ
ತ್ರೈಲೋಕ್ಯ ರಕ್ಷಾಮಣಿಃ
ಗೋಪೀಲೋಚನ ಚಾತಕಾಂಬುದ ಮಣಿಃ
ಸೌಂದರ್ಯ ಮುದ್ರಾಮಣಿಃ
ಯಃಕಾಂತಾಮಣಿ ರುಕ್ಮಿಣೀ ಘನ ಕುಚ
ದ್ವಂದ್ವೈಕ ಭೂಷಾಮಣಿಃ
ಶ್ರೇಯೋ ದೇವ ಶಿಖಾಮಣಿಃ ದಿಶತುನೊ
ಗೋಪಾಲ ಚೂಡಾಮಣಿಃ

[ಭಕ್ತರ, ಅಪಾಯವೆಂಬ ಸರ್ಪಕ್ಕೆ ಗರುಡನೇ, ಮೂರು ಲೋಕ ರಕ್ಷಣೆಗಾಗಿ ಹೃದಯದಲ್ಲಿ ಧರಿಸಿದ ರಕ್ಷಾಮಣಿಯೇ, ಗೋಪಿಯರ ಕಣ್ಣುಗಳೆಂಬ ಚಾತಕಪಕ್ಷಿಗಳಿಗೆ ಮೇಘಮಣಿಯೇ ಸೌಂದರ್ಯವನ್ನೆಲ್ಲ ಒಂದೆಡೆ ಸೇರಿಸಿ ಮುದ್ರಿಸಿಟ್ಟ ರೀತಿಯ ಮುದ್ರಾ ಮಣಿಯೇ, ಕಾಂತಾಮಣಿಯಾದ ರುಕ್ಮಿಣೀ ದೇವಿಯ ಘನಕುಚ ದ್ವಂದ್ವೈಕ್ಯ ಭೂಷಾ ಮಣಿಯೇ, ದೇವತೆಗಳ ಚೂಡಾಮಣಿಯೇ ಗೋಪಾಲ ಶಿಖಾಮಣಿಯೇ ನಮ್ಮನ್ನುರಕ್ಷಿಸು.]

ವಿವಾಹ ಬಹಳ ಚುರುಕಾಗಿ ನಡೆಯುತ್ತಿತ್ತು. ಗೂನರು "ಎಲ್ಲಿ ಆ ಪೇನಾ" ಎಂದು ಕೂಗಿದರು. "ನನ್ನ ಸ್ವೀಕೃತ ಪುತ್ರನಿಗೆ ನಿಮ್ಮ ಮಗಳು ಮರಕತಳನ್ನು ವಿವಾಹ ಮಾಡಿಕೊಡಲು ನೀವೂ ನಿಮ್ಮ ಕುಟುಂಬದವರೂ ಸಮ್ಮತಿಸಿದುದಕ್ಕೆ ಪ್ರತಿಫಲವಾಗಿ ಈ ಸಾಲ ಪೂರ್ತಾ ತೀರಿದೆ" ಎಂದು ಪತ್ರದಲ್ಲಿ ಬರೆದು ರುಜು ಹಾಕಿದರು. ಮೇಳದವರು ಏನೂ ಕೆಲಸಮಾಡದೆ ಸುಮ್ಮನೆ ಯಾಕೆ ಪ್ರತಿಫಲ ತೆಗೆದುಕೊಂಡು ಹೋಗಬೇಕು ಎಂದು ಅವರ ಸಾಕ್ಷಿಗಳನ್ನು ಪತ್ರಕ್ಕೆ ಹಾಕಿಸಿದೆ. ಪುರೋಹಿತರಿಂದಲೂ ಸಾಕ್ಷಿ ಹಾಕಿಸಿ ಪತ್ರವನ್ನು ಸುರಕ್ಷಿತವಾಗಿ ನನ್ನಲ್ಲಿಯೇ ಇಟ್ಟುಕೊಂಡೆ. ವಿವಾಹಿತ ದಂಪತಿಗಳೋ ಅಥವಾ ಹೆಣ್ಣಿನ ತಾಯಿ ತಂದೆಗಳೋ—ಯಾರು ಹೆಚ್ಚು ಆನಂದಸಾಗರಗಲ್ಲಿ ಮುಳುಗಿದವರು ಎಂದು ಹೇಳುವುದು ಕಷ್ಟವಾಗಿತ್ತು.

"ಶ್ರೀ ರಾಮಚಂದ್ರನುಕ್ಕು ಜಯಮಂಗಳಂ – ನಲ್ಲ
ದಿವ್ಯ ಮುಖ ಬಾಲನಕ್ಕು ಶುಭಮಂಗಳಂ"

ಮದುವೆ ಮುಗಿಯಿತು. ಗೂನರು ಪುಟ್ಟ ಭಾಷಣವನ್ನೇ ಮಾಡಿಬಿಟ್ಟರು. "ಈಗಲ್ಲವೇ ಎಲ್ಲರಿಗೂ ತೃಪ್ತಿಯಾಯಿತು ? ಅದು ಬಿಟ್ಟು ಹಣದ ಆಸೆಹಿಡಿದ ನಿಮ್ಮ ಮಾತನ್ನು ಕೇಳಿ ನಾನು ಹೆಣ್ಣನ್ನು ಮದುವೆಮಾಡಿಕೊಂಡಿದ್ದರೆ ಯಾರಿಗೆ ತಾನೇ ಒಳ್ಳೆಯದಾಗುತ್ತಿತ್ತು. ನಿಮಗೆ ವಯಸ್ಸು ಆದುದಕ್ಕೆ ಏನು ಫಲ. ಪಾಪ ಪುಣ್ಯ ಸುಖ ದುಃಖ ಇವು ತಿಳಿಯಬೇಡವೆ ?

ಆ ಮಾತನ್ನು ಕೇಳಿ ಮರಕತಳ ತಂದೆಯೂ ನಾನೂ ಚಕಿತರಾಗಿ ನಿಂತೆವು. ಅನಂತರ ಹಾಡು ನಿಂತು ಹೋಯಿತಲ್ಲ ಎಂದು ಹಿಂದಿರುಗಿ ನೋಡಿದೆ. ಆ ಮಹಾತ್ಮರು ಕಣ್ಣಿಗೆ ಬೀಳಲಿಲ್ಲ. "ಮಾಧ್ಯಾಹ್ನಿಕ ಮಾಡುವ ಕಾಲ ಬಂದು ಬಿಟ್ಟಿತು." ಎಂದು ಹೇಳಿ ಈಗ ತಾನೇ ಎದ್ದು ಹೋದರೆಂದು ಪುರೋಹಿತರು ಹೇಳಿದರು. ಪುಷ್ಕರಣಿಗೆ ಓಡಿ ಹೋಗಿ ನೋಡಿದೆ. ದೇವಾಲಯವನ್ನೆಲ್ಲ ತಿರುಗಿ ತಿರುಗಿ ಎಲ್ಲ ದಿಕ್ಕುಗಳಲ್ಲಿಯೂ ಹುಡುಕಿದೆ. ಅವರನ್ನು ಕಾಣಲಿಲ್ಲ. ನಾನು ಏನು ಮಾಡಲಿ ?

* * * *

ನಾಲ್ಕು ದಿನ ಕಳೆದು ಹೋಯಿತು. ಇನ್ನೂ ಆ ಮಹಾತ್ಮರನ್ನು ಕಾಣಲಿಲ್ಲ. ಮರಕತಳೂ ಆಕೆಯ ಗಂಡನೂ, ಆಕೆಯ ತಂದೆಯ ಮನೆಯಲ್ಲಿ ಸುಖ

ವಾಗಿದ್ದಾರೆ. ಸಾಲದ ಪತ್ರ ನನ್ನ ವಶದಲ್ಲಿದೆ. ಈ ಬೆಳಿಗ್ಗೆ ನನಗೆ ವಕೀಲರಿಂದ ನೋಟೀಸು ಬಂದಿದೆ. "ನಾನು ಕಲಹಪ್ರಿಯನಾದ ಯಾರೋ ಒಬ್ಬ ಮಾಯಾವಿಯನ್ನು ಕರೆದುಕೊಂಡು ಬಂದು ಅವರಿಗೂ ಅವರ ಮಗನಿಗೂ ಮನಸ್ತಾಪವುಂಟುಮಾಡಿದುದಲ್ಲದೆ ಅವರನ್ನು ನಂಬಿಸಿ ಪತ್ರದಲ್ಲಿ ಅವರ ರುಜು ಹಾಕಿಸಿಬಿಟ್ಟೆನಂತೆ. ಆದುದರಿಂದ ಅವರು ನನ್ನ ಮೇಲೆ ಒಂದು ಲಕ್ಷ ರೂಪಾಯಿಯ ನಷ್ಟಕ್ಕೆ ಕೋರ್ಟಿನಲ್ಲಿ ದಾವ ಹೂಡುವರಂತೆ. ಆದರೆ ಆ ಕಲಹಪ್ರಿಯನಾದ ಮಾಯಾವಿಯನ್ನು ಕರೆದುಕೊಂಡು ಹೋಗಿ ಇನ್ನು ಒಂದು ಗಂಟೆ ಕಾಲ ಹಾಡಿಸಿದರೆ, ಎಲ್ಲವನ್ನೂ ಮನ್ನಿಸಲು ಸಿದ್ಧರಾಗಿರುವರಂತೆ."

ಅವರು ನನ್ನನ್ನು ಮನ್ನಿಸುವುದೇ ಬೇಡ. ದಾವ ಮಾಡಲಿ. ನಡೆದುದನ್ನು ತಿಳಿಸಲು ನಿಷ್ಪಕ್ಷಪಾತಿ ಸಾಕ್ಷಿಗಳಾದ ಪುರೋಹಿತರೂ ಮೇಳದವರೂ ಇದ್ದಾರೆ. ಆದರೆ ನಾನು ಸಾಯುವುದಕ್ಕೆ ಮುಂಚೆ ಆ ಮಹಾತ್ಮರ ಸಂಗೀತವನ್ನು ಮತ್ತೊಂದು ಸಲ ಕೇಳಬೇಕೆಂಬ ಆಸೆ ನನ್ನನ್ನು ಹಗಲೂ ರಾತ್ರಿ ಪೀಡಿಸುತ್ತಿದೆ. ಅದಕ್ಕೇನು ದಾರಿ? ಈ ವಿಷಯದಲ್ಲಿ ನನಗೆ ಸಹಾಯಮಾಡುವವರಾರು? ನೀವು ಯಾರಾದರೂ ಆ ಮಹಾತ್ಮರನ್ನು ಕಂಡಿರಾ? ನೋಡುವುದಕ್ಕೆ ಸುಮಾರು ಇಪ್ಪತ್ತೈದೇ ವರುಷ ವಯಸ್ಸಿನವರಂತಿದ್ದಾರೆ. ಎಳೆ ಮಗುವಿನಂತೆ ನಿಷ್ಕಳಂಕವಾದ ಮುಖ, ಸೊಂಟದಲ್ಲಿ ಕಂಚಿಯ ಪಂಚೆ, ಎದೆಯ ಮೇಲೆ ಜಿಂಕೆ ಚರ್ಮದ ಜನಿವಾರ; ಕೈನಲ್ಲಿ ಕಾಡುಮರದಿಂದ ಮಾಡಿದ ವೀಣೆ, ತಲೆಯಲ್ಲಿ ಜಡೆ–ಆದರೆ ಇದನ್ನೆಲ್ಲಾ ಮೊದಲೇ ಒಂದು ಸಲ ನಿಮಗೆ ಹೇಳಿದೆನಲ್ಲವೆ? ಅವರನ್ನು ಎಲ್ಲಿಯಾದರೂ ನೀವು ನೋಡಿದ್ದುಂಟೆ? ಮದರಾಸಿನಲ್ಲಿರುವ ಎಲ್ಲ ಸಂಗೀತ ಸಭೆಗಳಲ್ಲಿಯೂ ವಿಚಾರಿಸಿದೆ. ಅಲ್ಲೆಲ್ಲ ತಮ್ಮ ಮುಂದಿನ ಕಛೇರಿಯ ಜಾಹಿರಾತು ನೋಟೀಸನ್ನು ತೋರಿಸುವವರೇ ಹೊರತು ಈ ಮಹಾತ್ಮರ ಸುದ್ದಿಯನ್ನೇ ಹೇಳುವವರಿಲ್ಲವಲ್ಲ! ನಾನು ಏನು ಮಾಡಲಿ? ನೀವು ಯಾರಾದರೂ ಅವರನ್ನು ನೋಡಿದಿರಾ!



# ತಾರಾ ಪ್ರೂಜೆ

—o—

ಅಘೋರಂ ಐಯ್ಯರ್ ಅವರು ಕೊನೆಗೂ ಬಟ್ಟೆಯನ್ನು ಆರಿಸಿಬಿಟ್ಟರು. ಮತ್ತೆ ಹಿಂದೆಗೆದರು. ಇಪ್ಪತ್ತು ರೂಪಾಯಿ ಕೊಟ್ಟು ಆ ಉತ್ತರೀಯವನ್ನು ಕೊಳ್ಳುವುದು ನ್ಯಾಯವೇ ಎಂದು ಅವರಿಗೆ ಸಂದೇಹ. ಕಡೆಗೆ ಮನಸ್ಸನ್ನು ದೃಢಪಡಿಸಿಕೊಂಡು, ಒಂದು ಸಮಾಧಾನದ ನಿಟ್ಟುಸಿರು ಬಿಟ್ಟು "ಇದನ್ನೇ ತೆಗೆದುಕೊಂಡುಬಿಡುತ್ತೇನೆ" ಎಂದರು. "ಸರಿ" ಎಂದು ಹೇಳಿ ಅಂಗಡಿಯ ಕೆಲಸಗಾರನು ಆ ವಸ್ತ್ರವನ್ನು ಒಂದು ಕಾಗದದ ಪೊಟ್ಟಣದಲ್ಲಿ ಕಟ್ಟಿಕೊಟ್ಟನು.

ಕೈಯಲ್ಲಿ ಐವತ್ತು ರೂಪಾಯಿ ತೆಗೆದುಕೊಂಡು ಅಘೋರಂ ಐಯರ್ ಅವರು ಮದರಾಸಿಗೆ ಆ ಕ್ರಿಸ್‌ಮಸ್ ರಜದಲ್ಲಿ ಬಂದಿದ್ದರು. ಇದು ಬಹಳ ದಿನಗಳಿಂದ ಅವರಿಗಿದ್ದ ಆಸೆ. ಅವರು ಇರುವ ಸ್ಥಳ ತಿರುವಾಡೂರು; ಕಛೇರಿಯಲ್ಲಿ ಗುಮಾಸ್ತೆ ಕೆಲಸ. ಪರಮಸಾಧು ಎಂದೇ ಹೆಸರು. ಅವರ ಪತ್ನಿ ಬಹಳ ವಿವೇಕಿ. ಧನುಸ್ಸಿನ ಹುರಿಯನ್ನು ಸಡಿಲಿಸದೆ ಬಿಗಿಯಾಗಿಯೇ ಇಟ್ಟುಬಿಟ್ಟರೆ, ಧನುಸ್ಸಿನ ಶಕ್ತಿಯೇ ಹೋಗಿಬಿಡುವುದೆಂದು ಅರಿತವಳು.

"ನಿಮ್ಮಿಷ್ಟದಂತೆ ಮದರಾಸಿಗೆ ಹೋಗಿ, ಹತ್ತು ದಿನಗಳಾದರೂ ಯೋಚನೆಯಿಲ್ಲದೆ ಇದ್ದು ಬಿಟ್ಟು ಬನ್ನಿ" ಎಂದು ಹೇಳಿದ್ದಳು.

ಅದರ ಮೇಲೆ ಅವರು ಒಂದು ಉದ್ದವಾದ ಲಕೋಟೆಯನ್ನು ತೆಗೆದುಕೊಂಡು, 'ಮದರಾಸು ಯಾತ್ರೆ ಫಂಡು' ಎಂದು ಅದಕ್ಕೆ ನಾಮಕರಣಮಾಡಿ ಅದರಲ್ಲಿ ಸ್ವಲ್ಪಸ್ವಲ್ಪ ಕೈಯ್ಯಲ್ಲಿ ನಿಲ್ಲುವ ಚಿಲ್ಲರೆಕಾಸುಗಳನ್ನೇ ಹಾಕಿ, ಸುಮಾರು ಮೂರು ವರ್ಷಗಳಲ್ಲಿ ಅರುವತ್ತುರೂಪಾಯಿ ಸೇರಿಸಿದರು. ಹೋಗಿ ಬರುವುದಕ್ಕೆ, ರೈಲು ಛಾರ್ಜಿಗೆ ಹತ್ತು ರೂಪಾಯಿಗಳಿಗಿಂತ ಹೆಚ್ಚಿಗೆ ಆಗುವುದಿಲ್ಲ. ಅವರ ಸಹೋದ್ಯೋಗಿಗಳಾಗಿದ್ದ ವಿಶ್ವನಾಥಯ್ಯರು ಮದರಾಸಿನಲ್ಲಿ ಅವರ ತಮ್ಮ ನರಸಿಂಹಯ್ಯರ ಮನೆಯಲ್ಲಿ ಖರ್ಚಿಲ್ಲದೆ ತಂಗಿರುವಂತೆ ಏರ್ಪಾಡು ಮಾಡಿಬಿಟ್ಟರು. ಆದ್ದರಿಂದ ಅಘೋರಮಯ್ಯರರಿಗೆ ಬಹಳ ಸಂತೋಷ. ನಲವತ್ತೈದು

ವರ್ಷದ ಪ್ರಪಂಚದ ಅನುಭವವೂ, ಹದಿನೆಂಟು ವರ್ಷ ವಯಸ್ಸಿನವನ ಉಲ್ಲಾಸವೂ ಸೇರಿ ರಜವನ್ನು ಕಳೆದವು.

ಮನಸ್ಸಿಗೆ ಬೇಕಾದುದನ್ನೆಲ್ಲಾ ನೋಡಿದರು. ವಿಧ ವಿಧವಾದ ಹೋಟಲುಗಳ ಅಡಿಗೆ ತಿಂಡಿಗಳೆಲ್ಲವನ್ನೂ ಪರೀಕ್ಷಿಸಿದರು. ಲೆಕ್ಕವಿಲ್ಲದಂತೆ ನಡೆಯುತ್ತಿದ್ದ ಗಾಯನ ಕಛೇರಿಗಳಲ್ಲಿ ಆರಿಸಿ, ಅತ್ಯುತ್ತಮವಾದ ಸಂಗೀತವನ್ನು ಅನುಭವಿಸಿದರು. ಆದರೆ, ವಿಶೇಷವಾಗಿ, ಸಿನಿಮಾ ಮಂದಿರಗಳಲ್ಲಿಯೇ ಹೊತ್ತು ಕಳೆದರು. "ಪುರುಷೋತ್ತಮಯ್ಯ" ನಟಿಸಿದ ಚಿತ್ರಗಳನ್ನು ಯಾವ ಯಾವ "ಥಿಯೇಟರು"ಗಳಲ್ಲಿ ತೋರಿಸುತ್ತಾರೆ ಎಂಬುದನ್ನು ಕಂಡು ಹಿಡಿದು, ಒಂದು ಚಿತ್ರವನ್ನೂ ಬಿಡದೆ ನೋಡಿ ತಮ್ಮ ಬಹಳ ದಿನದ ಮನೋರಥವನ್ನು ನೆರವೇರಿಸಿಕೊಂಡರು.

"ತಾರೆ" ಎನ್ನುವುದು ಪುರುಷೋತ್ತಮಯ್ಯ ಒಬ್ಬರಿಗೆ ಮಾತ್ರ ತಕ್ಕುದಾದ ಹೆಸರು ಎನ್ನುವುದು ಅವರ ಅಭಿಪ್ರಾಯ. ಪುರುಷೋತ್ತಮಯ್ಯರನ್ನು ಕರೆಯಲು ಅದಕ್ಕಿಂತ ಬೇರಾವ ಹೆಚ್ಚಿನ ಯೋಗ್ಯತೆಯ ಮಾತುಗಳೂ ಇಲ್ಲವೆಲ್ಲಾ ! ಎಂದು ಕೊರತೆ ಪಡುವರು. ಅವರ ಹೆಂಡತಿ, ಕೆಲವು ಸಮಯ ಅವರನ್ನು ಪ್ರಿಯವಾಗಿ ಹಾಸ್ಯಮಾಡುವುದುಂಟು. "ಇದೆಂತಹ ಭಕ್ತಿ ಇದು ! ದೇಶಭಕ್ತಿ ನಮಗೆ ಒಳ್ಳೆಯದು. ರಾಜಭಕ್ತಿ ಇಹಲೋಕದಲ್ಲಿ ಫಲವನ್ನು ಕೊಡುವುದು. ದೈವ ಭಕ್ತಿ ಇಹ ಪರ ಎರಡಕ್ಕೂ ಒಳ್ಳೆಯದು. ಇದೆಲ್ಲವನ್ನೂ ಬಿಟ್ಟು ಬಿಟ್ಟು, ನಿಮ್ಮನ್ನು ಒಂದು ತಾರಾಭಕ್ತಿ ಹಿಡಿದುಕೊಂಡು ಬಿಟ್ಟು ಅರ್ಥ ಕೂಡ ಅರ್ಥ ತಿಳಿಯದ ತೆಲಗು ಚಿತ್ರಗಳಿಗೆ ನಿಮ್ಮನ್ನು ಎಳೆಯುತ್ತದೆಲ್ಲಾ!" ಎಂದು. "ಸುಮ್ಮನೇ ಹೇಳಬೇಡ! ಮಾತುಗಳಿಗೆ ಅರ್ಥಗಳು ಒಂದೂ ಬಿಡದೆ ತಿಳಿಯಬೇಕೆ ? ಅವರು ನಟಿಸುವುದು ಸಾಲದೇ ? ಸನ್ಯಾಸಿಯಾಗಿ ಬರಲಿ. ರಾಜನಾಗಿ ನಟಿಸಲಿ. ಅವರ ಸಾಮರ್ಥ್ಯವೂ, ಗಾಂಭೀರ್ಯವು ಶಾಂತಿಯೂ ಉತ್ತಮ ಗುಣವೂ ಬೇರೆ ಯಾರಿಗೆ ಇದೆ ? ಒಂದೊಂದು ಸಲ ಅವರ ಚಿತ್ರವನ್ನು ನೋಡಿಬಿಟ್ಟು ಬರುವಾಗಲೂ, ದೇವಾಲಯಕ್ಕೆ ಹೋಗಿ ಬಂದಂತೆ ಇರುವುದು ನನ್ನ ಮನಸ್ಸು" ಎಂದು ಅವರು ಹೇಳುವರು. ಆಗ ಅವರ ಹೆಂಡತಿ ಹಾಸ್ಯ ಮಾಡುವುದನ್ನು ಬಿಟ್ಟು ಬಿಡುವರು.

ರಜಾದ ಕೊನೆಯದಿನ, ಅಘೋರಂ ಐಯ್ಯರ್‌ರು ಎಸ್ಪ್ಲನೇಡ್‌ನಲ್ಲಿ ನಡೆಯುತ್ತಿದ್ದವರು, ಒಂದು ಬಟ್ಟೆ ಅಂಗಡಿಯ ಮುಂದೆ ನಿಂತುಕೊಂಡರು. ಅಂಗ

ಡಿಯ ಬಾಗಿಲಿನಲ್ಲಿ ಕಟ್ಟಿದ್ದ ಹಲಗೆಯಲ್ಲಿ, ಒಂದು ಅಡಿ ಉದ್ದವುಳ್ಳ ಅಕ್ಷರಗಳಲ್ಲಿ, " ಸಂಕ್ರಾಂತಿಗೆ ಉಡುಗೊರೆ ತೆಗೆದುಕೊಡಿ " ಎಂದು ಜಾಹೀರಾತು ಬರೆದಿತ್ತು " ಅದೂ ಸರಿಯೇ. ಮನೆಗೆ ಹಿಂದಿರುಗಿ ಹೋಗುವಾಗ ಬರಿಯ ಕೈಯಲ್ಲಿ ಹೋಗುವುದೇ ? " ಎಂದು ಯೋಚಿಸಿ ಅಂಗಡಿಯೊಳಕ್ಕೆ ನುಗ್ಗಿದರು. ನುಗ್ಗಿದವರು, ಸ್ವಲ್ಪ ಸಂಕೋಚದಿಂದ ಯಾವುದೋ ಒಂದು ಮೂಲೆಯಲ್ಲಿ ನಿಂತರೋ ಇಲ್ಲವೋ, ಅಲ್ಲಿದ್ದ ಅಂಗಡಿಯ ಕೆಲಸಗಾರ ಉತ್ಸಾಹದಿಂದ, " ಬನ್ನಿ ! ಜರಿ ಉತ್ತರೀಯವನ್ನು ನೋಡುತ್ತಿದ್ದೀರೋ ? ಇಗೋ ಇಲ್ಲಿದೆ. 'ಲೇಟೆಸ್ಟ್ ಫ್ಯಾಷನ್'. ನೆನ್ನೆ ತಾನೇ ಹೊಸ ಸ್ಟಾಕು ಬಂದಿದೆ. ' ಪುರುಷೋತ್ತಮಯ್ಯ ಉತ್ತರೀಯ ' ಎಂದು ಇದರ ಹೆಸರು. " ಎಂದು ಹೇಳಿ ಅವರ ಎದುರಿನಲ್ಲೇ ಇದ್ದ ಬೀರುವಿನಿಂದ ಹಲವು ಉತ್ತರೀಯಗಳನ್ನು ತೆಗೆದು ಮೇಜಿನ ಮೇಲೆ ಹರಡಿದನು.

ಅವು ಒಳ್ಳೆಯ ತವಾಷೆಯಾದ ವಸ್ತ್ರಗಳಾಗಿದ್ದವು. ಅಂಚಿನಲ್ಲಿ ಸಾದಾ ಜರಿಗೆ ಬದಲಾಗಿ, ಸರಿಯಾದ ಅಕ್ಷರಗಳಲ್ಲಿ ಪುರುಷೋತ್ತಮಯ್ಯನ ಹೆಸರು ಮಾತ್ರವಲ್ಲ, ಅವರು ನಟಿಸಿದ್ದ ಹಲವು ಚಿತ್ರಗಳ ಹೆಸರುಗಳೂ ಪದೇ ಪದೇ ನೇಯಲ್ಪಟ್ಟಿದ್ದವು. ಅವುಗಳನ್ನು ನೋಡಿದಾಗ, ದೈವವೇ ತನ್ನನ್ನು ಆ ರೀತಿ ಕೈ ಹಿಡಿದು ಕರೆದುಕೊಂಡು ಬಂದಿತೆಂದು ಅಘೋರಂ ಐಯ್ಯರರಿಗೆ ತೋರಿತು. ಒಂದು ಉತ್ತರೀಯವನ್ನು ಆರಿಸಿದರು. ಬೆಲೆ ಇಪ್ಪತ್ತು ರೂಪಾಯಿ. ಅವರಲ್ಲಿ ಉಳಿದಿದ್ದ ರೂಪಾಯಿಯೂ ಅಷ್ಟೇಯೆ. ಆದರೆ ಆ ವಸ್ತ್ರವನ್ನು ತೆಗೆದುಕೊಂಡರೆ, ಮನೆಯವರಿಗೆ ಏನಾದರೂ ತೆಗೆದುಕೊಳ್ಳುವುದಕ್ಕೆ ದುಡ್ಡಿಲ್ಲ. ಭಕ್ತಿ ಒಂದು ಕಡೆ, ಕುಟುಂಬ ವಾತ್ಸಲ್ಯ ಒಂದು ಕಡೆ ಸೇರಿ ಅವರನ್ನು ಎಳೆದಾಡಿದವು.

ಕಡೆಗೆ, " ಇವತ್ತು ಒಂದು ದಿನ ಹೊರತು, ಬಾಕಿ ಆಯಸ್ಸು ಪೂರ್ತ ಕುಟುಂಬಕ್ಕೋಸ್ಕರವೇ ದುಡಿಯುವುದಿಲ್ಲವೇ ? ಈ ಒಂದು ಸಲ ಮಾತ್ರ ನನ್ನ ಒಬ್ಬನ ಸಂತೋಷಕ್ಕೋಸ್ಕರ ಇದನ್ನು ತೆಗೆದು ಕೊಂಡು ಪುರುಷೋತ್ತಮಯ್ಯರ ಬಳಿ ನೇರವಾಗಿ ಹೋಗಿ, ಇದನ್ನು ಸಮರ್ಪಿಸಿಬಿಟ್ಟು, ಅವರ ಮೂಲಕ ನಾನು ಇದುವರೆ ಅನುಭವಿಸಿರುವ ಆನಂದಕ್ಕೆ ಸರಿಯಾಗಿ ನನ್ನ ಗೌರವವನ್ನು ತಿಳಿಸಿದರೆ ಇದರ ನೆನಪೇ ನನಗೆ ಎಂದೆಂದಿಗೂ ಸಾಕು, ಈ ರೀತಿಯೆಲ್ಲಾ ಯೋಚಿಸಿ ಮನ

ಸ್ಸನ್ನು ದೃಢ ಪಡಿಸಿಕೊಂಡು, ಹಿಂದೆ ತಿಳಿಸಿದಂತೆ, ಆ ವಸ್ತ್ರವನ್ನು ತೆಗೆದುಕೊಂಡರು. ತೆಗೆದುಕೊಂಡ ನಂತರ ಜ್ಞಾಪಿಸಿಕೊಂಡರು. ಪುರುಷೋತ್ತಮಯ್ಯರವರ ಮನೆ ಎಲ್ಲಿದೆ, ಗೊತ್ತೆ ? ಎಂದು ಅಂಗಡಿಯ ಕೆಲಸಗಾರನನ್ನು ಸ್ವಲ್ಪ ಸಂಕೋಚದೊಡನೆ ಕೇಳಿದರು. ತನ್ನ ಉದ್ದೇಶವನ್ನು ಅವನೆಲ್ಲಿ ಊಹಿಸಿ ಬಿಡುವನೋ ಎಂದು ಭಯ ಅವರಿಗೆ !

" ರಾಯಪುರದಲ್ಲಿದೆ. ಏಕೆ ? ಅಲ್ಲಿಗೆ ಹೋಗಬೇಕೋ ? " ಅಘೋರಮಯ್ಯರವು ತಲೆ ಆಡಿಸಿದರು. ಅದಕ್ಕಿಂತ ಹೆಚ್ಚಿಗೆ ಅವರಿಗೆ ಧೈರ್ಯವಿರಲಿಲ್ಲ.

"ಇಲ್ಲಿದ್ದುಕೊಂಡು ಆ ಸ್ಥಳವನ್ನು ಹೇಳುವುದು, ಕಷ್ಟ. ಆದರೆ ಅದೊಂದೂ ಬೇಡ. ನೀವು ಸ್ವಲ್ಪ ಇಲ್ಲಿಯೇ ಇರಿ. ಅವರ ಮನೆಗೆ ಈ ಸಾಮಾನನ್ನು ಕಳುಹಿಸುತ್ತೇನೆ. ಅವರ ಆರ್ಡರಿನಂತೆ ನೇಯಿಸಿದ ಸೀರೆ ಇದು. 'ಪ್ಯಾಕ್' ಮಾಡಿ ತಯಾರಾಗಿದೆ. ಅವರ ಜವಾನ ಎದುರಿಗಿರುವ ಕಾರ್ಪೊರೇಷನ್ ಮಾರ್ಕೆಟ್‌ಗೆ ಹಣ್ಣು ತರುವುದಕ್ಕೆಹೋಗಿದ್ದಾನೆ. ಐದು ನಿಮಿಷದಲ್ಲಿ ಬಂದು ಬಿಡುತ್ತಾನೆ, ಇದನ್ನು ತೆಗೆದುಕೊಂಡು ಹೋಗುವುದಕ್ಕೆ. ಅವನ ಜತೆಯಲ್ಲಿ ನೀವು ಟ್ರಾಮಿನಲ್ಲೇ ಹೋಗಿ ಬಿಡಬಹುದು " ಎಂದು ಕೆಲಸಗಾರ ಹೇಳಿದ.

ಆ ಏರ್ಪಾಡಿನಂತೆಯೇ, ಕಾಲು ಗಂಟೆಯೊಳಗೆ ಅಘೋರಂ ಐಯರವರು ಪುರುಷೋತ್ತಮಯ್ಯರವರ ಮನೆಯನ್ನು ಹೋಗಿ ಸೇರಿದರು. ಟ್ರಾಮ್ ಬಂಡಿಯಿಂದ ಇಳಿಯುವುದಕ್ಕೆ ಮುಂಚೆ, ಜವಾನ ಹಣ್ಣಿನ ಕುಕ್ಕೆಯನ್ನೂ ಪ್ಯಾಕೆಟ್ಟನ್ನೂ ತೆಗೆದುಕೊಂಡು ಒಂದು ಮಾತು ಹೇಳಿದ. "ನೀವು ನನ್ನ ಜತೆಯಲ್ಲಿ ಕೂಡಲೇ ಬಂದುಬಿಡಬೇಡಿ. ಯಜಮಾನರು ಏನಾದರೂ ಅನ್ನುತ್ತಾರೆ. ನಾನು ಮೊದಲು ಒಳಕ್ಕೆ ಹೋಗಿ ಬಿಡುತ್ತೇನೆ " ಎಂದ.

ಅವನು ಹಾಗೆಯೇ ಮಾಡಿ ಒಳಕ್ಕೆ ಹೋದ. ಎರಡು ನಿಮಿಷಗಳ ನಂತರ ಮನೆಯಲ್ಲಿ ಒಂದು ಆರ್ತನಾದ ಕೇಳಿಸಿತು. ಹುಡುಗ ಅಳುವುದೂ, ಒಬ್ಬ ದೊಡ್ಡವರು ಅವನನ್ನು ಪಳಾರ್ ಪಳಾರ್ ಎಂದು ಹೊಡೆಯುತ್ತ ಬೈಯುತ್ತಿದ್ದುದೂ ಕೇಳಿಸಿತು. "........ಮಗನೇ, ಟವನಿಗೆ ಹೋಗಿ ಎರಡು ಸಾಮಾನು ತೆಗೆದುಕೊಂಡು ಬಾ ಎಂದರೆ ಅದಕ್ಕೆ ಎರಡು ಗಂಟೆಯೇನೋ ? ಹಲ್ಲು ಮುರಿದು ಹಾಕಿ ಬಿಡುತ್ತೇನೆ, ನೋಡು ! " ಮತ್ತೆ ಹೊಡೆತಗಳು. ಮತ್ತೆ ಬೈಗಳ.

ಅಘೋರಂ ಐಯರವರು ಗಾಬರಿಯಿಂದ ನಿಂತಿದ್ದರು. 'ಇಷ್ಟು ಕ್ರೂರಿ ಯಾದ ಮನುಷ್ಯನಿಗೆ ಪುರುಷೋತ್ತಮಯ್ಯ ತಮ್ಮ ಮನೆಯಲ್ಲಿರುವುದಕ್ಕೆ ಏಕೆ ಸ್ಥಳ ಕೊಟ್ಟರು?" ಎಂದು ಅವರು ಆಶ್ಚರ್ಯಪಟ್ಟರು. ಆ ಸಮಯಕ್ಕೆ ಸರಿಯಾಗಿ ಬಾಗಿಲಿನ ಕದ ತೆರೆದು, ಒಬ್ಬರು ಹೊರಕ್ಕೆ ಬಂದರು. ಅಘೋರಂ ಐಯರ ಗಾಬರಿ ಎಲ್ಲೆ ಮೀರಿತು. ಆ ಮನುಷ್ಯರನ್ನು ನೋಡಿದರೆ ಪುರುಷೋ ತ್ತಮಯ್ಯನಂತೆಯೂ ಇತ್ತು? ಆದರೆ ಅಲ್ಲವೆಂಬಂತೆಯೂ ಇತ್ತು. ಅಷ್ಟೇ ಉದ್ದ, ಅದೇ ಆಕಾರ, ಅದೇ ಮುಖಭಾವ. ಆದರೆ ಅಘೋರಂ ಐಯರರ ಮನಸ್ಸಿನಲ್ಲಿ ಹೊಕ್ಕಿದ್ದ ಒಂದು ಮನೋಹರವಾದ, ಶಾಂತಿ ಸ್ವರೂಪವಾದ ವದ ನಕ್ಕೆ ಬದಲಾಗಿ ಜೋಲುಬಿದ್ದ ಕೆನ್ನೆ ತುಟಿ, ಕೋಪದಿಂದ ವಿಕಾರವಾದ ಅಂಗಾಂಗವುಳ್ಳ ಒಂದು ಪ್ರಾಣಿಯನ್ನು ಕಂಡರು.

ಆದರೂ ಅವರಿಗೆ ಇದು ಒಂದು ವಿಧದಲ್ಲಿ ಪುರುಷೋತ್ತಮಯ್ಯರ ನೆನಪು ಕೊಟ್ಟಿತು.

" ಯಾರು ನೀನು ಎಲ್ಲಿಂದ ಬಂದೆ?" ಎಂದು ಆ ಮನುಷ್ಯರು, ತೆಲುಗರು ಮಾತನಾಡುವ ತಮಿಳಿನಲ್ಲಿ ಕೂಗಿದರು. ಅಘೋರಂ ಐಯರಿಗೆ ಗಾಬರಿ ಯಿಂದ ತಬ್ಬಿಬ್ಬಾಯಿತು.

" ನಾನು ಆ ಆಗ ತಿತಿತಿತಿರುವಾಲೂರು. ನಿಮ್ಮನ್ನು ನೋಡಿಕೊಂಡು ಹೋಗೋಣವೆಂದು ಬಂದೆ..............."

"ಏನೂ ನೋಡಬೇಕಾಗಿಲ್ಲ. ನಾನೇನೂ ಭಿಕ್ಷೆ ಹಾಕುವುದಿಲ್ಲ."

" ಇಲ್‌ಲ್‌ಲ್‌ಲ್ಲ......."

" ಮತ್ತೆ ಯಾತಕ್ಕೆ ಬಂದೆ? ಈ ವಿದ್ಯೆಯೆಲ್ಲಾ ನನಗೆ ಗೊತ್ತು. ನಿನ್ನ ಹಾಗೆ ನೂರು ಜನರನ್ನು ನೋಡಿ ಆಗಿದೆ. ಮೊದಮೊದಲು ಅದು ಇದು ಮಾತ ನಾಡುವುದು. ಕಡೆಗೆ ಮುಕ್ತಾಯ ಮಾತ್ರ ತಿರುಪೆಯಲ್ಲಿ ......."

" ನಾನು ಸತ್ಯವಾಗಿ ಹೇಳುತ್ತೇನೆ........"

" ಸರಿ ಸರಿ. ನನಗೆ ನಿನ್ನ ಜತೆಯಲ್ಲಿ ಮಾತನಾಡುವುದಕ್ಕೆ ಪುರಸತ್ತಿಲ್ಲ. ಹೋಗೋ ಅಂದರೆ, ಮರ್ಯಾದೆಯಾಗಿ ಹೋಗ್ತೀಯೋ ಇಲ್ಲವೋ?............ ಯಾರೋ ಅಲ್ಲಿ, ಆ ನಾಯನ್ನು ಬಿಚ್ಚಿಬಿಡು......."

ಅಘೋರಂ ಐಯರವರು ದುಃಖದಿಂದ ಹಿಂದಿರುಗಿದರು. ಪಾಪ! ಅವರ ಮನಸ್ಸು ಪಟ್ಟ ಪಾಡನ್ನು ಹೇಳಬೇಕೇ? ಆ ದಿನ ರಾತ್ರಿ ರೈಲು ಬಂಡಿ ಪ್ರಯಾಣದಲ್ಲಿ ಕಷ್ಟಪಡದೆ, ಮನೆಯಲ್ಲಿಯೇ ಸ್ವಸ್ಥವಾಗಿ ಅವರು ಒಂದು ವೇಳೆ ಮಲಗಿದ್ದರೂ, ಅವರಿಗೆ ಒಂದು ಗಳಿಗೆ ಕೂಡ ನಿದ್ದೆ ಬರುತ್ತಿರಲಿಲ್ಲ. 'ಇವನೇ ನಾನಿದುವರೆಗೆ ಪೂಜಿಸಿಕೊಂಡು ಬಂದ ಮಹಾನುಭಾವರು,?' ಎಂದು ನೆನೆಸಿ ಕೊಂಡಾಗಲೆಲ್ಲ ತಮ್ಮ ಅಜ್ಞಾನವನ್ನು ಕುರಿತು ಉಂಟಾದ ಅವಮಾನ ಅವರಿಗೆ ಸಹಿಸಲಾಗಲಿಲ್ಲ. ಅಷ್ಟೇ ಅಲ್ಲ. ಅಲ್ಲಿಯವರೆಗೆ ಪುರುಷೋತ್ತಮಯ್ಯನ ಚಿತ್ರಗಳನ್ನು ನೋಡಿದ್ದುದರಿಂದ ಹೊಂದಿದ್ದ ಆನಂದವನ್ನೆಲ್ಲಾ ಮತ್ತೆ ಕಕ್ಕಿಬಿಡಬೇಕೆನ್ನಿಸಿತು ಅವರಿಗೆ. ದೇವಾಲಯದಲ್ಲಿ ದೇವರಿಗೆ ಅರ್ಚನೆ ಮಾಡುತ್ತಿರುವಾಗ ನಮ್ಮ ಕಣ್ಣೆದುರಿಗೇ ಅದು ಒಂದು ಪಿಶಾಚಿಯಾಗಿಬಿಟ್ಟರೆ ನಮಗೆ ಹೇಗಾಗಬಹುದು?

ತಮ್ಮ ಹೆಂಡತಿಯೊಂದಿಗೆ ಇದನ್ನೆಲ್ಲ ಹೇಗೆ ಹೇಳುವುದು? ತಮ್ಮ ಭಕ್ತಿಯ ಬಗ್ಗೆ ಅವರ ಹೆಂಡತಿ ಹಾಸ್ಯ ಮಾಡುತ್ತಿದ್ದುದು ಅಘೋರಂ ಐಯರವರಿಗೆ ತಮಾಷೆಯಾಗಿಯೇ ಇದ್ದಿತು ಆದರೆ ಇದು ಹಾಸ್ಯಾಸ್ಪದ ವಿಷಯವಲ್ಲ, ಹುಡುಗಾಟದ ಸಮಾಚಾರವಲ್ಲ. ನೆನೆಸಿಕೊಂಡರೆ ದುಃಖ ಉಕ್ಕಿ ಬರುವ ವಿಚಾರ. ತನಗೆ ಆದ ಹುಣ್ಣನ್ನು, ಬಿಚ್ಚಿ ಹೆಂಡತಿಗೆ ತೋರಿಸುವುದು ಅವರಿಗೆ ಇಷ್ಟವಿರಲಿಲ್ಲ. ನಡೆದುದನ್ನು ಯಾರ ಬಳಿಯೂ ಹೇಳುವುದಿಲ್ಲವೆಂದೇ ಅವರು ತೀರ್ಮಾನಿಸಿಬಿಟ್ಟರು.

ಮಾರನೆಯ ದಿವಸ ಬೆಳಿಗ್ಗೆ ಮನೆ ಸೇರಿದೊಡನೆ ಹೆಂಡತಿಯ ಪ್ರಶ್ನೆಗಳಿಗೆ ಸಂಕ್ಷೇಪವಾಗಿ ಉತ್ತರ ಹೇಳಿಬಿಟ್ಟು, ಹಲ್ಲುತಿಕ್ಕುವ ನೆಪದಿಂದ ತಪ್ಪಿಸಿಕೊಂಡು ಹೋದರು. ಅವರ ಹೆಂಡತಿ ಅವರು ತಂದ ಮೂಟೆಯನ್ನು ಬಿಚ್ಚಿ ಸಾಮಾನುಗಳನ್ನು ತೆಗೆದಿಡತೊಡಗಿದಳು. ಪಟ್ಟಣದ ಜವಳಿ ಅಂಗಡಿಯ ಪೊಟ್ಟಣ ಅವಳ ಕಣ್ಣಿಗೆ ಬಿದ್ದೊಡನೇ, ಅದನ್ನೇ ಮೊದಲು ಹೊರಕ್ಕೆ ತೆಗೆದಳು. ಅದನ್ನು ಬಿಚ್ಚಿದ ಕೂಡಲೇ ಅವಳಿಗೆ ಉಂಟಾದ ಆನಂದ ಹೇಳಿತೀರದು. ಆ ಸಮಯಕ್ಕೆ ಸರಿಯಾಗಿ ಅಘೋರಂ ಐಯರವರು ಆ ಸ್ಥಳಕ್ಕೆ ತಿರುಗಿ ಬರಲು ಅವರನ್ನು ಒಂದು ಸಲ ಬಲವಾಗಿ ತಬ್ಬಿಕೊಂಡು, ಅನಂತರ ಅವರ ಕಾಲಿಗೆ ಸಾಷ್ಟಾಂಗ ನಮಸ್ಕಾರ ಮಾಡಿಬಿಟ್ಟಳು. "ಈ ತರಹದ ಸೀರೆ ಬೇಕೆಂತಲೇ ಎರಡು ವರ್ಷ

ಗಳಿಂದ ಆಶೆಪಟ್ಟುಕೊಂಡಿದ್ದೆ. ಅದನ್ನು ನಿಮಗೆ ಯಾರು ಹೇಳಿದರು ? ಈಗಿನ ಬೆಲೆ ೧೭೫ ರೂಪಾಯಿ ಹಾಕಿದೆಯಲ್ಲಾ, ನಿಮಗೆಲ್ಲಿಂದ ಬಂತು ಅಷ್ಟು ಹಣ?" ಎಂದು ಪ್ರೀತಿ ಸಂತೋಷಗಳ ಆಧಿಕ್ಯದಿಂದ ಕೇಳಿದಳು.

ಅಘೋರಂ ಐಯರವರು ಒಂದು ಕ್ಷಣ ಯೋಚಿಸಿದರು. ಅವರ ಹೆಂಡತಿ ತನ್ನ ಆನಂದದಲ್ಲಿ ಅದನ್ನು ನೋಡಲಿಲ್ಲ. ಅವಳ ಕಣ್ಣೆಲ್ಲ ಆ ಸೀರೆಯ ಮೇಲೆ!—ಆ ಒಂದು ಕ್ಷಣದಲ್ಲಿ ಅವರಿಗೆ ಎಲ್ಲವೂ ತಿಳಿದು ಹೋಯಿತು. 'ನೆನ್ನೆ ಟ್ರಾಮಿನಲ್ಲಿ ಹೋಗುವಾಗ, ಆ ಹುಡುಗ ತೆಗೆದುಕೊಂಡಿದ್ದ ಪೊಟ್ಟಣವೂ ನನ್ನ ಪೊಟ್ಟಣವೂ ಒಂದಕ್ಕೊಂದು ಬದಲಾಯಿಸಿಬಿಟ್ಟಿರಬೇಕು. ಎರಡಕ್ಕೂ ಅಂಗಡಿಯ ಹೆಸರು ಹಾಕಿದ್ದ ಒಂದೇ ರೀತಿಯ ಚೀಲ; ಎರಡರ ತೂಕವೂ ಗಾತ್ರವೂ ಒಂದೇ. ಆದ್ದರಿಂದಲೇ ಇಬ್ಬರೂ ಮೋಸಹೋದುದು. ಅದೆಲ್ಲಾ ಇರಲಿ. ಈಗ ಇವಳು ಸೀರೆ ಸಿಕ್ಕಿತು ಎಂದು ಇಷ್ಟು ಸಂತೋಷಪಟ್ಟುಕೊಂಡಿರುವಾಗ "ಅದು ಹಾಗಲ್ಲ ಕೈತಪ್ಪು ಸೀರೆ ನಿನಗಲ್ಲ" ಎಂದು ಹೇಳಿ ಅವಳ ಮನಸ್ಸನ್ನು ಹೇಗೆ ನೋಯಿಸುವುದು ? ಒಂದು ಸುಳ್ಳನ್ನೇ ಹೇಳಿಬಿಡಬೇಕೆಂದು ತೀರ್ಮಾನಿಸಿದರು.

[ಈ ರೀತಿ ಒಳ್ಳೆಯ ಉದ್ದೇಶ್ಯದಿಂದ ಹೇಳುವ ಸುಳ್ಳುಗಳನ್ನು, ಯಮಧರ್ಮರಾಯನೂ, ಚಿತ್ರಗುಪ್ತನೂ, ಯಾರ ಹೆಸರಿನಲ್ಲೂ ಬರೆಯುವುದಿಲ್ಲ. ಅವನ್ನೇ ಬೇರೆ ಒಂದು ಪುಸ್ತಕದಲ್ಲಿ ಬರೆದಿಡುತ್ತಾರೆ ಎಂಬುದೇ ಪ್ರತೀತಿ. ಪ್ರತೀತಿಯನ್ನು ನಾನು ಹೇಳಿದ್ದೇನೆ. ಆದರೆ, ಈ ವಿಷಯವಾಗಿ ಸತ್ಯವನ್ನು ಅರಿಯಬೇಕಾದರೆ ಸುಳ್ಳು ಹೇಳುವವರನ್ನೇ ಕೇಳಿ ತಿಳಿದುಕೊಳ್ಳಬೇಕು.]

ಆ ರೀತಿ ತೀರ್ಮಾನಿಸಿದ ಅಘೋರಂ ಐಯರವರು ತಮಗೆ ತಕ್ಷಣ ಬಾಯಿಗೆ ಬಂದ ಸುಳ್ಳನ್ನೇ ಹೇಳಿಬಿಟ್ಟರು. "ಹಣವೇ ? ನಾನು ಈ ಸೀರೆಗೆ ಹಣ ಕೊಡಲಿಲ್ಲ. ಒಂದು ಲಾಟರಿಯಲ್ಲಿ ಒಂದು ರೂಪಾಯಿ ಟಿಕೆಟ್ ತೆಗೆದುಕೊಂಡೆ. ಇದು ಸಿಕ್ಕಿತು" ಎಂದರು. ಇಷ್ಟು ಸ್ವಲ್ಪ ದುಡ್ಡಿಗೆ ಇಂತಹ ಭಾರಿ ಸೀರೆ ಸಿಕ್ಕಿತಲ್ಲ ಎಂದು ಅವರ ಹೆಂಡತಿ ಇಮ್ಮಡಿ ಸಂತೋಷಪಡುತ್ತಿರಲು, ತಾವು ವಿಶ್ವನಾಥಯ್ಯರ ಬಳಿಗೆ ಹೋಗಿ, ನಿಜವನ್ನು ತಿಳಿಸಿ, ತಮ್ಮ ಮನಸ್ಸಿನಲ್ಲಿದ್ದ ಕೊರತೆಯನ್ನು ನೀಗಿಕೊಂಡು, ಮುಂದೇನು ಮಾಡಬೇಕೆಂಬುದನ್ನು ಕೇಳಬೇಕೆಂದು ತೀರ್ಮಾನಿಸಿದರು. ಅದೇ ರೀತಿ, ಅವರ ಬಳಿ ಸಾಂಗೋ

ಪಾಂಗವಾಗಿ ನಡೆದುದೆಲ್ಲವನ್ನೂ ಹೇಳಿಬಿಟ್ಟು, "ನಾನು ಈಗ ಏನು ಮಾಡಲಿ ಹೇಳು" ಎಂದು ಕಳವಳದಿಂದ ಕೇಳಿದರು.

ವಿಶ್ವನಾಥಯ್ಯರಿಗೆ ಯಾವ ವಿಧವಾದ ಕಳವಳಕ್ಕೂ ಕಾರಣ ತೋರಲಿಲ್ಲ. "ಎಲೆಲ! ನೋಡುವುದಕ್ಕೆ ಬೆಕ್ಕಿನ ಮರಿ ಹಾಗಿದ್ದೀಯೆ! ಆದರೆ ಏನೇನು ಕೆಲಸ ಮಾಡಿಬಿಡುತ್ತೀಯ! ಅವನು ಬೇಡ ಬೇಡ ಅಂದರೂ ಕೂಡ, ನಿನ್ನಿಷ್ಟ ದಂತೆಯೇ ನೀನು ಆರಿಸಿದ "ಪ್ರಸೆಂಟ್" ನ್ನು ಅವನ ಕೈಯ್ಯಲ್ಲಿ ಸೇರಿಸಿ ಬಿಟ್ಟು, ಅದಕ್ಕೆ ಬದಲಾಗಿ ೧೭೫ ರೂಪಾಯಿನ ಒಂದು ಸೀರೆಯನ್ನು ಕಸಿದು ಕೊಂಡು ಬಂದು ಬಿಟ್ಟೆಯಲ್ಲಾ! ಮುಂದಿನ ಸಲ ಮದರಾಸಿಗೆ ಹೋದಾಗ ನನ್ನ ಹೆಂಡತಿಗೂ ಒಂದು ಸೀರೆ ಸಂಪಾದಿಸಿಕೊಂಡು ಬಾಪ್ಪಾ!" ಎಂದರು.

"ಹಾಸ್ಯಮಾಡುವುದು ಇರಲಿ. ವಾಸ್ತವವಾಗಿ, ನಾನು ಈಗ ಏನು ಮಾಡಬೇಕು ಎಂದು ನನಗೆ ಗೊತ್ತಾಗಿಲ್ಲ. ಅದನ್ನು ಹೇಳು!" ಎಂದು ಹಲು ಬಿದರು ಐಯರ್.

"ನೀನು ಮಾಡುವುದೇನು! ಭಗವಂತನೇ ನಿನ್ನ ಕಣ್ಣು ತೆರೆದ. ತಾರೆ ಯಂತೆ ತಾರೆ! ಮುಖಕ್ಕೆ ಬಳಿದುಕೊಂಡ ಪೌಡರ್ ಅರ್ಧ, ಎಷ್ಟೋ ಡೈರೆ ಕ್ಟರುಗಳು ತಮ್ಮ ಜೀವ ಸವೆಸಿ ಅವನಿಗೆ ಉರು ಹಾಕಿಸಿದ ಮಾತುಗಳು ಅರ್ಧ ಇಷ್ಟರಿಂದ ಒಂದು ಅಯೋಗ್ಯ ಪ್ರಾಣಿ, ಮಿನುಗುತ್ತಾ, ನಿನ್ನ ಮನಸ್ಸನ್ನು ಇಷ್ಟು ದಿವಸಗಳಿಂದ ಭೂತ ಹಿಡಿದ ಹಾಗೆ ಹಿಡಿದುಕೊಂಡಿತ್ತು. ನಿನ್ನ ಅವನು ಎಂತಹ ಆಸಾಮಿ ಎಂಬುದು ನಿನಗೆ ಈಗ ತಿಳಿದು ಹೋಯಿತು. ನೀನೇ ಸೃಷ್ಟಿಸಿದ್ದ ಒಬ್ಬ ಮನುಷ್ಯ ಸತ್ತುಹೋದ ಎಂದು ತಿಳಿದುಕೊಂಡು ನೀರಿನಲ್ಲಿ ಮುಳುಗು ಹಾಕಿ ಬಿಡು. ಈ ಹುಚ್ಚು ತೊಲಗಲಿ, ರೈಲು ಬಂಡಿಯ ಮೈಲಿಗೆ ಯೂ ತೊಲಗಲಿ' ಎಂದು ಸಂತೋಷದಿಂದ ಬುದ್ಧಿ ಹೇಳಿದರು.

"ಸರಿ, ನೀನು ಹೇಳುವ ಹಾಗೆಯೇ ಅವನಿಗೋಸ್ಕರ ಸ್ನಾನ ಮಾಡಿ ಬಿಡುತ್ತೇನೆ. ಆದರೆ ಸೀರೆಯ ವಿಚಾರಕ್ಕೆ ಏನು ಮಾಡುವುದು? ಉತ್ತರೀ ಯದ ಬೆಲೆಯನ್ನು ಕಳೆದರೂ, ಇನ್ನೂ ಅವನಿಗೆ ೧೫೦ ರೂಪಾಯಿಗೆ ಮೇಲೆ ನಷ್ಟವಾಗಿದೆಯಲ್ಲಾ, ಅಂಗಡಿಯವನನ್ನು ಸುಮ್ಮನೆ ಬಿಡುತ್ತಾನೆಯೇ ಕೇಳುತ್ತಾ ನಲ್ಲಾ, ಆಗ ಎಲ್ಲಾ ಬಹಿರಂಗವಾಗಿ ಹೋಗಿ ಬಿಡುವುದಿಲ್ಲ?

‘ ಹಾಗೇನೂ ಇಲ್ಲ. ನಡೆದುದನ್ನು ಯಾರೂ ಊಹಿಸಲಾರರು. ನಿನ್ನ ಸುಳ್ಳು ಕೂಡ ಯಾರಿಗೂ ತಿಳಿಯದು. ಆ ಅಂಗಡಿಯವನು ನನಗೆ ಚೆನ್ನಾಗಿ ಗೊತ್ತು. ಒಬ್ಬನಲ್ಲ, ಮೂರು ಪುರುಷೋತ್ತಮಯ್ಯರುಗಳಿಗೆ ಜವಾಬು ಹೇಳಬಲ್ಲ ಬೇಕಾದರೆ. ಕಳುಹಿಸಿದ ಸೀರೆಯನ್ನು ಇಟ್ಟುಕೊಂಡು ಬಿಟ್ಟು ಅವನೇ ಸುಳ್ಳು ಹೇಳುತ್ತಾನೆ ’ ಎಂದು ಯಾವ ಕೋರ್ಟಿನಲ್ಲಿ ಬೇಕಾದರೂ ಸಾಧಿಸುತ್ತಾನೆ. ನೀನು ಅದರ ವಿಚಾರ ಬಿಡು.”

“ ಹಾಗಾದರೆ ನ್ಯಾಯದಂತೆ ನಾನು ಪುರುಷೋತ್ತಮಯ್ಯರಿಗೆ ೧೫೫ ರೂಪಾಯಿ ಕಳುಹಿಸಬೇಡವೇ ? ಸಾಲವಾದರೂ ಮಾಡಿ ? ಬೇರೆ ಏನೂ ಬರೆಯದೆ ಸುಮ್ಮನೆ ಒಂದು ಮನಿಆರ್ಡರ್ ಕಳುಹಿಸಿ ಬಿಟ್ಟರೆ........”

“ಇಲ್ಲಿ ನೋಡು ಅಘೋರಮ್, ಈ ರೀತಿ ದೈವವೇ ಕೈ ಹಾಕಿ, ಒಂದು ಕೆಲಸವನ್ನು ಮಾಡಿರುವಾಗ, ನೀನು ಮಧ್ಯೆ ಬಂದು ನಿನ್ನ ನ್ಯಾಯವನ್ನು ಮಾತನಾಡಿದರೆ ಫಲ ಏನು ಗೊತ್ತೋ ? ನಡೆದುದೆಲ್ಲವನ್ನೂ ಹೋಗಿ ನಿನ್ನ ಹೆಂಡತಿಯ ಹತ್ತಿರ ಹೇಳಿಬಿಡುತ್ತೇನೆ. ಇನ್ನು ಮೇಲೆ, ನಿನ್ನ ಆಯಸ್ಸು ಪೂರ್ತ ನೀನು ಹೇಳುವುದೊಂದನ್ನೂ ನಂಬಲಾರಳು ! ” ಎಂದು ಹೆದರಿಸಿ ತಟಕ್ಕನೆ ಹೊಟ್ಟೆಯನ್ನು ಹಿಡಿದು ಕೊಂಡು, ‘ಓಹೋಹೋ’ ಎಂದು ತಡೆಯಲಾರದೆ ಗಟ್ಟಿಯಾಗಿ ನಗತೊಡಗಿದರು.

“ ನಿನಗೇನು ಹುಚ್ಚು ಹಿಡಿಯಿತೇನೋ ? ” ಎಂದು ಸ್ವಲ್ಪ ಕೋಪದಿಂದಲೇ ಅಘೋರಮಯ್ಯರು ಕೇಳಿದರು.

“ ಹುಚ್ಚೇನೂ ಇಲ್ಲವಪ್ಪ ” ಎಂದು ವಿಶ್ವನಾಥಯ್ಯರು ತಮ್ಮ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ ವಿವರಿಸಿದರು. “ ಇಷ್ಟೇ ಸಮಾಚಾರ. ಆ ಅಯೋಗ್ಯ ಮನುಷ್ಯ, ಜವಾನನ್ನು ಹೊತ್ತುಮಾಡಿದ್ದಕ್ಕಾಗಿ ಬೈದು ಹೊಡೆದುದಕ್ಕೂ, ನಿನ್ನನ್ನು ಮಾತನಾಡುವುದಕ್ಕೂ ಬಿಡದೆ ಓಡಿಸಿದ್ದಕ್ಕೂ ಕಾರಣ ತಿಳಿಯಿತೇ ? ಅವನು ನಿನ್ನ ಪೊಟ್ಟಣವನ್ನು ತೆಗೆದುಕೊಂಡು ಓಡುತ್ತಾ ಹೋದುದು, ಯಾವಳೋ ಒಬ್ಬಳು ಸ್ತ್ರೀಯೊಡನೆ ಪ್ರಿಯವಾರ್ತೆಗಳನ್ನಾಡಿಬಿಟ್ಟು ಅದನ್ನು ಆಡಂಬರದಿಂದ ಅವಳಿಗೆ ಕೊಡುವುದಕ್ಕೇನೆ. ಅವಳೂ ಅದನ್ನು ಆಸೆಯಿಂದ ಬಿಚ್ಚಿರುತ್ತಾಳೆ. ಆಗ, ಅದರಲ್ಲಿ ‘ಸ್ಪೆಷಲ್ ಆರ್ಡರ್’ನ ಸಿಲ್ಕು ಸೀರೆಗೆ ಬದಲಾಗಿ ಒಂದು ಬಿಳಿಯ, ಬರಿಯ ಅವನನ್ನೇ ಹೊಗಳುವ ಅವನ ಹೆಸರನ್ನೇ

ಬರೆದಿರುವ ಬಟ್ಟೆಯನ್ನು ಕಂಡಾಗ, ಅವಳು ಅವನನ್ನು ಏನೇನು ಅಂದಿರಬಹುದು? ಅವಳೇನೂ ಅವನ ಜತೆಯಲ್ಲಿ ಸರಿಯಾಗಿದ್ದಿರಲಾರಳೆಲ್ಲ! ಈ ದೃಶ್ಯವನ್ನು ಯಾವ ಸ್ಟುಡಿಯೋವೂ ತೆಗೆದುಕೊಳ್ಳದೆ ಹೋಗಿಬಿಟ್ಟತೆಲ್ಲಾ!" ಎಂದು ಮತ್ತೆ ಮತ್ತೆ ಬಿದ್ದು ನಗತೊಡಗಿದರು.

ಆ ವೈಭವವನ್ನು ತಮ್ಮ ಮನಸ್ಸಿನಲ್ಲಿ ಕಲ್ಪಿಸಿಕೊಂಡಾಗ ಅಘೋರ ಮಯ್ಯರವರಿಗೂ ತಡೆಯಲಾರದಂತಹ ನಗು ಬಂದು, ಮನಶ್ಯಾಂತಿಯೊಡನೆ ಹೆಂಡತಿಯ ಬಳಿಗೆ ಹಿಂದಿರುಗಿದರು. 'ತಾರಾಭಕ್ತಿಯಿಂದ ಯಾರಿಗೆ ಏನು ಲಾಭ' ಎಂದು ಅವಳು ಆಗಾಗ್ಗೆ ಕೇಳುತ್ತಾಳಲ್ಲಾ, 'ಇದೋ ನೋಡು ಅದರಿಂದಲೇ ನಿನಗೆ ಈ ಸೀರೆ ಸಿಕ್ಕಿತು!' ಎಂದು ಹೇಳಿ ತೋರಿಸಿದರೆ ಎಷ್ಟುತೃಪ್ತಿ ಮನಸ್ಸಿಗೆ! ನಿಜವನ್ನು ಹೇಳುವುದಕ್ಕಾಗದೆ, ಸುಳ್ಳು ಹೇಳಿಬಿಟ್ಟೆನಲ್ಲಾ ಎನ್ನುವುದೇ ಅವರ ಒಂದೇ ಕೊರೆ.

---

# ಅರ್ಧ ಮುಗಿದ ಕತೆಗಳು

## [೨]

## ಸ್ವಯಂವರ

### ಮೊದಲನೆಯ ಭಾಗ

ಮದರಾಸಿನಿಂದ ಡೆಲ್ಲಿಗೆ ಹೋಗುವ ರೈಲು ಗಾಡಿಯಲ್ಲಿ ಇಂದು ಬೆಳಿಗ್ಗೆ ಕುಳಿತರೆ, ನಾಳೆ ಬೆಳಿಗ್ಗೆ ವರ್ಧಾವನ್ನು ಸೇರಬಹುದು. ಅಲ್ಲದೆ ನಮ್ಮ ಪ್ರಯಾಣಿಕ "ಈಗ ಡಿಲ್ಲಿಯಲ್ಲಿ ಅವಸರದ ಕೆಲಸ ಯಾವುದೂ ಇಲ್ಲ. ಈ ಸುತ್ತಮುತ್ತಲ ಪುಣ್ಯಕ್ಷೇತ್ರಗಳನ್ನು ದರ್ಶನ ಮಾಡಿಕೊಂಡು ನಾಲ್ಕು ದಿನ ಕಳೆದು ಡಿಲ್ಲಿಗೆ ಹೋದರೆ ಆಯಿತು" ಎಂದು ಯೋಚಿಸಿ ಹಾಗೆಯೇ ಮಾಡುವುದಾದರೆ ಅವನಿಗೆ ಒಳ್ಳೆಫಲ ಉಂಟಾಗುವುದು. ವರ್ಧಾದಲ್ಲಿ ರೈಲು ಬದಲಾಯಿಸಿ ಬೊಂಬಾಯಿಗೆ ಹೋಗುವ ಗಾಡಿ ಏರಿ ಸುಮಾರು ನೂರು ಮೈಲಿ ಪಶ್ಚಿಮಕ್ಕೆ ಹೋದರೆ ರೈಲು ದಾರಿಯಿಂದ ಸ್ವಲ್ಪ ದೂರದಲ್ಲಿ ಪೂರ್ಣಾ ಎಂಬ ನದಿ ರೈಲಿನ ಜತೆಯಲ್ಲಿಯೇ ಓಡಿ ಬರುತ್ತಿರುವುದು ಕಾಣುವುದು. ಭಾರತದಲ್ಲಿ ಈ

ಹೆಸರಿನ ನದಿಗಳು ಮೂರು ಇವೆ. ಅವುಗಳಲ್ಲೆಲ್ಲ ಇದೇ ಪ್ರಸಿದ್ಧವಾದುದು ಹಿಂದಲ ಕಾಲವಲ್ಲಿ ಇದಕ್ಕಿದ್ದ ಹೆಸರು " ಪಯೋಷ್ಣಿ "

ಪಾಂಡವರು ತಮ್ಮ ವನವಾಸದಲ್ಲಿ ಈ ನದೀ ತೀರಕ್ಕೆ ಬಂದರು. ಆಗ ಈ ನದಿಯ ಮಹಾತ್ಮೆಯನ್ನೂ ಅದರ ಸಂಬಂಧವಾದ ಒಂದು ಸೊಗಸಾದ ಕತೆಯನ್ನೂ ಅವರಿಗೆ ಲೋಮಶ ಋಷಿಗಳು ಹೇಳಿದ್ದಾರೆ. ಅದು ಮಹಾಭಾರತದಲ್ಲಿ ವನಪರ್ವದ ೧೨೩ ನೇ ಅಧ್ಯಾಯದಲ್ಲಿದೆ.

" ಆ ನದಿಯ ತೀರದಲ್ಲಿ ಚವನಋಷಿ ಎಂಬುವರು ಬಹುಕಾಲ ಕಠೋರ ತಪಸ್ಸನ್ನು ಮಾಡಿಕೊಂಡಿದ್ದರು.ಅವರ ಸುತ್ತ ಹುತ್ತ ಬೆಳೆದುಕೊಂಡು ಬಿಟ್ಟಿತು. ಎರಡು ಕಂಡಿಗಳಲ್ಲಿ ಕಣ್ಣು ಮಾತ್ರ ಕಾಣುತ್ತಿದ್ದಿತು. ಒಂದು ದಿನ ಸರ್ಯಾತಿ ಎಂಬ ರಾಜ, ತನ್ನ ಮಗಳು ಸುಕನ್ಯೆಯನ್ನು ಕರೆದುಕೊಂಡು ಈ ನದಿಯಲ್ಲಿ ಸ್ನಾನಮಾಡುವುದಕ್ಕಾಗಿ ಬಂದನು. [ಈ ಸ್ಥಳದಲ್ಲಿ ನಾನು ಒಂದೇ ಒಂದು ಮಾತನ್ನು ಸೇರಿಸಬಯಸುತ್ತೇನೆ. ಲೋಮಶ ಋಷಿ ಸುಕನ್ಯೆಯ ಹೆಸರನ್ನು ಹೇಳುವುದಕ್ಕಿಂತ ಮುಂಚಿತವಾಗಿಯೇ ಆಕೆಯ ಹುಬ್ಬುಗಳ ಸೌಂದರ್ಯವನ್ನು ವರ್ಣಿಸುತ್ತಾರೆ.] ನದಿಯ ತೀರದಲ್ಲಿ ತಿರುಗುತ್ತಾ ಬಂದ ಸುಕನ್ಯಾ ಗೆದ್ದಲು ಹತ್ತಿದ ಮರದ ದಿಂಡಿನಂತಿದ್ದ ಚವನರನ್ನು ಕಂಡಳು. " ಇದೇನು ಎರಡು ತೂತುಗಳಲ್ಲಿ ಏನೋ ಕಾಣುತ್ತಿದೆಯಲ್ಲಾ " ಎಂದು ಆಶ್ಚರ್ಯದಿಂದ ಒಂದು ನೀಳವಾದ ಮುಳ್ಳನ್ನು ತೆಗೆದುಕೊಂಡು ಚವನರ ಕಣ್ಣುಗಳನ್ನು ಚುಚ್ಚಿದಳು. ಕೂಡಲೇ ಅವರಿಗೆ ಬಹಳ ಕೋಪ ಬಂದು ಬಿಟ್ಟಿತು. ಅದರ ಫಲವಾಗಿ ಸರ್ಯಾತಿ ರಾಜನ ಪರಿವಾರಕ್ಕೆಲ್ಲ ಒಂದು ತೀವ್ರವಾದ ಉದರ ಶೂಲೆಯುಂಟಾಗಿ ಎಲ್ಲರಿಗೂ ಹೊಟ್ಟೆ ಉಬ್ಬಿ ಬಿಟ್ಟಿತು.

ರಾಜನಿಗೆ ದುಃಖವುಂಟಾಯಿತು. ಈ ಅನಾಹುತಕ್ಕೆ ಕಾರಣವೇನೆಂದು ಒಬ್ಬೊಬ್ಬನನ್ನೂ ವಿಚಾರಿಸಿದನು. ಆಗ ಸುಕನ್ಯೆ ತಾನಾಗಿಯೇ ಇದ್ದ ಸಂಗತಿ ತಿಳಿಸಿ, ಫಳ ಫಳನೆ ಹೊಳೆದುದನ್ನು ಮಿಂಚಿನ ಹುಳುವೆಂದು ಭಾವಿಸಿ ಮುಳ್ಳಿನಿಂದ ಚುಚ್ಚಿದುದಾಗಿ ಒಪ್ಪಿಕೊಂಡಳು.

ರಾಜನು ಕೂಡಲೇ ಚವನರಲ್ಲಿಗೆ ಓಡಿಹೋಗಿ ನಡೆದುದನ್ನು ಅರಿಕೆ ಮಾಡಿ ಕ್ಷಮೆ ಯಾಚಿಸಿದನು.

ಅದಕ್ಕೆ ಚವನ ಋಷಿಗಳು "ಸರಿ. ಆದರೆ ಈ ಹೆಣ್ಣು ತನ್ನ ಅಹಂಕಾರದಿಂದಲ್ಲವೇ ನನ್ನನ್ನು ಹೀಗೆ ಧಿಕ್ಕರಿಸಿದ್ದು. ಇವಳನ್ನೇ ನಾನು ವಿವಾಹಮಾಡಿಕೊಂಡು, ಅನಂತರ ಇವಳನ್ನು ಮನ್ನಿಸುತ್ತೇನೆ" ಎಂದರು.

ರಾಜ ಹಾಗೆಯೇ ಒಪ್ಪಿ, ಹೆಣ್ಣನ್ನು ಋಷಿಗೆ ದಾನಮಾಡಿದನು. ಅವನ ಪರಿವಾರ ಮೊದಲಿನಂತೆ ಸೌಖ್ಯ ಹೊಂದಿತು. ರಾಜ ಅವರೊಡನೆ ಅರಮನೆಯನ್ನು ಸೇರಿದನು.

ಸುಕನ್ಯಾ, ತನ್ನ ಗಂಡನೊಂದಿಗೆ ಸಂತೋಷದಿಂದ ಕಾಲ ಕಳೆಯುತ್ತಿದ್ದಳು. ಒಂದು ದಿನ ದೇವಲೋಕದಿಂದ ಇಬ್ಬರು ಅಗ್ನಿದೇವತೆಗಳು ಆಶ್ರಮಕ್ಕೆ ಬಂದರು. ಸುಕನ್ಯೆಯ ಅದ್ವಿತೀಯ ಲಾವಣ್ಯವನ್ನು ಕಂಡು ಆಶ್ಚರ್ಯಪಟ್ಟು ಅವಳ ಚರಿತ್ರೆಯನ್ನು ಅವಳಿಂದಲೇ ತಿಳಿದರು. ಅನಂತರ "ನಿನಗೆ ಸಮನಾದವರು ದೇವಲೋಕದಲ್ಲಿ ಸಹ ಯಾರೂ ಇಲ್ಲವಲ್ಲ. ಈ ಮುದಿಯನೊಂದಿಗೆ ಆನಂದವಿಲ್ಲದೆ ಯಾಕೆ ಬಾಳಬೇಕು ? ಅವನನ್ನು ಬಿಟ್ಟು ನಮ್ಮಲ್ಲಿ ಒಬ್ಬರನ್ನು ಪತಿಯನ್ನಾಗಿ ಸ್ವೀಕರಿಸು " ಎಂದರು.

ಆಕೆ " ನಾನು ಅಂತವಳೆಂದು ಭಾವಿಸಬೇಡಿ. ಗಂಡನಲ್ಲಿ ನಾನು ಪೂರ್ಣ ಪ್ರೇಮವುಳ್ಳವಳು " ಎಂದು ಬದಲಿತ್ತು ಅವರ ಮಾತನ್ನು ತಿರಸ್ಕರಿಸಿದಳು.

ಆದರೆ ಅವರು ಅಷ್ಟಕ್ಕೆ ಸುಮ್ಮನಾಗಲಿಲ್ಲ. " ಹಾಗೆ ಹೇಳಬೇಡ; ನಿನ್ನ ಗಂಡನನ್ನು ಅತ್ಯಂತ ಸುಂದರನಾದ ಯುವಕನನ್ನಾಗಿ ಬದಲಾಯಿಸುವೆವು. ಅನಂತರ ನಾವು ಮೂರು ಮಂದಿಯ ಪೈಕಿ ಯಾರು ಇಷ್ಟವೋ ಅವರನ್ನು ಪತಿಯನ್ನಾಗಿ ಆರಿಸಿಕೋ. ಇದಕ್ಕೆ ಒಪ್ಪಿಗೆಯೇ ಎಂದು ನಿನ್ನ ಪತಿಯನ್ನು ಕೇಳು".

ಆಕೆ ಆ ಮಾತುಗಳನ್ನು ಚವನರಿಗೆ ತಿಳಿಸಲು ಅವರು ಹಾಗೆಯೇ ಆಗಲೆಂದು ಒಪ್ಪಿದರು.

ಅನಂತರ ಅಶ್ವಿನೀ ದೇವತೆಗಳು ಚವನರಿಗೆ, ಆ ನದಿಯಲ್ಲಿ ಒಂದೆಡೆ ಸ್ನಾನಮಾಡುವಂತೆ ಹೇಳಿದರು. ತಾವೂ ಕೂಡಲೇ ಅಲ್ಲಿಯೇ ಮುಳುಗಿದರು. ಮೂವರೂ ಒಂದೇ ಸಮನಾದ ಕಣ್ಣು ಕೋರೈಸುವ ಸೌಂದರ್ಯದೊಂದಿಗೆ ಹೊರಬಂದರು. ಮೂವರ ರೂಪೂ ಒಂದೇ ಸಮನಾಗಿತ್ತು. ಆಗ ಸುಕನ್ಯಾ ತನ್ನ ಮನಸ್ಸನ್ನೂ ಬುದ್ಧಿಯನ್ನು ಸರಿಮಾಡಿ ಉಪಯೋಗಿಸಿ ಚವನರು ಯಾರು ಎಂಬುದನ್ನು ಕಂಡು ಹಿಡಿದು ಬಿಟ್ಟಳು. ಅಲ್ಲಿಂದ ಮುಂದೆ ಆ ದಂಪತಿಗಳು

ದೇವತೆಗಳಂತೆಯೇ ಆನಂದದಿಂದ ಜೀವಿಸಿಪರು. ತಮಗೆ ಯವ್ವನವನ್ನು ಸಂಪಾದಿಸಿಕೊಟ್ಟುದಕ್ಕಾಗಿ ಚವನರು ಅಶ್ವಿನೀ ದೇವತೆಗಳ ಉಪಕಾರವನ್ನು ಕೊಂಡಾಡಿದರು. ಅವರನ್ನು ಅಲಕ್ಷ್ಯದಿಂದ ಕಾಣುತ್ತಿದ್ದ ದೇವೇಂದ್ರನಿಗೆ ಅವರಲ್ಲಿ ಗೌರವ ಬರುವಂತೆ ಮಾಡಿಕೊಟ್ಟರು.

ಮಹಾಭಾರತದಲ್ಲಿರುವ ವೃತ್ತಾಂತ ಹೀಗೆ ಇದೆ. ಆದರೆ ಆ ಸಂಗತಿ ನಡೆದ ಈಚೆಗೆ ಪಯೋಷ್ಣಿ ನದಿಯಲ್ಲಿ ದಿನದಿನವೂ ಲಕ್ಷಾಂತರ ಜನ ಸ್ನಾನಮಾಡುತ್ತಿದ್ದಾರೆ. ಒಬ್ಬರಿಗೂ ಮತ್ತೆ ಯವ್ವನ ದೊರೆತ ಪ್ರಸ್ತಾಪವೇ ಇಲ್ಲ. ಪಂಚ ಪಾಂಡವರಿಗೆ ಸಹ ಈ ಫಲ ದೊರಕಿತೆಂದು ಹೇಳಿಲ್ಲ. ಲೋಮಶಋಷಿಗಳು ಸಹ ತಮಗೆ ಮತ್ತೆ ಯವ್ವನ ಬಂದುದಾಗಿ ಹೇಳಿಕೊಳ್ಳಲಿಲ್ಲ.

ಆಯುರ್ವೇದ ಗ್ರಂಥಿಗಳನ್ನು ನೋಡಿದರೆ ಅವುಗಳಲ್ಲಿ, ದೇವಲೋಕದ ವೈದ್ಯರಾದ ಅಶ್ವಿನೀ ದೇವತೆಗಳು ಚವನರಿಗಾಗಿ ಚವನಪ್ರಾಶ (ಪ್ರಾಶ ಎಂದರೆ ಆಹಾರ) ಎಂಬ ಲೇಹ್ಯವನ್ನು ಮಾಡಿಕೊಟ್ಟರೆಂದೂ, ಅದನ್ನು ಸೇವಿಸಿದುದರಿಂದ ರಿಂದಲೇ ಅವರಿಗೆ ಯವ್ವನವುಂಟಾಯಿತೆಂದೂ ಹೇಳಿದೆ. ಆದರೆ ಈ ಕಾಲದಲ್ಲಿ ಚವನ ಪ್ರಾಶ ಎಂಬ ಔಷಧಿ ಕೆಮ್ಮಲು ಮುಂತಾದ ವ್ಯಾಧಿಗಳನ್ನು ಗುಣಪಡಿಸುವುದೇ ಹೊರತು, ಅದನ್ನು ವೀಸೆ ವೀಸೆಯಾಗಿ ನುಂಗಿದವರಿಗೂ ಸಹ ವಯಸ್ಸನ್ನು ಕಡಿಮೆಮಾಡಿ ಯವ್ವನವನ್ನು ಕೊಟ್ಟಿತೆಂಬುದನ್ನು ಕಂಡುದೂ ಇಲ್ಲ, ಕೇಳಿದುದೂ ಇಲ್ಲ.

ಅಲ್ಲದೆ ಪರೋಪಕಾರಿಗಳೆಂದು ಹೆಸರು ಪಡೆದ ಅಶ್ವಿನೀ ದೇವತೆಗಳು ಒಬ್ಬ ಸ್ತ್ರೀಯ ಹತ್ತಿರ ಹೋಗಿ ನಿನ್ನ ಗಂಡನನ್ನು ತ್ಯಜಿಸಿಬಿಡು ಎಂದು ಹೇಳಿದರೆಂದರೆ, ಅದು ಒಪ್ಪುವ ಮಾತೇ? ಅಥವಾ ಮುದಿ ಗಂಡನನ್ನು ತಿರಸ್ಕರಿಸುವಂತೆ ಹೆಂಡತಿಯನ್ನು ಒಪ್ಪಿಸಲು, ಆ ಗಂಡನನ್ನು ಯುವಕನನ್ನಾಗಿಸುವುದೇ ದಾರಿ? ಸುಕನ್ಯೆಗೆ ತಾನೇ ಅಷ್ಟು ಹುಡುಗಾಟದ ಬುದ್ಧಿ ಇರಬಹುದೆ? ವಿವಾಹದ ವಯಸ್ಸಾದ ಒಬ್ಬ ಯುವತಿಗೆ, ಮಿಣುಕು ಹುಳುಗಳನ್ನು ಕಂಡ ಒಡನೇ ಅದನ್ನು ಮುಳ್ಳಿನಿಂದ ಚುಚ್ಚಬೇಕೆನ್ನಿಸುವುದೆ?

ಇಂತಹ ಅನೇಕ ಸಂದೇಹಗಳು ಉಂಟಾಗುತ್ತವೆ. ಆದರೆ ಪುರಾಣ ಸುಳ್ಳಾಗಿರಲಾರದು. ಇವುಗಳಿಗೆಲ್ಲಾ ಸರಿಯಾಗಿ ಸಮಾಧಾನಗಳು ಇದ್ದೇ

ಇರಬೇಕು. ಅದೇನೆಂದು ತಿಳಿಯದೆ ನಾನು ಸಂಕಟಪಟ್ಟುಕೊಂಡಿದ್ದ ಸಮಯದಲ್ಲಿ, ಓಹಿಯೋ ಸರ್ವಕಲಾಶಾಲೆಯ ಸಂಸ್ಕೃತ ಪಂಡಿತರಾದ ಅಲೋಯ ಎಂ. ಪಿಂಪಿಲ್ ಎಂಬುವರು, ನಮ್ಮ ದೇಶದ ಪುರಾತನ ಸಂಸ್ಕೃತಿ ಅವಶೇಷಗಳನ್ನು ಹುಡುಕಿಕೊಂಡು ಮದರಾಸಿಗೆ ಬಂದಿರುವುದು ತಿಳಿಯಿತು. ಅವರು ಪರಿಶೋಧನಾ ನಿಪುಣರು. ಇವರು ಯಯಾತಿ ದೇವಯಾನಿಯ ವಿಷಯದಲ್ಲಿ ಧೈರ್ಯವಾಗಿ ತೊಡಕನ್ನು ಬಿಡಿಸಿದುದನ್ನು ಸಂಶೋಧನಾ ಜಗತ್ತು ಸುಲಭವಾಗಿ ಮರೆಯುವುದಿಲ್ಲ. ಆದುದರಿಂದ ನನಗೆ ಅವರ ಪರಿಚಯವಿಲ್ಲದಿದ್ದರೂ ಅಮೆರಿಕದ ಸಂಪ್ರದಾಯದಂತೆ ಅವರಿಗೆ ಟೆಲಿಫೋನ್ ಮಾಡಿದೆ. ನನ್ನ ಅನುಮಾನಗಳನ್ನು ಸ್ಪಷ್ಟಪಡಿಸಲು ಯತ್ನಿಸಿದೆ. ಅಷ್ಟರಲ್ಲಿ ಅವರು "ಸುಕನ್ಯೆಯ ವೃತ್ತಾಂತ ತಾನೇ ಅದರ ಒಳಮರ್ಮ, ಆಧುನಿಕ ಪತ್ತೇದಾರಿ ಕಾದಂಬರಿಗಿಂತ ಹೆಚ್ಚು ರಸವತ್ತಾಗಿದೆ. ಅದಕ್ಕೆ ಸುಕನ್ಯೆಯ ಹೆಸರೇ ಬೀಗದ ಕೈ. ಸುಕನ್ಯೆಯ ಹೆಸರನ್ನು ಉಪಯೋಗಿಸಿಕೊಂಡು ವಿಚಿತ್ರ ದೀಪಿಕೆಯನ್ನು ಓದಿದರೆ ಎಲ್ಲವೂ ಕರತಲಾಮಲಕದಂತೆ ಸ್ಪಷ್ಟವಾಗುವುದು" ಎಂದು ಹೇಳಿ ಟೆಲಿಫೋನನ್ನು ಕೆಳಗಿಟ್ಟು ಬಿಟ್ಟರು.

ಸುಕನ್ಯೆಯ ಹೆಸರು ಹೇಗೆ ಬೀಗದ ಕೈ ಆಗುತ್ತೆ? ಸಂಸ್ಕೃತದಲ್ಲಿ ಒಂದೊಂದು ಬರಹಕ್ಕೂ "ಕಪಟಯಾತಿ ಸಂಖೆ" ಪ್ರಕಾರ ಒಂದು ಬೆಲೆ ಇದೆಯೆಂಬುದು ಮಾತ್ರ ನನಗೆ ಗೊತ್ತು. ಅದರ ಕ್ರಮ ಸೂ. (೭) ಕ (೧) ನ್ (೦) ಯಾ (೧) ಎಲ್ಲವನ್ನೂ ಸೇರಿಸಿದರೆ ೯. ಇದರ ಆಧಾರದಿಂದ ವಿಚಿತ್ರ ದೀಪಿಕೆಯ ಒಂಭತ್ತನೆಯ ಅಧ್ಯಾಯದಲ್ಲಿ ಹುಡುಕಿದೆ. ಅದನ್ನೇ ಒಂದು ಮಾತೂ ಬಿಡದೆ ಅನುವಾದಿಸಿ ಈ ಪ್ರಬಂಧದ ಎರಡನೆಯ ಭಾಗವಾಗಿ ಮುಂದೆ ಬರೆಯುತ್ತೇನೆ.

## ಎರಡನೆಯ ಭಾಗ

# ವಿಚಿತ್ರ ದೀಪಿಕೆ

### ಅಧ್ಯಾಯ ೯

ಅಂದು ಕಾರ್ತೀಕ ಮಾಸದ ಹುಣ್ಣಿಮೆ ಹಬ್ಬ. ಧಾರಾಳವಾಗಿ ಪ್ರಕಾಶಿಸುತ್ತಿದ್ದ ಚಂದ್ರ, ಮನುಷ್ಯರಿಗೆ ಉಲ್ಲಾಸವನ್ನು ಕೊಡುತ್ತಿದ್ದ ಅಂತರಿಕ್ಷದಲ್ಲಿ ಮೇಘಗಳೊಂದೂ ಇಲ್ಲದೆ ನಿರ್ಮಲವಾಗಿತ್ತು. ಕಣ್ಣುಗಳನ್ನು ಹೊಂದಿದ್ದದೇ ಆ

ವೇಳೆಯಲ್ಲಿ ಒಂದು ಆನಂದವಾಗಿತ್ತು. ಅದರ ಕೂಡ ಮೃದುವಾಗಿ ಚಲಿಸುತ್ತಿದ್ದ ಮಲಯಮಾರುತ ದೇಹವನ್ನು ಸ್ಪರ್ಶಿಸಿದುದೇ ತಡ, ಮುದುಕರಿಗೆ ಸಹ ನಾಡಿಗಳ ವೇಗವೂ ಚಟುವಟಿಕೆಯೂ ಸ್ವಲ್ಪ ಹೆಚ್ಚಾದಂತೆ ತೋರಿ ತಾವು ೩೦-೪೦ ವರುಷಗಳಿಗೆ ಮುಂಚೆ ವಿಧಿಯ ಕೈಯಿಂದ ಕಿತ್ತುಕೊಂಡ ಜಯಗಳನ್ನು ಜ್ಞಾಪಿಸಿಕೊಂಡು ಮತ್ತೆ ಅವುಗಳನ್ನು ಅನುಭವಿಸುತ್ತಿರುವಂತೆ ತೋರಿದ ಕಾಲ ಅದು. ಜೂಜಿನ ಕುದುರೆಗಳಂತೆ ಅಶಾಂತಿಯಿಂದ ಕುಣಿಯುತ್ತಿರುವ ನರಗಳುಳ್ಳ ಯುವಕರಿಗೊ? ಅವರಿಗೇ ಅರ್ಥವಾಗದ ಯಾವುದೋ ಉತ್ಸಾಹ ಹೊರಹೊಮ್ಮಿ, ಮಾಡಬೇಕಾದುದು ಇದು ಎಂದು ತಿಳಿಯದೆಲೇ ಏನನ್ನಾದರೂ ಮಾಡೋಣವೆಂದು ಅವರನ್ನು ಹುರಿದುಂಬಿಸುತ್ತಿತ್ತು.

ಆ ಸಮಯದಲ್ಲಿ ಕೆಲವು ಯುವತಿಯರ ನಡುವೆ ಇದ್ದ ಅವರೆಲ್ಲರ ನಾಯಕಿಯಂತಿದ್ದ ಒಬ್ಬಳು ಹೆಣ್ಣು "ಈ ಮನೆಯೊಳಗೆ ಯಾಕೆ ಕುಳಿತಿರಬೇಕು? ನಂದನವನಕ್ಕೆ ಹೋಗೋಣ ಬನ್ನಿ" ಎಂದಳು.

"ರಾತ್ರಿ ಹೊತ್ತು ತೋಟಕ್ಕೆ ಹೋದರೆ ಮಹಾರಾಜರು ಏನಾದರೂ-" ಎಂದು ಒಬ್ಬ ಗೆಳತಿ ಭಯದಿಂದ ಪ್ರಾರಂಭಿಸಿದಳು.

"ಏನೂ ಕೋಪಿಸಿಕೊಳ್ಳುವುದಿಲ್ಲ" ಎಂದು ರಾಜಕುಮಾರಿ ಕೂಡಲೇ ಮಾತನ್ನು ಮುಗಿಸಿದಳು. "ಈಗ ಒಳ್ಳೆಯ ಮಧ್ಯಾಹ್ನದಂತೆ, ಬೆಳದಿಂಗಳು ಕಾಯುತ್ತಿದೆ. ಅದೂ ಅಲ್ಲದೆ ಇಂತಹ ಹಬ್ಬದ ದಿನ ತಾಯಿಯಿಲ್ಲದ ಮಗಳಿಗೆ ಮಹಾರಾಜರು ಸಿಡುಕಿ ಮಾತನಾಡುವುದಿಲ್ಲ" ಎಂದು ಹೇಳಿಕೊಂಡು ರಾಜಕುಮಾರಿ ನಗುತ್ತಾ ಗೆಳತಿಯರನ್ನು ತೋಟಕ್ಕೆ ಎಳೆದುಕೊಂಡು ಹೋದಳು.

ಅಲ್ಲಿ ನಾನಾ ಬಗೆಯ ಆಟಗಳಲ್ಲಿ ಕಾಲ ಕಳೆದರು. ಹೂವುಗಳನ್ನು ಕಿತ್ತು ಒಬ್ಬರ ಮೇಲೆ ಒಬ್ಬರು ಬಿಸಾಡಿದರು. ಪೈಪೋಟಿಯಿಂದ ಓಡಿ ನೆಗೆದು ಹಾರಾಡಿದರು. ಕಣ್ಣುಕಟ್ಟು, ಕಣ್ಣಾಮುಚ್ಚಾಲೆ ಆಟಗಳನ್ನು ಆಡಿದರು. ಈ ಆಟದ ಮಧ್ಯೆ ಒಂದು ಗುತ್ತಿಯಲ್ಲಿ ಮುಚ್ಚಿಟ್ಟುಕೊಳ್ಳ ಹೋದ ಒಬ್ಬ ಯುವತಿ, ರಾಜಕುಮಾರಿಯಲ್ಲಿಗೆ ಓಡಿ ಬಂದು "ಅಗೋ, ಆ ಪೊದೆಯಲ್ಲಿ ಒಂದು ಮೃಗ ಇದೆ. ಬೆಳದಿಂಗಳಲ್ಲಿ ಅದರ ಕಣ್ಣು ಮಾತ್ರ ಕಾಣುತ್ತಿದೆ" ಎಂದು ಹೇಳಿ ಎಲೆಗಳ ಸಂದುಗಳಲ್ಲಿ ದೂರದಲ್ಲಿ ಫಳಫಳವೆಂದು ಹೊಳೆಯುತ್ತಿದ್ದ ಎರಡು ಕಣ್ಣುಗಳ ಕಡೆ ಕೈ ತೋರಿಸಿದಳು.

ಆ ಸುದ್ದಿ ಕೇಳಿ ಇತರ ಗೆಳತಿಯರು ಅರಮನೆಗೆ ಓಡಲು ಪ್ರಯತ್ನಿಸಿದರು. ಆದರೆ ರಾಜಕುಮಾರಿಯು " ಓಡಬೇಡಿ. ನಾವು ಕ್ಷತ್ರಿಯ ಕುಲದಲ್ಲಿ ಜನಿಸಿದವರು. ಹೀಗೆ ಭಯಪಡಬಹುದೆ? ಬೇಕಾದರೆ ನನ್ನ ಹಿಂದೆ ನಿಂತುಕೊಳ್ಳಿ, ಅನುಸೂಯೇ ನೀನು ಹೋಗಿ, ಯಾರಿಗೂ ತಿಳಿಯದಂತೆ ತಂದೆಯವರ ಬಿಲ್ಲನ್ನೂ ಬಾಣವ ಬತ್ತಳಿಕೆಯನ್ನೂ ತೆಗೆದುಕೊಂಡು ಬಾ. ನಾನು ಈ ಕಣ್ಣುಗಳನ್ನು ಬಿಡದೇ ಗಮನಿಸುತ್ತಾ ಇರುತ್ತೇನೆ " ಎಂದು ಧೈರ್ಯವಾಗಿ ಆಜ್ಞಾಪಿಸಿದಳು. ಗೆಳತಿಯರು ಓಡುವುದನ್ನು ನಿಲ್ಲಿಸಿದರು. ಧೈರ್ಯದಿಂದಲೇಯೋ ಅಥವ ಧೈರ್ಯದ ನಟನೆಯಿಂದಲೋ ರಾಜಕುಮಾರಿಯ ಹಿಂದುಗಡೆ ನಿಂತು ಕೊಂಡರು. ಬಿಲ್ಲು ಬಾಣಗಳು ಬಂದವು. ರಾಜಪುತ್ರಿ, ತಮ್ಮ ತಂದೆ ಗುರಿ ಹಿಡಿಯುವಂತೆ ಕಷ್ಟದಿಂದ ಆ ಬಿಲ್ಲನ್ನು ಬಗ್ಗಿಸಿ ಒಂದು ಬಾಣವನ್ನು ಹೂಡಿ ಬಿಟ್ಟಳು. ತತ್‍ಕ್ಷಣ ಅಯ್ಯೋ ಸತ್ತೆ ಎಂದು ಮನುಷ್ಯರ ಕಂಠದ ಧ್ವನಿ, ಪೊದೆಯಿಂದ ಕೇಳಿಸಿತು ಒಬ್ಬ ಕೆಳಕ್ಕೆ ಬಿದ್ದ ಸದ್ದು ಆಯಿತು.

ಅದನ್ನು ಕೇಳಿ ಆ ಯುವತಿಯರೆಲ್ಲಾ ಬೆಚ್ಚಿಬಿದ್ದು ಮೈ ನಡುಗಿ ದಿಗ್ಭ್ರಾಂತರಾದರು. ರಾಜಪುತ್ರಿ ಹುತ್ತದ ಬಳಿಗೆ ಓಡಲು ಅವಳ ಹಿಂದೆ ಉಳಿದವರೂ ಓಡಿದರು. ಬಾಣದ ಏಟಿನಿಂದ ನಿಶ್ಚೇಷ್ಟಿತನಾಗಿ ನೆಲದ ಮೇಲೆ ಬಿದ್ದಿದ್ದ ಅತ್ಯಂತ ಸುಂದರ ಯುವಕನೊಬ್ಬ ಅವರ ಕಣ್ಣಿಗೆ ಬಿದ್ದನು.

ಅವನ ಹಣೆಯಿಂದ ರಕ್ತ ಸುರಿಯುತ್ತಿದ್ದುದೂ ಬಾಣ ತಗಲಿದ ಜಾಗದ ಘಾಯವೂ ಅವರಿಗೆ ಕಂಡಿತು.

ರಾಜಕುಮಾರಿಗೆ ಎಲ್ಲೆಯಿಲ್ಲದ ಪಶ್ಚಾತ್ತಾಪ ಉಂಟಾಯಿತು. ಅವಳು ಅಲ್ಲಿಯೇ ಕುಳಿತು ಆತನ ತಲೆಯನ್ನು ತನ್ನ ತೊಡೆಯಮೇಲಿಟ್ಟುಕೊಂಡು " ಅಯ್ಯೋ ಇವರು ಯಾರೋ ? ಮನ್ಮಥನಂತೆ ತೋರುತ್ತಾರೆ. ಇವರನ್ನು ಕೊಂದು ಬಿಟ್ಟನೆಲ್ಲ " ಎಂದು ಕೊರಗಿದಳು. ಗೆಳತಿಯರನ್ನು ಕುರಿತು " ಬಿಲ್ಲನ್ನು ತೆಗೆದುಕೊಂಡು ಬಾ ಎಂದು ನಾನು ಯೋಚನೆ ಮಾಡದೇ ಹೇಳಿ ಬಿಟ್ಟರೂ, ಪೊದೆಯಲ್ಲಿ ಕಂಡುದು ಮನುಷ್ಯ ಇದ್ದರೂ ಇರಬಹುದೆಂದು ನಿಮಗಾದರೂ ಹೊಳೆಯ ಬೇಡವೇ? ಎಂದು ಪರಿತಪಿಸಿದಳು. ನೂರಾರು ದೇವತೆಗಳಿಗೆ ಹರಕೆ ಮಾಡಿಕೊಂಡಳು. ಯುವಕನ ಮುಖವನ್ನು ತನ್ನ ಎರಡು ಕೈಗಳಿಂದಲೂ ಮತ್ತೆ ಮತ್ತೆ ಸವರಿದಳು. ಅವಳ ಪ್ರಾರ್ಥನೆಯ ಫಲವೋ ಅಥವ ಪುಷ್ಪದಂತೆ

ಮೃದು ಕೋಮಲವಾದ ಅವಳ ಬೆರಳುಗಳ ಮೂಲಕ ಪ್ರವಹಿಸಿದ ಸಂಜೀವನೀ ಶಕ್ತಿಯೋ? ಅಥವ ಎರಡೂ ಸೇರಿದುದರಿಂದಲೋ ಮೂರ್ಛೆ ಹೊಂದಿದ ಅವನ ದೇಹ ಚೈತನ್ಯಗೊಂಡಿತು. ಒಂದು ದೊಡ್ಡ ನಿಟ್ಟುಸಿರು ಬಿಟ್ಟು ಆತ ಕಣ್ಣು ಗಳನ್ನು ತೆರದು ನೋಡಿದನು.

ಕೂಡಲೇ ರಾಜಕುಮಾರಿಯು "ನಾನು ನಿಮ್ಮ ಮೇಲೆ ಬಾಣವನ್ನು ಗುರಿ ಇಟ್ಟಾಗಲಾದರೂ ನೀವು ತಪ್ಪಿಸಿಕೊಳ್ಳಬಾರದಾಗಿತ್ತೆ?" ಎಂದು ಅತ್ಯಂತ ಅನುತಾಪದಿಂದ ಕೇಳಿದಳು.

"ತಪ್ಪಿಸಿಕೊಳ್ಳುವುದೇ? ನಿನ್ನನ್ನು ಬಿಟ್ಟು ತಪ್ಪಿಸಿಕೊಳ್ಳುವುದೆ? ಒಳ್ಳೇ ಮಾತನ್ನೇ ಹೇಳಿದೆ. ನೀನು ಬಿಲ್ಲು ಹಿಡಿದು ನಿಂತಿದ್ದ ಬೆಡಗನ್ನು ನೋಡಿ ತೃಪ್ತಿಪಡುವುದನ್ನು ಬಿಟ್ಟು ಹೆದರಿ ಓಡಿಹೋಗಿದ್ದರೆ, ಹೀಗೆ ನಿನ್ನ ಮಡಿಲಲ್ಲಿ ತಲೆಯಿಟ್ಟುಕೊಂಡು ಮಲಗುವ ಭಾಗ್ಯ ನನಗೆ ಉಂಟಾಗುತ್ತಿತ್ತೆ?" ಹೀಗೆ ಹೇಳಿ ಆತ ಅಷ್ಟಕ್ಕೆ ನಿಲ್ಲದೆ ತನ್ನ ಎರಡು ಕೈಗಳಿಂದಲೂ ಆಕೆಯ ಮುಖವನ್ನು ತನ್ನೆಡೆಗೆ ಎಳೆದುಕೊಂಡು ಒಂದು ಮುತ್ತು ಕೊಟ್ಟು, ಅವಳು ಕೋಪಿಸಿಕೊಳ್ಳ ಬೇಕೆಂದು ಯೋಚಿಸುವಷ್ಟರಲ್ಲಿಯೇ ಮತ್ತೆ ಮೂರ್ಛೆ ಹೋಗಿಬಿಟ್ಟನು.

ಬಾಣವನ್ನು ಸರಿಯಾಗಿ ಹೂಡಿಬಿಟ್ಟಿದ್ದರೆ ಆತನ ಪ್ರಾಣವೇ ಹೋಗಿದ್ದಿ ರಬೇಕು. ರಾಜಪುತ್ರಿಗೆ ಕೈಯ್ಯಲ್ಲಿ ಬಲ ಕಡಿಮೆಯಾಗಿದ್ದುದರಿಂದಲೂ ಬಾಣ ಬಿಡುವುದು ಅವಳಿಗೆ ಅಭ್ಯಾಸವಿಲ್ಲದುದರಿಂದಲೂ, ಅವನ ಜೀವ ಉಳಿದು ಕೊಂಡಿತು. ಹೇಗಿದ್ದರೂ—ಘಾಯ ಬಲವಾದುದಾಗಿರಲಿ ಅಲ್ಪವಾದುದಾಗಿರಲಿ ಒಂದು ಸಲ ಮೂರ್ಛೆ ಹೋದವನು, ಮತ್ತೊಮ್ಮೆ ಮೂರ್ಛೆ ಹೋಗುವುದರೊಳಗೆ "ಅಯ್ಯೋ ಅಪ್ಪಾ!" ಎಂದು ನರಳುವುದಕ್ಕೆ ಬದಲಾಗಿ ಶೃಂಗಾರದ ಮಾತು ಗಳನ್ನು ಆಡುವುದು ಪ್ರಪಂಚದಲ್ಲಿ ಲಕ್ಷಕ್ಕೆ ಒಂದು ಸಿಗಬಹುದು. ಮಾತು ಗಳೊಂದಿಗೆ ನಿಲ್ಲಿಸದೆ ಆ ಮಾತುಗಳಿಗೆ ಸಾಕ್ಷಿ ದೃಷ್ಟಾಂತಗಳನ್ನು ಸಹ ಕೊಡುವ ಧೀರರು ಕೋಟಿಗೆ ಒಬ್ಬರೂ ವಿರಳ ಎಂದೇ ಹೇಳಬಹುದು.

ಅವಕ್ಕೆ ಹಿಂದೆ, ಅಂಗ ವಂಗ ಕಳಿಂಗ ಮುಂತಾದ ದೇಶಗಳಿಂದ ಅರಸು ಕುಮಾರರು ಆಕೆಯನ್ನು ವಿವಾಹವಾಗಲು ಹುಡುಕಿಕೊಂಡು ಬಂದಿದ್ದುದೂ ಉಂಟು. ಅವಳ ಪ್ರೇಮಕ್ಕಾಗಿ ಯಾಚಿಸಿದುದೂ ಉಂಟು. ಆದರೆ ಅವರಲ್ಲಿ ಒಬ್ಬರಾಗಲಿ, ತಮ್ಮ ಪ್ರಾಣ ಹೋದರೂ ಹೋಗಲಿ ಎಂದು ಹೇಳಿ ಅವಳ

ಸೌಂದರ್ಯದಲ್ಲಿ ಲೀನರಾಗಿ ಬಾಣಕ್ಕೆದುರಾಗಿ ನಿಂತುದೂ ಇಲ್ಲ. ಅವರಲ್ಲಿ ಒಬ್ಬರೂ ಇವನಷ್ಟು ಸುಂದರರೂ ಆಗಿರಲಿಲ್ಲ. ಹೀಗೆ ಮಾತನಾಡಬಲ್ಲವರೂ, ನಟಿಸ ಬಲ್ಲವರೂ ಆಗಿರಲಿಲ್ಲ. ಕಾರಣಗಳನ್ನು ವಿಸ್ತರಿಸಿ ಮುಂದೆ ಮುಂದೆ, ಹೇಳು ವುದೇಕೆ? ಒಂದೊಂದು ಪ್ರೇಮ ಬಾಂಧವ್ಯವೂ, ಅವಕ್ಕಾಗಿ ನಿಯಮಿತವಾದ ಮಾರ್ಗದಲ್ಲಿ ತಾನೇ, ಹುಟ್ಟಿಬೆಳೆದು ಕೊನೆಗಾಣಬೇಕು. ಬೇಗ ನೀರನ್ನು ತರಿಸಿ ಅದನ್ನು ಆತನ ತಲೆಗೆ ಚಿಮುಕಿಸಿ ಅವನಿಗೆ ಮತ್ತೆ ಪ್ರಜ್ಞೆ ಹಿಂದಿರುಗುವುದರೊಳ ಗಾಗಿ, ರಾಜಪುತ್ರಿ ತನ್ನ ಹೃದಯವನ್ನು ಆತನಿಗೆ ಪೂರ್ತಿ ಅರ್ಪಿಸಿದ್ದಳು.

ರಾಜಕುಮಾರಿ ಅನೇಕ ಉಪಚಾರಗಳನ್ನು ಮಾಡಿ ಬಾಣದ ಹೊಡೆತ ದಿಂದ ಆತನಿಗೆ ಉಂಟಾಗಿದ್ದ ವೇದನೆಯನ್ನು ಶಾಂತಗೊಳಿಸಿದಳು. ಆತ, ಅವಳ ಮಡಿಯಿಂದ ತಲೆ ಎತ್ತದೆಯೇ ಎಲ್ಲ ಉಪಚಾರಗಳನ್ನೂ ಸ್ವೀಕರಿಸಿದ. "ನನ್ನ ಹೃದಯವನ್ನು ನಿನಗೆ ಎರಡು ತಿಂಗಳ ಹಿಂದೆಯೇ ಸಮರ್ಪಿಸಿಬಿಟ್ಟೆ. ಪ್ರತಿ ದಿನವೂ ಸಂಧ್ಯಾಕಾಲ ಈ ಪೊದೆಯಲ್ಲಿ ನಿಂತುಕೊಂಡು ನೀನೇನಾದರೂ ಸ್ವಾಭಾವಿಕವಾಗಿ ಕಣ್ಣಿಗೆ ಬೀಳುತ್ತೀಯೋ ಎಂದು ಕಾಯುತ್ತಿದ್ದೆ" ಎಂದೂ ಮುಂತಾಗಿ ಸವಿಯಾದ ಅನೇಕ ಮಾತುಗಳನ್ನಾಡಿದನು.

"ನಿಮ್ಮನ್ನು ಬಾಣದಿಂದ ಹೊಡೆದುಬಿಟ್ಟೆನಲ್ಲ?" ಎಂದು ಅವಳು ಅನೇಕ ಸಲ ತನ್ನನ್ನೇ ನಿಂದಿಸಿಕೊಂಡಳು.

ಆತ "ಅದರ ವಿಷಯದಲ್ಲಿ ನನಗೂ ದೊಡ್ಡ ಕೊರತೆ. ಎರಡು ತಿಂಗಳ ಹಿಂದೆಯೇ ನೀನು ಇದನ್ನು ಮಾಡಿದ್ದಿದ್ದರೆ, ನನ್ನ ಭಾಗ್ಯ ಆಗಲೇ ಪ್ರಾರಂಭ ವಾಗುತ್ತಿದ್ದಿತು"; ಎಂದು ಒಂದು ಸಲ ಹೇಳಿದ. "ಮನ್ಮಥನ ಬಾಣವನ್ನು ಕವಿಗಳು ಹೊಗಳುವರೇ ಹೊರತು ರತಿಯ ಅವತಾರಳಾದ ನೀನು ಬಿಟ್ಟ ಬಾಣದ ಮಹಿಮೆ ಆ ಮೂಢರಿಗೆ ಎಂದಿಗಾದರೂ ತಿಳಿದೀತೆ?" ಎಂದು ಒಂದು ಸಲ ಆನಂದದಿಂದ ಹೇಳಿಕೊಂಡನು.

ಅವರು ಇನ್ನೂ ಅನೇಕ ಸರಸ ಸಲ್ಲಾಪಗಳನ್ನಾಡಿದರು. ಆತನ ಪ್ರೇಮ ವನ್ನು ನಂಬಲು ಆನೆಗೊಂಡ ಅವಳ ಹೃದಯದಲ್ಲಿ, ನಂಬಿಕೆಯೂ ಪ್ರೇಮವೂ ತುಂಬಿ ಹರಿದವು.

ಗೆಳತಿಯರು ಮರ್ಯಾದೆಯಿಂದ ದೂರದಲ್ಲಿ ಸಂಕೋಚದಿಂದ ನಿಂತಿದ್ದರು. ಚಂದ್ರನು ಮಾತ್ರ ಲೌಕಿಕ ಮರ್ಯಾದೆಯನ್ನು ಗಮನಿಸದೆ ಆಕಾಶದಲ್ಲಿದ್ದು ಅವರ

ಸರಸಸಲ್ಲಾಪಗಳನ್ನು ಈಕ್ಷಿಸುತ್ತಿದ್ದನು. ಅವನನ್ನು ಒಂದು ಸಲ ಆಕೆ ಕುರಿತು ನೋಡಿ "ನಿಮ್ಮದು ಚಂದ್ರವಂಶವೋ, ಸೂರ್ಯವಂಶವೋ, ? ಯಾವ ದೇಶದ ರಾಜಕುಮಾರರು ನೀವು ?" ಎಂದು ಕೇಳಿದಳು.

ಅದುವರೆಗೆ ಆಕಾಶಮಾರ್ಗದಲ್ಲಿ ವಿಮಾನದಲ್ಲಿ ಸಂಚರಿಸುತ್ತಿದ್ದವನನ್ನು ಧಡೀರೆಂದು ಕೆಳಕ್ಕೆ ತಳ್ಳಿದಂತೆ ಆಯಿತು. ಆತ "ಅಯ್ಯೋ ನಾನು ರಾಜ ಕುಮಾರನಲ್ಲ, ಕ್ಷತ್ರಿಯನೇ ಅಲ್ಲ. ಭೃಗು ವಂಶದಲ್ಲಿ ಜನಿಸಿದ ಒಬ್ಬ ಬಡ ಬ್ರಾಹ್ಮಣ" ಎಂದ.

ಆ ಸತ್ಕನ್ನಿಕೆ "ಅದಕ್ಕಾಗಿ ಯಾಕೆ ಮುಖವನ್ನು ಬಾಡಿಸಬೇಕು ? ನೀವು ಯಾರಾಗಿದ್ದರೂ ನನಗೆ ನೀವು ನೀವೇ. ಆದರೆ ಒಂದು ತಾಪತ್ರಯವಿದೆ. ಬ'ವನಿಗೆ ನನ್ನನ್ನು ವಿವಾಹಮಾಡಿಕೊಡಲು ನಮ್ಮ ತಂದೆ ಒಪ್ಪುವುದಿಲ್ಲವಲ್ಲ.

ತಂದೆಯ ಅಸಮ್ಮತಿಯನ್ನು ತಾಪತ್ರಯ ಎಂದು ಹೇಳಿ ಒದರಿಬಿಡು ವಷ್ಟು ಅಲ್ಪವಾಗಿ ಅದು ಆತನಿಗೆ ತೋರಲಿಲ್ಲ. ಆತ ತುಂಬ ಯೋಚನೆಯಿಂದ "ಅದಕ್ಕೆ ಏನುಮಾಡೋಣ ?" ಎಂದು ಕೇಳಿದನು.

"ಏನಾದರೂ ದಾರಿ ಸಿಕ್ಕುತ್ತೆ. ನಾಳೆ ನಿಧಾನವಾಗಿ ಅದನ್ನು ಕಂಡು ಹಿಡಿಯೋಣ. ಈ ರಾತ್ರಿ ಇನ್ನು ಯಾವ ಕಷ್ಟವನ್ನೂ ನನ್ನ ಮನಸ್ಸಿಗೆ ಕೊಡು ವುದಿಲ್ಲ" ಎಂದು ಅವಳು ಮುಗುಳು ನಗೆ ನಕ್ಕಳು.

ಆತ "ಹಾಗೇ ಆಗಲಿ. ನಾಳೆಯೇನು ? ಇನ್ನೊಂದು ಗಳಿಗೆ ಹೀಗೆಯೇ ಮಾತನಾಡುತ್ತಿದ್ದರೆ ಇವತ್ತು ಎಂದೇ ಹೇಳಿಬಿಡಬಹುದು. ಚಂದ್ರನು ಎಲ್ಲಿ ದ್ದಾನೆ ನೋಡು"

"ಅವನು ಇರುವ ಜಾಗ ತಪ್ಪು. ಅವನಿಗೆ ರೋಹಿಣಿಯಲ್ಲಿ ಪಕ್ಷಪಾತ. ಆದುದರಿಂದ ಕೃತ್ತಿಕೆಯನ್ನು ಬಿಟ್ಟು ಬೇಗ ರೋಹಿಣಿಯನ್ನು ಸೇರಲು ಓಡುತ್ತಿ ದ್ದಾನೆ. ನಾವು ಅವನನ್ನು ಗಮನಿಸಬೇಕಾದುದಿಲ್ಲ" ಎಂದಳು.

"ಬೇಡವೇ ಬೇಡ. ಆದರೆ ಅವನು ಅದಕ್ಕಾಗಿ ಓಡುತ್ತಿಲ್ಲ. ನಿನ್ನ ಮುಖದ ಸೌಂದರ್ಯವನ್ನು ನೋಡಿ ತಾನು ಸೋತೆನೆಂದು ನಾಚಿಕೆಯಿಂದ ಓಡುತ್ತಿದ್ದಾನೆ. ಸೋಲುಬುರುಕ !"

ಒಂಭತ್ತನೆಯ ಅಧ್ಯಾಯ ಮುಗಿಯಿತು.

§ § § §

## ಮೂರನೆಯ ಭಾಗ

ಮೇಲೆ ಬರೆದಿರುವ "ವಿಚಿತ್ರ ದೀಪಿಕೆಯ ಒಂಭತ್ತನೆಯ ಅಧ್ಯಾಯವನ್ನು ಮತ್ತೆ ಮತ್ತೆ ಓದಿ ನೋಡಿದೆ. ಸೂಚನೆಗಳೆಲ್ಲ ಅಲ್ಲಿವೆ ಎಂದು ಸ್ಪಷ್ಟವಾಗಿ ಗೊತ್ತಾಯಿತೇ ಹೊರತು ಅವುಗಳನ್ನು ಅನ್ವಯಿಸಿ ಅರ್ಥಮಾಡಿಕೊಳ್ಳಲಾಗಲಿಲ್ಲ. ಕರತಲಾಮಲಕ ಎಂದು ಪಂಡಿತರು ಹೇಳಿದರೆಲ್ಲ? ಚವನಪ್ರಾಶದಲ್ಲಿ ಆಮಲಕ [ನೆಲ್ಲಿಕಾಯಿ] ಒಂದು ಮುಖ್ಯವಾದ ವಸ್ತು ತಾನೇ. ತಮ್ಮ ಶ್ಲೇಷೆಯನ್ನು ಪ್ರಯೋಗಿಸಲು ಇದೇ ಸಮಯವೆಂದೂ ಅದಕ್ಕೆ ನಾನೇ ಪಾತ್ರವೆಂದೂ ಪಂಡಿತರು ಭಾವಿಸಿದರೋ? ಅಥವ ಅವರು ಹೇಳಿದುದರಲ್ಲಿ ಸತ್ಯಾಂಶವಿರಬಹುದೇ?" ನನಗೆ ಏನೂ ಅರ್ಥವಾಗಲಿಲ್ಲ. ಎಷ್ಟು ದಿನ ಇದಕ್ಕಾಗಿ ಕಷ್ಟಪಡುವುದು ಎಂದು ಯೋಚಿಸಿ, ಧೈರ್ಯಮಾಡಿ ಕೊನೆಗೆ ಅವರಿಗೆ ಮತ್ತೆ ಟೆಲಿಫೋನ್ ಮಾಡಿದೆ.

ಆಗ ನಮ್ಮಿಬ್ಬರಿಗೂ ನಡೆದ ಸಂಭಾಷಣೆಯನ್ನು ಒಂದು ಅಕ್ಷರವೂ ಬಿಡದೆ ಮುಂದೆ ನಮೂದಿಸಿದ್ದೇನೆ. ಇದರಲ್ಲಿ ನನ್ನ ಜವಾಬ್ದಾರಿಯೇ ಇಲ್ಲ. ಈ ವಿಷಯದಲ್ಲಿ ನಾನು ಅವರ ಗುಮಾಸ್ತ ಮಾತ್ರ. ಅಭಿಪ್ರಾಯಗಳೆಲ್ಲಾ ಅವರವೆ. ಅವುಗಳ ಜವಾಬ್ದಾರಿಯೂ ಅವರವೇ.

ಟೆಲಿಫೋನ್ ಸಂಭಾಷಣೆ.

ಪಂಡಿತರು—ನಾನು ಪ್ರೊಫೆಸರ್ ಪಿಂಪಿಳ್. ತಾವು ಯಾರೋ?

ನಾನು—ನಾನೇ ಕೊನಷ್ಟೈ; ಉಂ— ನಿಮಗೆ ಜ್ಞಾಪಕವಿದೆಯೇ? ಹತ್ತು ದಿನಗಳ ಹಿಂದೆ ಸುಕನ್ಯಾ ಚವನರ ವಿಷಯದಲ್ಲಿ, ನಿಮಗೆ ಸ್ವಲ್ಪ ತೊಂದರೆಕೊಟ್ಟೆ.

ಪಂಡಿತರು—ಸುಕನ್ಯೆಯ ಹುಬ್ಬುಗಳನ್ನು ಲೋಮಶ ಋಷಿಗಳು ವರ್ಣಿಸುವುದನ್ನು ನೋಡಿದಿರಾ? ಹಾಗೆ ಮನ್ಮಥಚಾಪದಂತೆ ಹುಬ್ಬುಳ್ಳ ಸ್ತ್ರೀಯರು ಕೆಲವರನ್ನು ಅಮೆರಿಕದಲ್ಲಿ ಕಂಡಿದ್ದೇನೆ. ಅಬ್ಬ! ಏನು ಬುದ್ಧಿವಂತರು! ಎಂತಹ ಮನೋಧೈರ್ಯ! ಯುಕ್ತಿಯೋ ಬುದ್ಧಿಯೋ ಯಾವುದು ಹೆಚ್ಚು ಎಂದು ಹೇಳುವುದು ಸಾಧ್ಯವಿಲ್ಲ. ನಿಮ್ಮ ದೇಶದಲ್ಲಿಯೂ ಹಾಗೇ ತಾನೆ ಇದೆ.

ನಾನು—ಹಾಗೆಯೇ ಇರಬೇಕಾದದು. ಆದರೆ ನನಗೆ ಸಾಧಾರಣ ಹುಬ್ಬು ಮಾತ್ರ. ಯುಕ್ತಿಯೂ ಬುದ್ಧಿಯೂ ಬಹಳ ಕಡಿಮೆ. ಆದುದರಿಂದಲೇ ನನ್ನ ಸಂದೇಹಗಳು ಇನ್ನೂ ತೀರಿಲ್ಲ.

ಪಂಡಿತರು—ಇನ್ನೂ ತೀರಲಿಲ್ಲವೆ? ವಿಚಿತ್ರ ದೀಪಿಕೆಯನ್ನು ಓದಿ ಎಂದು ಹೇಳಿದೆನೆಲ್ಲ? ಗ್ರಂಥವೆಂದರೆ ಅದೀಗ ಗ್ರಂಥ. ಕವಿ ಎಂದರೆ ಅವರೇ ಕವಿ. ವರ ಕವಿ. ಜ್ಞಾನ ದೃಷ್ಟಿ ಪೂರ್ಣವಾಗಿರುವುದು ಅವರೊಬ್ಬರಿಗೆ ಮಾತ್ರವೇ. ಸಕಲವನ್ನೂ ಕಂಡುಹಿಡಿದು ಸಕಲವನ್ನೂ ಗಂಟುಬಿಡಿಸಿ ಬರೆದಿದ್ದಾರೆ, ಸರಿಯಾದ ಅಧ್ಯಾಯವನ್ನು ತಾನೇ ಓದಿದಿರಿ?

ನಾನು—ನೀವು ದಯವಿಟ್ಟು ಸೂಚಿಸಿದ ಗುರುತನ್ನು ಹಿಡಿದುಕೊಂಡು ಒಂಬತ್ತನೆಯ ಅಧ್ಯಾಯವನ್ನು ಓದಿದೆ.

ಪಂಡಿತರು—ಅದು ಸರಿಯಾಯಿತು.

ನಾನು—ಆದರೆ ಒಬ್ಬರ ಹೆಸರನ್ನೂ ಪ್ರಕಟಿಸದುದರಿಂದ ಅದರ ವಾಚನದಿಂದ ಏನೂ ಲಾಭವಾಗಲಿಲ್ಲ.

ಪಂಡಿತರು—ಅದು ಅವರ ಪದ್ಧತಿ ತಾನೇ. ಮೊದಲು ತಮ್ಮ ಹೆಸರನ್ನೇ ಹೇಳಿಕೊಂಡಿದ್ದಾರೆಯೆ? ಇಲ್ಲವೆಲ್ಲ. ರಾಜರ ಕೋಪದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಅವರು ಹೆಸರುಗಳನ್ನು ಬದಲಾಯಿಸಿ ಬರೆಯುತ್ತಾರೆ. ಅಥವ ಹೆಸರುಗಳನ್ನು ಬರೆಯುವುದೇ ಇಲ್ಲ. ಅದನ್ನೆಲ್ಲ ನಾವೇ ಕಂಡುಹಿಡಿದುಕೊಳ್ಳಬೇಕು.

ನಾನು—ಆದುದರಿಂದ ನನ್ನ ಈಗಿರುವ ಕಷ್ಟಗಳ ಜತೆಗೆ ಇದೂ ಒಂದು ಸೇರಿಕೊಂಡಿತು.

ಪಂಡಿತರು—ಇದರಲ್ಲಿ ಕಷ್ಟವೇನು? ಪರಿಶೋಧನೆಯ ಮಾರ್ಗದಲ್ಲಿ ನಿಮಗೆ ಅಪನಂಬಿಕೆ ಯಾಕೆ? ಹೇಗೆ ಸುಕನ್ಯಾಳ ಹೆಸರಿನಿಂದ ಆ ಅಧ್ಯಾಯವನ್ನು ಗುರುತಿಸಲು ಸಾಧ್ಯವಾಯಿತೋ ಅದರಿಂದಲೇ ಆ ರಾಜಕುಮಾರಿ ಸುಕನ್ಯಾ ಎಂದು ಅರ್ಥವಾಗಲಿಲ್ಲವೆ?

ನಾನು—ಓಹೋ! ಹಾಗಾದರೆ ಅವಳು ಪ್ರೀತಿಸುವ ಬ್ರಾಹ್ಮಣ?

ಪಂಡಿತರು—ಕೇಳಬೇಕಾದುದೇನು? ಭೃಗುವಂಶದವನೆಂದು ಹೇಳಿಕೊಳ್ಳುತ್ತಾನೆಲ್ಲ. ಭಾರತದಲ್ಲಿಯೂ ವಂಶವನ್ನು ಹೇಳಿದ್ದಾರೆಲ್ಲ? ಅವನೇ ಚವನ.

ನಾನು—ಚವನರೇ. ಏನು ಆಶ್ಚರ್ಯ! ಹಾಗಾದರೆ ಅವರು ಮುದುಕರಾದರೂ ಸುಕನ್ಯಾ ಹೇಗೆ ಎಳೆಯ ಹುಡುಗಿಯಾಗಿಯೇ ಉಳಿದಳು?

ಪಂಡಿತರು—ಚವನರು ಮುದುಕರೆ? ಯಾರು ಹೇಳಿದರು? ಭಾರತ ದಲ್ಲಿ ಎಲ್ಲಿಯಾದರೂ ಅವರು ಮುದುಕರೆಂದು ಹೇಳಿದೆಯೆ?

ನಾನು—ಅವರು ದೀರ್ಘ ಕಾಲ ತಪಸ್ಸು ಮಾಡಿದುದಾಗಿ ಲೋಮಶರು ಹೇಳಿದ್ದಾರೆಲ್ಲ?

ಪಂಡಿತರು—ಅಷ್ಟರ ಮಟ್ಟಿಗೇನೋ ನಿಜ. ಹಸಿವು ಬಾಯಾರಿಕೆಗಳನ್ನು ಅಡಗಿಸಿಕೊಂಡು ಕಣ್ಣಿಗೆ ಕತ್ತಲೆ ಕವಿಯುವವರೆಗೆ ಧ್ಯಾನಮಾಡಿ ನೋಡಿ. ಆಗ ತಿಳಿಯುತ್ತೆ. ಒಂದೊಂದು ದಿನವೂ ಎಷ್ಟು ದೀರ್ಘಕಾಲವನ್ನು ಹಿಡಿಯು ವುದೆಂದು.

ನಾನು—(ಆತುರದಿಂದ) ನಾನು ಪರೀಕ್ಷಿಸಿ ನೋಡುವುದಿಲ್ಲ. ನೀವು ಹೇಳುವುದನ್ನು ಹಾಗೆಯೇ ಒಪ್ಪಿಕೊಳ್ಳುತ್ತೇನೆ. ಹಾಗಾದರೆ ಚವನರು ಹಾಗೆ ಕಷ್ಟಪಟ್ಟುದು ಉಂಟೆಂದು ಅಮೆರಿಕದವರಾದ ನೀವೂ ಒಪ್ಪುತ್ತೀರಾ?

ಪಂಡಿತರು—ಸತ್ಯವನ್ನು ಒಪ್ಪದೆ ಏನು? ಮಾಡಿಯೇ ಮಾಡಿದರು. ಅದರಿಂದಲೇ ಸುಕನ್ಯ ಅವರಿಗೆ ಲಭಿಸಿದಳು. ಆದರೆ ಆಕೆ ಒಳ್ಳೆ ಹುಡುಗಿ. ವಿವೇಕಿ. ಮೊದಲೇ ಸೂಕ್ತವಾದ ಸರಿಯಾದ ಹುತ್ತ ಹುಟ್ಟಿ ಪೊದೆಯಾ ಗಿದ್ದ ಸ್ಥಳವನ್ನು ನೋಡಿ, ಆತನನ್ನು ಅಲ್ಲಿ ಕೂರಿಸಿ ಬಿಟ್ಟಳು. ಆತನ ಮೇಲೆ ಹುತ್ತ ಬೆಳೆದ ನಂತರ ಏನೋ ಒಂದು ತಂತ್ರ ಹೂಡಿ, ತಂದೆಯನ್ನು ಅಲ್ಲಿಗೆ ಕರೆತಂದಳು.

ನಾನು—ಹಾಗಾದರೆ ಅವಳು ಅಜ್ಞಾನದಿಂದ ಚವನರ ಕಣ್ಣನ್ನು ಕುಕ್ಕಲಿಲ್ಲ.

ಪಂಡಿತರು—ಅವಳೇ ಕುಕ್ಕುವವಳು! ಮುಚ್ಚಿ ಬೆಳೆದ ಹುತ್ತದಲ್ಲಿ ಚವ ನರು ಇದ್ದುದು ಅವಳಿಗೆ ಮೊದಲೇ ಗೊತ್ತಿತ್ತಿಲ್ಲ?

ನಾನು—ಹಾಗಾದರೆ ಚವನರಿಗೆ ಬಹಳ ಕೋಪ ಬಂತು, ಅವರು ಶಪಿಸಿ ದರು ಎಂದು ಹೇಳಿದುದು?

ಪಂಡಿತರು—ಸುಳ್ಳು; ಬರೀ ಸುಳ್ಳು, ಅಮೆರಿಕದಲ್ಲಿ ಇದಕ್ಕೆ ಬನಾನಾ ಆಯಿಲ್ (ಬಾಳೆಯ ಎಣ್ಣೆ) ಎನ್ನುತ್ತೇವೆ. ಒಳ್ಳೆ ಕೆಲಸ ಸಾಧಿಸುವುದಕ್ಕಾಗಿ ನಿರ್ಮಿಸಿದ ಬಾಳೆಹಣ್ಣಿ ಎಣ್ಣೆಯಲ್ಲದೆ, ಇದು ಬೇರೇನೂ ಅಲ್ಲ.

ನಾನು—ಸರ್ಯ್ಯಾತಿಯು ಪರಿವಾರದವರಿಗೆಲ್ಲ ಉದರ ವ್ಯಾಧಿ ಬಂದಿತೆಲ್ಲ? ಶಾಪವಿಲ್ಲದೆ ಹಾಗೆ ಆಯಿತೆ?

ಪಂಡಿತರು—ಒಂದೇ ಕಾಲದಲ್ಲಿ ಒಂದೇ ಬಗೆಯ ಊಟಮಾಡಿದವರಿಗೆ ಒಂದೇ ಬಗೆಯ ರೋಗವುಂಟಾದರೆ ಕಾರಣವನ್ನು ಆ ಅಡಿಗೆ ಮನೆಯಲ್ಲಿ ತಾನೇ ಹುಡುಕಬೇಕು? ನಿಮ್ಮ ದೇಶದಲ್ಲಿರುವ ವೈದ್ಯ ಗ್ರಂಥಗಳಲ್ಲಿ, "ಸಿದ್ಧನಾಗಾರ್ಜುನ ಕಕ್ಷಪುಟಂ" ಎನ್ನುವ ಅಧ್ಯಾಯವನ್ನು ಓದಿ ನೋಡಿದರೆ, ಉದರ ಶೂಲೆಯನ್ನು ಉಂಟುಮಾಡಲೂ ಮತ್ತು ಗುಣಪಡಿಸಲೂ ಉಪಯೋಗವಾಗುವ ಮೂಲಿಕೆಗಳ ಹೆಸರನ್ನು ತಿಳಿಯಬಹುದು. ತಾನೂ ತನ್ನ ತಂದೆಯೂ ಮೊದಲು ಊಟಮಾಡಿದ ನಂತರ, ಬೇಕಾದ ಮೂಲಿಕೆಯನ್ನು ಆಹಾರಕ್ಕೆ ಬೆರಸುವುದು ಸುಕನ್ಯಾಳಿಗೆ ಅಂತಹ ಕಷ್ಟವೆ?

ನಾನು—ಅಬ್ಬ! ಆ ಮಹಾಮಾಯವೆಲ್ಲ—

ಪಂಡಿತರು—ಎಲ್ಲವೂ ಚವನರನ್ನು ವರಿಸಲು, ಸರ್ಯ್ಯಾತಿಯ ಸಮ್ಮತಿ ಹೊಂದುವುದಕ್ಕಾಗಿಯೇ; ಚವನರು ತಪಸ್ಸು ಮಾಡಿದವರು; ಶಾಪ ಕೊಡಬಲ್ಲವರು ಎಂಬುದು ಪ್ರಕಟವಾಗಿ ಬಿಟ್ಟಮೇಲೆ ವಿವಾಹಕ್ಕೆ ಅಡ್ಡಿ ಎಲ್ಲಿ ಬಂತು?

ನಾನು—ಅದಕ್ಕೆ ಹುತ್ತವೂ ಸಹಾಯಕವೇ.

ಪಂಡಿತರು—ಸಂದೇಹವೇನು? ಹುತ್ತ ಅವರನ್ನು ಮುಚ್ಚಿಕೊಂಡಿರದಿದ್ದರೆ, ಅವರಿಗೆ ಇನ್ನೂ ಯವ್ವನವೆಂಬುದು ಗೊತ್ತಾಗಿ ಬಿಡುತ್ತಿದ್ದಿತೆಲ್ಲ? ಅವರನ್ನು ಅರಿತವನು ಯಾವನಾದರೂ ಬರಬಹುದು. ಆ ವಯಸ್ಸಿನಲ್ಲಿ ಹೇಗೆ ಏಕೆ ಋಷಿ ಪದವಿಯನ್ನು ಹೊಂದಿದನೆಂದು ಕೇಳಿಬಿಡಬಹುದು.

ನಾನು—ಆದುದರಿಂದ ರಾಜನು ಊರಿಗೆ ಹಿಂದಿರುಗುವವರೆಗೆ—

ಪಂಡಿತರು—ಅಲ್ಲಿಯವರೆಗೆ ಹುತ್ತವೇ ಅಂಗಿ. ಅವರ ನಂತರ ಪಯೋಷ್ಣಿಯಲ್ಲಿ ಸ್ನಾನ ಶುದ್ಧಿ. ಆ ಸ್ನಾನದಿಂದ ಚವನರಿಗೆ ಯವ್ವನ ಬರಲಿಲ್ಲ. ಹಳೆಯ ಯುವಕರು ಮತ್ತೆ ಯುವಕರಾಗಿಯೇ ಹೊಳೆದರು. ಆದರೆ ಆ ದಂಪತಿಗಳು ಇದನ್ನು ಹೇಗೆ ಒಪ್ಪಿಕೊಳ್ಳುವುದು? ಅದಕ್ಕಾಗಿಯೇ ಅಲ್ಲಿಯವರೆಗೆ ಮುದುಕರಾಗಿದ್ದವರೆಂದೂ ಆಗತಾನೇ ಸ್ನಾನದಿಂದಲೂ ಔಷಧಿಯಿಂದಲೂ ಯವ್ವನವನ್ನು ಸಂಪಾದಿಸಿದರೆಂದೂ ಆಕೆ ಕತೆ ಕಟ್ಟಿಬಿಟ್ಟಳು.

ನಾನು—ನಿಮ್ಮ ಅಭಿಪ್ರಾಯದಂತೆ ಅಶ್ವಿನೀ ದೇವತೆಗಳು ಅವರಿಗೆ ನದಿಯಲ್ಲಿ ಸ್ನಾನಮಾಡಲು ಹೇಳಲೂ ಇಲ್ಲ? ಔಷಧಿಯನ್ನೂ ಕೊಡಲಿಲ್ಲ?

ಪಂಡಿತರು—ಚವನರು ಮಾಡಿದ ತಪಸ್ಸಿನ ಕಷ್ಟದಿಂದ ಅವರಿಗೆ ರೋಗಗಳು ಉಂಟಾಗಿದ್ದಿರಬಹುದು. ಅದಕ್ಕಾಗಿ ದೇವತೆಗಳು ಆ ಔಷಧಿಯನ್ನು ಮಾಡಿಕೊಟ್ಟಿರಬಹುದು. ಆದರೆ ಕಾಲಬಳಿಯಲ್ಲೇ ಹರಿಯುತ್ತಿರುವ ನದಿಯಲ್ಲಿ ಸ್ನಾನ ಮಾಡು ಎಂದು ಹೇಳಲು ದೇವಲೋಕದಿಂದ ಇಬ್ಬರು ದೇವತೆಗಳು ಬರಬೇಕಾದ ಆವಶ್ಯಕವಿಲ್ಲವಲ್ಲ. ನನ್ನ ಅಭಿಪ್ರಾಯದಲ್ಲಿ ಸುಕನ್ಯಾಳ ಮನೋರಥ ಅಲ್ಲಿ ನೆರವೇರಿದುದರಿಂದಲೇ ಆ ಸ್ಥಳಕ್ಕೆ ಮಹಾತ್ಮ್ಯೆ.

ನಾನು—ಈ ಸುಳ್ಳು ಕತೆಗೆ ದೇವತೆಗಳಿಬ್ಬರೂ ಯಾಕೆ ಸಹಕಾರಿಗಳಾದರು?

ಪಂಡಿತರು—ಅವರದು ಹೇಗೆ ಸಹಕಾರ? ಅವರು ಯಾವ ಕತೆಯನ್ನೂ ಹೇಳಲಿಲ್ಲವಲ್ಲ? ತಮ್ಮನ್ನು ಒಳಗೊಂಡ ಪ್ರಚಾರದಲ್ಲಿರುವ ವದಂತಿಯನ್ನು ಅವರು ಪ್ರತಿಭಟಿಸದೆ ಸುಮ್ಮನಾಗಿಬಿಟ್ಟರು. ಅಷ್ಟೆ? ಆ ಕತೆಯಿಂದ ಯಾರಿಗೆ ಏನು ಕುಂದು? ಅದನ್ನು ನಂಬಲು ಸಿದ್ಧವಾಗಿರುವವರ ಮನಸ್ಸಿನಲ್ಲಿ ಅದು ಕಲ್ಪದ (ಯವ್ವನ ಬರುವ ವೈದ್ಯ) ಮಹಿಮೆಯನ್ನು ತಾನೇ ಸ್ಥಾಪಿಸುವುದು. ಅಲ್ಲದೆ ಅವರು ಚವನರ ಮಿತ್ರರು. ಮನುಷ್ಯರಿಗೆ ಉಪಕಾರ ಮಾಡುವುದರಲ್ಲಿಯೇ ತೊಡಗಿರುವವರು; ಸುಕನ್ಯಾ ತಾಯಿಯಿಲ್ಲದ ಹೆಣ್ಣು. ತಂದೆಯ ಹಠಮಾರಿತನವನ್ನು ಜಯಿಸಿ ತನಗೆ ಬೇಕಾದ ವರನನ್ನು ಆಕೆ ಹೊಂದಲು ಅವರು ಸಹಾಯ ಮಾಡುವರೋ? ವಿರೋಧಿಸುವರೋ ನೀವೇ ಹೇಳಿ.

ನಾನು—ಅಬ್ಬ! ಸುಕನ್ಯಾಳಿಗೆ ತಾನೇ ಏನು ಪುಂಡುತನ!

ಪಂಡಿತರು—ಪುಂಡುತನವೆ? ಅವಳ ನಡತೆ ಹಾಗೆ ಪುಂಡುತನವಾಗಿದ್ದಿದ್ದರೆ ಎಲ್ಲವನ್ನೂ ಅರಿತ ಸೀತಾದೇವಿ ರಾಮಾಯಣದಲ್ಲಿ ಆಕೆಯನ್ನು ಅಷ್ಟು ಸ್ತೋತ್ರ ಮಾಡುತ್ತಿದ್ದಳೆ? ಅವಳಿಗೆ ಏನು ಸಾಮರ್ಥ್ಯ. ಏನು ಧೈರ್ಯ! ಎಂದು ಹೇಳಿ. ನಾನೂ ಅನುಮೋದಿಸುವೆನು. ನಾನು ಮೊದಲೇ ಹೇಳಲಿಲ್ಲವೆ? ಅಂತಹ ಹುಬ್ಬುಳ್ಳ ಸ್ತ್ರೀಯರನ್ನು ಕಂಡರೆ—

ನಾನು—ಕಂಡರೆ ಬಹಳ ಎಚ್ಚರಿಕೆಯಿಂದಿರುತ್ತೇನೆ; ಮರೆಯುವುದಿಲ್ಲ.

ಪಂಡಿತರು—ಹಾಗೆ ನೋಡಿದರೆ, ಎಲ್ಲ ಸ್ತ್ರೀಯರ ವಿಷಯದಲ್ಲಿಯೂ ಬಹಳ ಎಚ್ಚರಿಕೆಯಿಂದಿರುವುದೇ ಉತ್ತಮ. ಹಾ! ಹಾ!

ನಾನು—ನಿಮಗೆ ಬಹಳ ವಂದನೆ. ನನ್ನ ಸಂದೇಹಗಳನ್ನು ನಿವರ್ತಿ ಮಾಡಿದುದಕ್ಕಾಗಿಯೂ — ಹುಂ — ಕೊನೆಯಲ್ಲಿ ಹೇಳಿದ ಬುದ್ಧಿವಾದಕ್ಕಾಗಿಯೂ—

ಪಂಡಿತರು—ಹಾ! ಹಾ! ಹಾ! ಹಾ!

ಅವರೊಡನೆ ಟೆಲಿಫೋನ್ ಸಂಭಾಷಣೆ ಮುಗಿಯಿತು.

§ § § §

ಪ್ರೊಫೆಸರ್ ಪಿಂಪಿಳ್‌ರ ಪಾಂಡಿತ್ಯವನ್ನು ಒಳಹೊಕ್ಕು ನೋಡಿ ಹೇಳಲು ನಾನು ತಜ್ಞನಲ್ಲ. ಆದರೆ ಹೀಗೆ ಪುರಾಣಗಳನ್ನು ತಲೆಕೆಳಕಾಗಿ ಓದುವವರೂ ಸ್ತ್ರೀಯರನ್ನು ಕುರಿತು ಹೀಗೆ ಹೇಳುವವರೂ ಮಹಾ ಅಧಿಕಪ್ರಸಂಗಿಗಳೆಂಬುದು ಸ್ಪಷ್ಟವಾದ ಮಾತು. ಪುರಾಣಗಳಿಗೆಲ್ಲ 'ರಿಪೇರ್' ಮಾಡುವ ವಿಚಿತ್ರ ದೀಪಿಕಾಕಾರರು ಮತ್ತೊಬ್ಬ ಅಧಿಕಪ್ರಸಂಗಿ ಎಂಬುದು ನಿಶ್ಚಯ. ಒಂದು ವೇಳೆ ಈ ಪಂಡಿತರೇ ಹಿಂದೆ ಒಂದು ಜನ್ಮದಲ್ಲಿ ಆ ಪುಸ್ತಕವನ್ನು ಬರೆದರೋ ಎಂಬುದೂ ನನಗೆ ಸಂದೇಹ. ಒಂದು ಲೋಕಕ್ಕೆ ಇಂತಹ ಇಬ್ಬರು ಮನುಷ್ಯರು ಬೇಕೆ?

---

# ವನಮಾಲಾ

ಟ್ರಾಮ್ ಬಂಡಿಯಲ್ಲಿ ಹೋಗುತ್ತಿದ್ದೆ. ನನ್ನ ಪಕ್ಕದಲ್ಲಿ ಕುಳಿತಿದ್ದವನು ತನ್ನ ಮೊಳಕೈಯಿಂದ ಅವನ ಪಕ್ಕದಲ್ಲಿದ್ದವನನ್ನು ಮೆಲ್ಲಗೆ ತಿವಿದು "ಅಲ್ಲಿ ನೋಡು, ಆ ಮೂಲೆಯಲ್ಲಿ ಇದ್ದಾರಲ್ಲಾ – ವಿಳ್ಯೇದೆಲೆ ಮೆಲ್ಲುತ್ತಾ – ಆ ಮುದುಕರು ಎಷ್ಟು ಅದೃಷ್ಟಶಾಲಿ ಗೊತ್ತೇ? ಅವರೇ, ಒಬ್ಬಳು ಪ್ರಸಿದ್ಧಳಾದ ಸ್ತ್ರೀಗೆ ಇಂಗ್ಲೀಷ್ ಪ್ರೌಢ ವಿದ್ಯಾಭ್ಯಾಸ ಮಾಡಿಸುತ್ತಿದ್ದಾರಂತೆ. ಆದರಿಂದ ಅವಳೊಡನೆ ಪ್ರತಿನಿತ್ಯವೂ ಒಂದು ಗಂಟೆ ಮಾತನಾಡುವ ಭಾಗ್ಯ ಈ ಪುಳಿ ಮೂಟೆಗೆ ಸಿಕ್ಕಿದೆ" ಎಂದನು.

" ಆ ಸ್ತ್ರೀ ಯಾರು ? "

" ವನಮಾಲಾ "

" ಸಿನಿಮಾ ತಾರೆ ವನಮಾಲೆಯೋ ? "

" ಬೇರೆ ಯಾರು ಆಗಿದ್ದರೆ ತಾನೇ ಇದನ್ನು ಒಂದು ವಿಷಯ ಎಂದು ನಿನಗೆ ಹೇಳುತ್ತಿದ್ದೆ ? ಅದು ಇರಲಿ. ಯಾತಕ್ಕೋಸ್ಕರ ಹಾಲಿವುಡ್ ಭಾಷೆ ಯಲ್ಲಿ " ತಾರೆ " ಎಂದು ಹೇಳಬೇಕು ? ನಿನಗೇನು ಕಿವಿ ಇಲ್ಲವೇ ? ಅವಳು ಹಾಡುವುದನ್ನು ಕೇಳಿದರೆ ಅವಳನ್ನು ಗಂಧರ್ವ ಸ್ತ್ರೀ ಎಂದೇ ಹೇಳಬಹುದು ಎಂದು ನಿನಗೆ ತೋರುವುದಿಲ್ಲವೇ ? "

" ಹಾಗೆ ಹೇಳುವುದಾದರೆ ನಿನಗೆ ಕಣ್ಣಿಲ್ಲವೇ ? ಅವಳ ಸೌಂದರ್ಯ ವನ್ನೂ, ಅಭಿನಯವನ್ನೂ ನೋಡಿದರೆ ಅಪ್ಸರ ಸ್ತ್ರೀ ಎಂದೇ ಏಕೆ ಹೇಳ ಕೂಡದು ? "

ಇಷ್ಟರಲ್ಲಿ ಬಂಡಿ ನಿಂತುದರಿಂದ, ಅವರಿಬ್ಬರೂ ಇಳಿದು ನಗುತ್ತಾ ಮಾತ ನಾಡಿಕೊಂಡು ಹೋದರು. ದಾರಿಯುದ್ದಕ್ಕೂ ನನ್ನ ಮನಸ್ಸಿನಲ್ಲಿ ಈ ಸಂಭಾ ಷಣೆಯೇ ಕೆಲಸಮಾಡುತ್ತಿತ್ತು. ಮನೆ ಸೇರುವುದರೊಳಗೆ ನನ್ನ ಮನಸ್ಸನ್ನು ಒಂದು ವಿಧವಾಗಿ ದೃಢಪಡಿಸಿಕೊಂಡೆ. ವನಮಾಲಾವಿನೊಡನೆ ನನಗೆ ಪರಿಚಯ ವಿಲ್ಲದಿದ್ದರೂ ಅವಳಿಗ ಈ ಕೆಳಗಿನಂತೆ ಒಂದು ಪತ್ರ ಬರೆಯಲು ತೀರ್ಮಾ ನಿಸಿದೆ.

" ಶ್ರೀಮತಿ ವನಮಾಲಾ ಅವರಿಗೆ. ಕೊನಷ್ಟೆಯ ಉಭಯ ಕುಶಲೋ ಪರಿ. ಬಹು ಆಸೆಯಿಂದ ಬರೆಯುದು" ನಿಮಗೆ ಇಂಗ್ಲೀಷಿನಲ್ಲಿ ಪ್ರೌಢ ವಿದ್ಯಾ ಭ್ಯಾಸ ಮಾಡಿಸುವುದಕ್ಕಾಗಿ ಒಬ್ಬ ಉಪಾಧ್ಯಾಯರು ಬೇಕಾಗಿದೆ ಎಂದು ತಿಳಿ ಯಿತು. ಅದು ನಿಜವಾದರೆ, ನನ್ನನ್ನೇ ಟ್ಯೂಟರನನ್ನಾಗಿ ನಿಯಮಿಸಿಕೊಳ್ಳ ಬೇಕೆಂದು ಬೇಡುತ್ತೇನೆ.

ಇಂಗ್ಲೀಷಿನಲ್ಲಾಗಲೀ ಇತರ ವಿದ್ಯೆಗಳಲ್ಲಾಗಲೀ ನನಗೆ ಇರುವ ಪಾಂಡಿ ತ್ಯದ ಬಗ್ಗೆ ಅನೇಕ ಯೋಗ್ಯತಾ ಪತ್ರಗಳು (ಸರ್ಟಿಫಿಕೇಟ್) ನನಗೆ ದೊರೆತಿವೆ. ಅವುಗಳಲ್ಲಿ ನಾನಾಗಿ ಹುಡುಕಿ ಆರಿಸದೆ, ಕಣ್ಣುಗಳನ್ನು ಮುಚ್ಚಿಕೊಂಡು ಕೆಲ ವನ್ನು ಮಾತ್ರ ತೆಗೆದು ಇದರ ಕೆಳಗೆ ಸೇರಿಸಿದ್ದೇನೆ. ಇವುಗಳನ್ನು ನೀವು ಓದಿದೊಡನೆಯೇ ನನ್ನನ್ನೇ ನಿಯಮಿಸಿಕೊಳ್ಳುವಿರೆಂದು ನನಗೆ ಪೂರ್ಣ ನಂಬಿಕೆ

ಉಂಟು. ಅನುಕೂಲವಾದ ಉತ್ತರವನ್ನು ಮರು ಟಪಾಲಿನಲ್ಲೇ ಎದುರು ನೋಡುತ್ತಿರುತ್ತೇನೆ. ಅದು ಬರದಿದ್ದಲ್ಲಿ, ಇನ್ನೂ ಕೆಲವು ಸರ್ಟಿಫಿಕೇಟುಗಳನ್ನು ನಾನು ಕಳುಹಿಸುವ, ಅವುಗಳನ್ನು ನೀವು ಓದುವ ಆವಶ್ಯಕತೆಯುಂಟಾಗುತ್ತದೆ.

ಇತಿ ನಿಮ್ಮವ,
ಕೊನಷ್ಟೈ.

ಇದರೊಡಸಿರುವ

## ಯೋಗ್ಯತಾ ಪತ್ರಗಳು

(೧) ಓ! ಕೊನಷ್ಟೈ ಮಾಮನಿಗೆ ಇಂಗ್ಲಿಷ್ ಚೆನ್ನಾಗಿ ಬರುತ್ತದೆ ಯೆಲ್ಲ! ಲಲಿತಾ ಅಮಾಮಿಯೊಡನೆ ಚಟ್ ಪಟ್ ಎಂದು ಮಾತನಾಡುತ್ತಾರೆಲ್ಲ! (ಸಹಿ) ವಿನೋದಿನಿ ಪರಿಮಳ, ರಂಗ (ಪಕ್ಕದ ಮನೆಯ ಮಕ್ಕಳು)

(೨) ಮಲಯ ಮಾರುತ ಆಫೀಸು:— ಕೊನಷ್ಟೈಗೆ ಇಂಗ್ಲೀಷ್ ಚೆನ್ನಾಗಿ ಬರುತ್ತದೆ. ನಮಗೆ ಅವರು ಕೆಲವು ತಮಿಳು ಕತೆಗಳನ್ನು ಕಳುಹಿಸಿದ್ದಾರೆ. ಅವುಗಳಿಂದ, ಅವರಿಗೇನೋ ತಮಿಳು ಶುದ್ಧವಾಗಿ ತಿಳಿಯದು ಎಂಬುದು ಪ್ರತ್ಯಕ್ಷವಾಗಿದೆ. ಆದ್ದರಿಂದ ಬೇರೆ ಯಾವುದಾದರೂ ಒಂದು ಭಾಷೆ ಚೆನ್ನಾಗಿ ತಿಳಿಯದೆ ಹೋಗಿದ್ದರೆ ಅವರು ಇಷ್ಟು ದಿವಸಗಳಿಂದ ಹೇಗೆ ಹೊಟ್ಟೆ ಬೆಳೆಸಿಕೊಂಡು ಕುಳಿತಿರುತ್ತಿದ್ದರು? ಆದ್ದರಿಂದ ಅವರಿಗೆ ಇಂಗ್ಲಿಷ್ ಚೆನ್ನಾಗಿ ತಿಳಿದೇ ಇರಬೇಕು. (ಸಹಿ) ಮಲಯ ಮಾರುತ ಪತ್ರಿಕಾ ಸಂಪಾದಕರು.

(೩) ತಿರುಪ್ಪಲ್ಲಾಣಿ— ಕೊನಷ್ಟೈ ನನಗೆ ಪ್ರತ್ಯಕ್ಷವಾಗಿ ತಿಳಿಯದು. ಆದರೆ ಅವರ ಜಾತಕವನ್ನು ನೋಡಿದ್ದೇನೆ. ಅವರಿಗೆ ವಾಕ್‌ಸ್ಥಾನದಲ್ಲಿ ಅಸುರ ಗುರುವಾದ ಶುಕ್ರಾಚಾರ್ಯರು ಇರುವುದರಿಂದ, ನೀಚಭಾಷೆಯಾದ ಇಂಗ್ಲೀಸನ್ನು ಓದುವ ಹೇಳಿಕೊಡುವ ಯೋಗವಿದೆ ಎಂದೇ ತೋರುವುದು.

ಇದಕ್ಕೂ ಮೇಲೆ ನಿರ್ದಿಷ್ಟವಾಗಿ ಹೇಳಬೇಕೆಂದರೆ, ಅದು ಅವರ ಹತ್ತಿರ ಪಾಠ ಹೇಳಿಸಿಕೊಳ್ಳುವವರ ಅದೃಷ್ಟವನ್ನು ಅವಲಂಬಿಸಿದೆ. ಬೇಕಾದರೆ ಅವರುಗಳ ಜಾತಕವನ್ನೂ ನೋಡುತ್ತೇನೆ. ಜಾತಕ ಒಂದಕ್ಕೆ ಒಂದೇ ರೂಪಾಯಿ. ನಾಲ್ಕು ಪ್ರಶ್ನೆಗಳಿಗೆ ಉತ್ತರ ಹೇಳುವುದಕ್ಕೆ ೭ ಆಣೆ. ಅಂಚೆ ವೆಚ್ಚ ಪ್ರತ್ಯೇಕ.

(ಸಹಿ) ಪರಾಶರ ಜೋಯಿಸರು. ಸುಗ್ರೀವೋಪಾಸನೆ ಜ್ಯೋತಿರ್ನಿಲಯ, ತಿರುಪ್ಪಲ್ಲಾಣಿ.

(೪) ನನ್ನ ಸ್ನೇಹಿತ ಕೊನಷ್ಟೈಯನ್ನು ನೋಡುವಾಗಲೆಲ್ಲ, "ತೊಳೆದ ಕೆಂಡ" ಎಂದು ಹೇಳುತ್ತಾರಲ್ಲಾ ಆ ಮಾತು ನನಗೆ ಜ್ಞಾಪಕಕ್ಕೆ ಬರುತ್ತದೆ. ಹೊರಗಡೆ ನೋಡಿದರೆ ಬೂದಿಯಂತೆ ಇದ್ದಾನೆ. ಆದರೆ ಅವನಲ್ಲಿ ವಂಚನೆ ಇಲ್ಲ. ಒಳಗಡೆಯೂ ಅದೇ ಬೂದಿಯೇ. (ಸಹಿ) ಬಲರಾಮ.

(೫) "ನಿಮ್ಮ ಸಾಮರ್ಥ್ಯವನ್ನು ಕುರಿತು ನನ್ನ ಕೈಯಿಂದ ಒಂದು ಯೋಗ್ಯತಾ ಪತ್ರ ಈಗಲೇ ಬೇಕೇ? ನಿಶ್ಚಯವಾಗಿಯೂ ಬೇಕೇ? ಹಾಗಾದರೆ ನಿಜಸಂಗತಿಯನ್ನು ಬರೆದುಬಿಡುತ್ತೇನೆ! ಬರೆದು ಬಿಡಲೇ? (ಸಹಿ)ಲಲಿತಾ."

ವನಮಾಲಾ ಮದರಾಸಿನಲ್ಲಿಯೇ ನೂಗಂಬಾಕಂನಲ್ಲಿ ವಾಸಿಸುತ್ತಿರುವುದಾಗಿ ತಿಳಿದುಕೊಂಡೆ. ಅವಳ ವಿಳಾಸವನ್ನು ಟೆಲಿಫೋನ್ ಪುಸ್ತಕದಿಂದ ಕಂಡುಹಿಡಿದು ಈ ಪತ್ರವನ್ನು ಟಪಾಲಿನಲ್ಲಿ ಹಾಕಿಬಿಟ್ಟು ಸಹನೆಯಿಂದ ಕಾಯುತ್ತಿದ್ದೆ. ಮೂರನೆಯ ದಿವಸ ಉತ್ತರ ಬಂತು.

"ನಿಮ್ಮ ಕಾಗದ ಅಧಿಕ ಪ್ರಸಂಗಿತನವೇ ಅಥವಾ ಸಾಮರ್ಥ್ಯವೇ ಎಂದು ಇನ್ನೂ ನನಗೆ ನಿಶ್ಚಯವಾಗಿ ಗೊತ್ತಾಗಿಲ್ಲ. ಅದನ್ನು ತೀರ್ಮಾನಿಸುವುದಕ್ಕಾಗಿಯೇ, ನಿಮ್ಮನ್ನು ನೋಡಲು ಸಮ್ಮತಿಸಿದ್ದೇನೆ. ಮುಂದಿನ ಶನಿವಾರ ಸಾಯಂಕಾಲ ಐದು ಗಂಟೆಗೆ ನಿಮ್ಮನ್ನು ಕಾಣಲು ನನಗೆ ಸೌಕರ್ಯವುಂಟು. ಎಂದು ಬರೆದಿದ್ದಿತು.

ಇದನ್ನು ಹೆಮ್ಮೆಯಿಂದ ಬಲರಾಮನಿಗೆ ತೋರಿಸಿದೆ. "ನಾನೂ ಬರುತ್ತೇನೆ" ಎಂದ. "ಸರಿ" ಎಂದೆ. ನಾವಿಬ್ಬರೂ ಗೊತ್ತಾದ ವೇಳೆಗೆ ವನಮಾಲಾವಿನ ಮನೆಯನ್ನು ಸೇರಿದೆವು. ಅವಳ ತಾಯಿ ನಮ್ಮನ್ನು ಸ್ವಾಗತಿಸಿ, ಹಾಲಿನಲ್ಲಿ ಕೂರಿಸಿ ಒಳಗೆ ಹೋಗಿಬಿಟ್ಟಳು.

ಐದು ನಿಮಿಷ ಕಳೆಯಿತು. ಹತ್ತು ನಿಮಿಷ ಕಳೆಯಿತು. ವನಮಾಲಾವಿನ ನೆರಳು ಕೂಡ ಕಣ್ಣಿಗೆ ಬೀಳಲಿಲ್ಲ. "ನೀನು ಬಂದರೆ ಯಾವ ಕೆಲಸವೂ ಕೈಗೂಡುವುದಿಲ್ಲವೇನೋ?" ಎಂದು ಬಲರಾಮನನ್ನು ಕೇಳಿದೆ. "ನಿನ್ನ ಜಾತಕವನ್ನು ಮತ್ತೆ ಪರಾಶರ ಜೋಯಿಸರಿಗೆ ಕಳುಹಿಸಿ ನೋಡು" ಎಂದು ಅವನು ಯುಕ್ತಿ ಹೇಳಿದ.

ಐದೂವರೆ ಆಯಿತು. "ಮಾತನಾಡದೆ ಎದ್ದು ಹೊರಟು ಹೋಗಿ ಬಿಡೋಣ" ಎಂದೆ.

"ಅದೇ ಸರಿ" ಎಂದ ಬಲರಾಮು.

"ಆದರೆ ನಾವು ಕಳ್ಳರ ಹಾಗೆ ಹೀಗೆ ಕದ್ದು ಹೋಗಿಬಿಟ್ಟರೆ ಅನಂತರ ಮನೆಯೊಳಗೆ ಯಾವುದಾದರೂ ಸಾಮಾನು ಕಾಣದೆ ಹೋದರೆ ನಮ್ಮ ಮೇಲೆ ತಾನೇ ಸಂದೇಹ ಬರುತ್ತೆ?"

"'ನಮ್ಮ ಮೇಲೆ' ಎಂದು ಏತಕ್ಕೆ ಇಬ್ಬರನ್ನೂ ಸೇರಿಸಿಕೊಂಡು ಹೇಳುತ್ತೀ? ನೀನೇ ಅವಳಿಗೆ ಬರೆದವನು. ನಿನ್ನ ಮೇಲೇ ಸಂದೇಹಬರುತ್ತೆ. ನಿನ್ನ ವಿಳಾಸವೂ ಇವಳಿಗೆ ಗೊತ್ತು. ನಿನ್ನ ಮನೆಯನ್ನೇ ಶೋಧಿಸುತ್ತಾರೆ. ನನಗೆ ಯಾವ ಭಯವೂ ಇಲ್ಲ. ಆದ್ದರಿಂದ, ಮೇಜಿನ ಮೇಲಿದೆಯಲ್ಲಾ ಇವಳ ಫೋಟೋ ಇದನ್ನು ನಾನು ತೆಗೆದುಕೊಂಡು ಹೋಗಿ ಬಿಡುತ್ತೇನೆ" ಎಂದು ಬಲರಾಮು ನಾಚಿಕೆಯಿಲ್ಲದೆ ಕೈನೀಡಿದ.

"ಎಲ! ಸುಮ್ಮನೆ ಇರು! ಇದನ್ನು ನಿನ್ನ ಮನೆಗೆ ತೆಗೆದುಕೊಂಡು ಹೋದರೆ ಚಂದ್ರಮತಿ ಏನೆಂದುಕೊಳ್ಳುತ್ತಾಳೆ? ನನ್ನ ಹತ್ತಿರ ಕೊಡು. ನಾನು ತೆಗೆದುಕೊಂಡು ಹೋಗುತ್ತೇನೆ."

"ನಿನಗೆ ಮಾತ್ರ ಪರವಾಗಿಲ್ಲವೋ? ಲಲಿತಾ ಏನೆನ್ನುತ್ತಾಳೆ."

ಅವನು ಎತ್ತಿ ತೋರಿಸಿದ್ದು ಸರಿಯೇ. ಚಂದ್ರಮತಿ ಏನೆಂದುಕೊಳ್ಳುತ್ತಾಳೆ, ಲಲಿತಾ ಏನೆನ್ನುತ್ತಾಳೆ? ಎರಡನ್ನೂ ಕುರಿತು ಆಲೋಚಿಸಬೇಕಾದದ್ದೇ. ಕಡೆಗೆ ಫೋಟೋವನ್ನು ಮರ್ಯಾದೆಯಾಗಿ ಮೇಜಿನ ಮೇಲಿಟ್ಟು ಬಿಟ್ಟೆವು.

ಘಂಟೆ ಐದೂ ಮುಕ್ಕಾಲೂ ಆಗಿಬಿಟ್ಟಿತು. ಕಡೆಗೆ ಐದೂ ನಲವತ್ತೇಳಕ್ಕೆ ಒಂದು ಸೆಕೆಂಡು ಸಹ ಮೊದಲಲ್ಲದೆ—ವನಮಾಲಾ ಒಳಕ್ಕೆ ಬಂದಳು. ಟ್ರಾಮ್ ಬಂಡಿಯ ಪ್ರಯಾಣಿಕರಿಬ್ಬರೂ ಹೇಳಿದುದು ನಿಜ ಎಂದು ತೋರಿತು.

"ನಿಮ್ಮನ್ನು ಬಹಳ ಹೊತ್ತು ಕಾಯಿಸಿಬಿಟ್ಟೆ. ಕ್ಷಮಿಸಬೇಕು" ಎಂದಳು.

"ಸಾಧಾರಣ ಮನುಷ್ಯರಂತೆ ನೀವೂ ಕ್ಷಮೆ ಕೇಳಿಬಿಟ್ಟರೆ ಸಾಲದು. ಏಕೆಂದರೆ, ನಿಮ್ಮಂತಹವರಿಗಾಗಿ ಕಾದಿರುವುದೆಂದರೆ, ಒಂದೊಂದು ಕ್ಷಣವೂ ಒಂದೊಂದು ಯುಗದಂತೆ ತಾನೆ ತೋರುತ್ತದೆ" ಎಂದೆ.

ಇಷ್ಟರಲ್ಲಿ ಬಲರಾಮನು ತನ್ನ ಚಾತುರ್ಯವನ್ನು ತೋರಿಸತೊಡಗಿದನು "ನಾವಿಬ್ಬರೂ ಕಾದು ತಪಿಸಿದುದೇನೋ ನಿಜವೇ. ಆದರೆ ಎಲ್ಲಾ ನಿಮ್ಮನ್ನು ಕಂಡೊಡನೆಯೇ ಹಾರಿಹೋಗಿಬಿಟ್ಟಿತು." ಎಂದನು. ಅವಳು ನಕ್ಕಳು.

ನಾನು ಬಲರಾಮನನ್ನು ಕಟುವಾಗಿ ದೃಷ್ಟಿಸಿ ನೋಡಿದೆ. ನನ್ನೊಡನೆ ಸ್ಪರ್ಧಿಸಿ ಮಾತನಾಡುವುದಕ್ಕಾಗಿಯೇ ನಾನು ಅವನನ್ನು ಕರೆದುಕೊಂಡು ಬಂದುದು? "ಅವನು ಸುಮ್ಮನೆ ಹೇಳುತ್ತಾನೆ. ನಾವೇನೂ ಪರಿತಪಿಸಲಿಲ್ಲ. ನಾವೂ ಈಗ ತಾನೆ ಬಂದೆವು. ನೀವು ಬರುವುದಕ್ಕೆ ಎರಡು ಕ್ಷಣ ಮುಂಚೆ ಬಂದೆವು. ಕುರ್ಚಿಯಲ್ಲಿ ಇನ್ನೂ ಕುಳಿತೂ ಇರಲಿಲ್ಲ, ನೋಡಿ" ಎಂದೆ.

"ಹಾಗೇ! ನೀವು ಐದು ಗಂಟೆಗೇ ಬಂದಿರಿ ಎಂದು ನಮ್ಮ ತಾಯಿ ನನ್ನ ಹತ್ತಿರ ಹೇಳಿದರಲ್ಲಾ?"

"ಹಾಗೆ ಹೇಳಿದರೇನು? ಈ ಕಾಲದ ತಾಯಂದಿರಿಗೇ ಹೀಗೆ? ಏನು ಹೇಳಬಹುದು. ಏನು ಹೇಳಕೂಡದೂ ಎನ್ನುವುದೇ ಗೊತ್ತಾಗುವುದಿಲ್ಲ. ಮಕ್ಕಳು ತಾಯಂದಿರನ್ನು ಸರಿಯಾಗಿ ಬೆಳೆಸದೆ ಇರುವುದರಿಂದ ಆಗಿರುವ ತಪ್ಪು ಇದು" ಎಂದೆ. ಇದನ್ನು ಕೇಳುತ್ತಲೇ ಅವಳ ತಾಯಿ ಯಶೋದಮ್ಮ ಅಲ್ಲಿಗೆ ಬಂದುದರಿಂದ, "ಈ ಮಾತನ್ನು ಬದಲಾಯಿಸುವುದಕ್ಕೆ ಇನ್ನು ಸರಿಯಾದ ಕಾಲವೆಂದು ತೋರುತ್ತದೆ" ಎಂದು ನಾನು ಹೇಳಿದೆ. ಅವರಿಬ್ಬರೂ ನಕ್ಕರು.

"ನಿಮ್ಮಿಬ್ಬರಲ್ಲಿ ಯಾರು ಕೊನಷ್ಟೈ ಎಂದು ಊಹಿಸಬಹುದು. ಮತ್ತೊಬ್ಬರು ಯಾರೋ ತಿಳಿಯಲಿಲ್ಲವಲ್ಲ?" ಎಂದು ಯಶೋದೆ ಕೇಳಿದಳು.

ನಾನು ಬಲರಾಮನನ್ನು "ಇಂಟರ್‌ಡ್ಯೂಸ್" ಮಾಡಿದೆ. ಅವನ ಹೆಸರನ್ನು ಕೇಳಿದ ತಕ್ಷಣ, "ಕೊನಷ್ಟೈಗೆ ಆ ಸರ್ಟಿಫಿಕೇಟು ಕೊಟ್ಟವರೇ? ನಿಮ್ಮನ್ನು ನೋಡಬೇಕೆಂದು ನಾವು ಬಹಳ ಆಸೆ ಪಟ್ಟಿದ್ದೆವು. ಬಂದುದು ಬಹಳ ಸಂತೋಷವಾಯಿತು." ಎಂದಳು.

ಅಡಿಗೆಯವನು ತಿಂಡಿಗಳನ್ನು ತೆಗೆದುಕೊಂಡು ಬಂದನು. ಯಶೋದಮ್ಮನಿಗೆ ಸಂಗೀತ ಜ್ಞಾನವೂ, ಹೆಚ್ಚಾದ ಅನುಭವದಿಂದ ಮಾತ್ರ ದೊರಕುವ ವಾಕ್ ಸಾಮರ್ಥ್ಯವೂ ಬಹಳ ಇತ್ತು. ಮೇಜಿನ ಸುತ್ತ ಕುಳಿತುಕೊಂಡು, ನಾವು ನಾಲ್ಕು ಜನವೂ ಉತ್ಸಾಹದಿಂದ ಸಂಭಾಷಣೆಗೆ ತೊಡಗಿದ ಮೇಲೆ ಕಾಲ ಬಹಳ ಬೇಗ ಕಳೆಯಿತು. ಎದ್ದು ಹೊರಡುವ ವೇಳೆ ಹತ್ತಿರ ಬಂತು.

"ನನಗೆ ಇಂಗ್ಲಿಷ್ ಉಪಾಧ್ಯಾಯರು ಬೇಕಾಗಿದ್ದಾರೆ. ಎಂದು ನಿಮಗೆ ಯಾರು ಹೇಳಿದರು?" ಎಂದು ವನಮಾಲಾ ಕೇಳಿದಳು. ಟ್ರಾಮ್ ಬಂಡಿಯಲ್ಲಿ ನನ್ನ ಕಿವಿಗೆ ಬಿದ್ದ ಸಂಭಾಷಣೆಯನ್ನು ವಿವರಿಸಿದೆ.

"ಹೌದು, ಆ ಮುದುಕರನ್ನೇ ನಿಯಮಿಸಿಕೊಂಡಾಯಿತು. ಎಂದು ನಿಮಗೆ ತಿಳಿಯಿತಲ್ಲಾ. ಆದರೂ ಅಪ್ಲಿಕೇಷನ್ ಏಕೆ ಕಳುಹಿಸಿದಿರಿ?" ಎಂದು ನಗುತ್ತಲೇ ಕೇಳಿದಳು.

ಈ ಪ್ರಶ್ನೆಗೆ ಏನೆಂದು ಉತ್ತರ ಹೇಳುವುದು? ಈ ಕಾಡುಹರಟೆಗಾಗಿ ಬರೆದೆ ಎಂದು ಒಪ್ಪಿಕೊಂಡು ಬಿಡುವುದೇ? ಅಲ್ಲದೆ ಅದನ್ನು ಅವಳು ಇಷ್ಟರೊಳಗೆ ಊಹಿಸಿರಲಾರಳೇ? ಆದ್ದರಿಂದ, ಅವಳು ನಿರೀಕ್ಷಿಸುವ ಉತ್ತರವನ್ನು ಅದರ ಜತೆಯಲ್ಲಿ ಕ್ಷಮಾಯಾಚನೆಯನ್ನೂ ಹೇಳಬಾರದು ಎಂದು ಯೋಚಿಸಿ ಅದಕ್ಕೆ ಬದಲಾಗಿ ಬಾಯಿಗೆ ಮೊದಲು ಬಂದ ಉತ್ತರವನ್ನೇ ಹೇಳಿಬಿಟ್ಟೆ.

"ನಿಮಗೆ ಈಗಾಗಲೇ ಇಂಗ್ಲಿಷ್ ಬರುತ್ತಿರುವುದರಿಂದ, ಇನ್ನೂ ಅದನ್ನು ಕಲಿಯುವುದೆಂದರೆ ಅರ್ಥವೇನು? ಬಹುಶಃ ಇಂಗ್ಲೀಷ್ ಚಿತ್ರಪಟಗಳಲ್ಲಿ ನಟಿಸುವ ಉದ್ದೇಶ ನಿಮಗೆ ಇರಬಹುದೇನೋ ಎಂದು ಊಹಿಸಿದೆ. ಅದು ನಿಜವಾಗಿದ್ದರೆ, ಅದಕ್ಕೆ ಬೇಕಾದ ಇಂಗ್ಲಿಷನ್ನೂ ಇತರ ಸಾಮಾನ್ಯ ಜ್ಞಾನವನ್ನೂ ಕಲಿಸುವುದಕ್ಕೆ ಆ ಹಳ್ಳಿಗಮಾರನ ಕೈಲಿ ಆಗುತ್ತದೆಯೇ? ಇದಕ್ಕೆಲ್ಲಾ ನನ್ನಂತಹ ಒಬ್ಬ ಆನರ್ಸ್ ಬಿ. ಎ. ತಾನೇ ಬೇಕಾಗಿರುವುದು—?"

"ನನ್ನ ಮನೋರಥವನ್ನು ಹೇಗೋ ಊಹಿಸಿಬಿಟ್ಟಿರಲ್ಲಾ!" ಎಂದು ಅವಳು ಆಶ್ಚರ್ಯಪಟ್ಟಳು. ಅದು ನಿಜವಾದ ಆಶ್ಚರ್ಯವೋ, ಅಥವಾ ನಟನಾ ಶಕ್ತಿಯೋ, ಹೇಳಲಾರೆ. ಆಶ್ಚರ್ಯಪಟ್ಟಂತೆಯೇ ಇತ್ತು. ಆಕೆ ಮತ್ತೂ "ಉದ್ದಿಶ್ಯವೇನೋ ನಿಮಗೆ ತಿಳಿದು ಬಿಟ್ಟಿತು. ಇದರ ವಿಷಯವಾಗಿ ನಿಮ್ಮ ಬುದ್ಧಿವಾದವನ್ನು ಏಕೆ ಕೇಳಬಾರದು? ಎಂದು ಯೋಚಿಸುತ್ತಿದ್ದೇನೆ" ಎಂದಳು.

"ಎಲೆಲ! ನನಗೆ ಇಷ್ಟು ಗೌರವ ಸಿಕ್ಕುವುದುಂಟೇ! ಏನಾಗಬೇಕು? ಹೇಳಿ."

"ಇಂಗ್ಲೀಷಿನಲ್ಲಿ ಚಿತ್ರ ತಯಾರಿಸುವವರಿಗೆ ಬರೆಯೋಣವೆಂದು ಯೋಚಿಸುತ್ತಿದ್ದೇನೆ. ಆದರೆ ನನ್ನ ವಿಷಯವಾಗಿ ನಾನೇ ಹೇಗೆ ಹೊಗಳಿ ಬರೆದುಕೊಳ್ಳುವುದು?"

"ಇದೇ ತಾನೇ ನಿಮ್ಮ ಕಷ್ಟ ? ನಿಮ್ಮ ವಿಷಯವಾಗಿ ಅನೇಕ ಪತ್ರಿಕೆಗಳಲ್ಲಿ ಎಷ್ಟೋ ಮೆಚ್ಚಿಕೆಗಳೂ, ಪ್ರಶಂಸೆಗಳೂ ಬಂದಿವೆಯೆಲ್ಲಾ, ಅವುಗಳನ್ನು ಕಳುಹಿಸಿಬಿಟ್ಟರೆ, ಸಾಕೆಲ್ಲಾ ?"

"ನನಗೂ ಅದೇ ಯೋಚನೆಯೇ ತೋರಿತು. ಆದರೆ ಅಷ್ಟನ್ನೂ ಕಳುಹಿಸಬೇಕೆ ? ಅವುಗಳಲ್ಲಿ ಯಾವ ಯಾವುದು 'ಎ ಕ್ಲಾಸೋ ?' ಯಾವ ಯಾವುದು ಇಂಗ್ಲಿಷ್ 'ಪ್ರಡ್ಯೂಸರ್' ಗಳಿಗೆ ರುಚಿಸುತ್ತದೆಯೋ, ಅಂತಹವುಗಳನ್ನು ಮಾತ್ರ ನಿಮ್ಮಂತಹ ಎಲ್ಲ ವಿಷಯಗಳನ್ನೂ ಅರಿತ ಒಬ್ಬರು ನೋಡಿ ಆರಿಸಿಕೊಟ್ಟರೆ ಬಹಳ ಉಪಕಾರವಾದಂತಾಗುತ್ತದೆ. ಇದುವರೆವಿಗೂ ನನ್ನ ವಿಷಯವಾಗಿ ಬಂದ ಎಲ್ಲ ಲೇಖನಗಳನ್ನು ಕತ್ತರಿಸಿ ಒಂದು ಫೈಲಿನಲ್ಲಿ ಸೇರಿಸಿ ಇಟ್ಟಿದ್ದೇನೆ-"

"ಇಷ್ಟೇ ತಾನೇ ? ಆ ಫೈಲು ಎಲ್ಲಿ ?"

"ಅದೋ ಆ ಮೇಜಿನ ಮೇಲೆ ಇದೆಯಲ್ಲಾ, ಅದೇ" ಎಂದು ತೋರಿಸಿದಳು.

"ಅದೇ ?" ಎಂದು ಕೈಯಲ್ಲಿ ತೆಗೆದುಕೊಂಡೆ. ಅಗಲವಾಗಿಯೂ ಉದ್ದವಾಗಿಯೂ ಅದು ಒಂದು ಹಿಡಿಯ ಮಂದವಾಗಿದ್ದಿತು.

"ಹೌದು ಹೌದು. ನಿಮಗೆ ತುಂಬಾ ಶ್ರಮ ಕೊಡುತ್ತಿದ್ದೇನೆ" ಎಂದು ಹೇಳಿ, "ಕುಂತಳ ವೃಸ್ಯರ್" ಚಿತ್ರದಲ್ಲಿ ಆ ಯಾವುದೋ ಹೆಸರಿನ ಋಷಿಯನ್ನು ಮೋಹಿಸುವ ದೃಶ್ಯದಲ್ಲಿ, ಎಷ್ಟೋ ಸಾವಿರ ಮಂದಿ ಕಂಡು ಮರುಳಾಗುವಂತೆ ಅವಳು ಉಪಯೋಗಿಸಿದ ದೃಷ್ಟಿಯನ್ನೂ ಧ್ವನಿಯನ್ನೂ ಆ ಸಮಯದಲ್ಲಿ ನನ್ನೊಬ್ಬನ ಮೇಲೆಯೇ ಪ್ರಯೋಗಿಸಿದಳು.

ಅದರ ಮೇಲೆ ಕೇಳಬೇಕೇ ? "ಶ್ರಮವೇನು ಕ್ರಮವೇನು! ಯಾವ ಶ್ರಮವೂ ಇಲ್ಲ" ಎಂದು ಹೇಳಿಬಿಟ್ಟು ಕಷ್ಟದಿಂದ ಆ ಫೈಲನ್ನು ಮನೆಗೆ ಹೊತ್ತುಕೊಂಡು ಹೋದೆ.

ರಾತ್ರಿ ಊಟವಾದೊಡನೆ ಅದನ್ನು ಓದಲಾರಂಭಿಸಿದೆ. ಐದು ಆರನ್ನು ತಿರುಗಿಸಿ ನೋಡಿಬಿಟ್ಟು ಲಲಿತಾ ಹೋಗಿ ಮಲಗಿಕೊಂಡಳು. ನಾನು ಕೊನೆಯ ಪುಟಕ್ಕೆ ಬಂದು ಸೇರಿದಾಗ ಸರಿಯಾಗಿ ಹನ್ನೆರಡು ಗಂಟೆ ಹೊಡೆಯಿತು. ಅದುವರೆಗೆ ಉತ್ತಮ ದರ್ಜೆಯದೆನ್ನಿಸಿಕೊಳ್ಳುವ ಆರು ವಿಮರ್ಶೆಗಳು ಮಾತ್ರ ಸಿಕ್ಕಿದ್ದವು. ಆ ಪುಟದ ಅಡಿಯಲ್ಲಿ ನಾಲ್ಕು ಬೆರಳು ಅಗಲವುಳ್ಳ ಜಾಗದಲ್ಲಿ ಒಂದು

ಚೂರು ಕಾಗದ ಅಂಟಿಕೊಂಡಿತ್ತು. ಅಂಟಿಸುವಾಗಿನ ತಪ್ಪಿನಿಂದ, ಆ ಕಾಗದ ದೊಳಗಿನ ಬರೆಹವೆಲ್ಲಾ ಒಳಗಡೆ ಸೇರಿಕೊಂಡು ಹೋಗಿತ್ತು. ಇಷ್ಟು ಶ್ರಮವೇ ಆದ ಮೇಲೆ ಈ ಸ್ವಲ್ಪವನ್ನು ಬಿಡುವುದೇನು, ಅವನ್ನೂ ಓದಿಯೇ ಬಿಡೋಣ ಎಂದು ಯೋಚಿಸಿ, ಎಚ್ಚರಿಕೆಯಿಂದ ಅದರ ಮೇಲೆ ನೀರನ್ನು ತೊಟಕಿಸಿ, ನೆನೆ ಯುವುದಕ್ಕೆ ಬಿಟ್ಟು ಆ ಚೂರುಕಾಗದವನ್ನು ಬಿಡಿಸಿ ತೆಗೆದುಕೊಂಡು ಓದಿದೆ. ಅದರಲ್ಲಿ ಹೀಗೆ ಬರೆದಿದ್ದಿತು.

"ನಿಮ್ಮ ಐದು ಯೋಗ್ಯತಾ ಪತ್ರಗಳನ್ನೂ ನಾನು ಓದುವಂತೆ ಮಾಡಿ ದಿರಿ. ಅದಕ್ಕೆ ಪ್ರತಿಯಾಗಿ ಐವತ್ತಕ್ಕೆ ಕಡಿಮೆಯಿಲ್ಲದಂತೆ ನನ್ನ ಯೋಗ್ಯತಾ ಪತ್ರಗಳನ್ನು ನೀವು ಓದುವಂತೆ ಮಾಡಿಬಿಟ್ಟೆ. ಈಗ ನಮ್ಮಿಬ್ಬರ ಲೆಕ್ಕವೂ ಸರಿ ಸಮವಾಯಿತು ಎಂದು ಭಾವಿಸುತ್ತೇನೆ. ನಿಮ್ಮ ಅಭಿಪ್ರಾಯ ಹೇಗೋ? ಅದನ್ನು ಮುಂದಿನ ಶನಿವಾರ ಸಾಯಂಕಾಲ ಐದು ಗಂಟೆಗೆ ಕೇಳುವುದಕ್ಕಾಗಿ ಆಸೆಯಿಂದಿರುತ್ತೇನೆ–ವನಮಾಲಾ."

ಓಹೋ! ಹಾಗೋ ಸಮಾಚಾರ! ನನಗೆ ಆಗಲೇ ಗೊತ್ತು. ಆದರೆ ಅದು ಈಗಲೇ ಜ್ಞಾಪಕಕ್ಕೆ ಬಂದದ್ದು. ಯಾವ ಹೆಂಗಸಾಗಲೀ, ಅಷ್ಟು ನಯ ವಾಗಿ ಜೇನು ಸುರಿಯುವ ಮಧುರವಾದ ಧ್ವನಿಯಿಂದ ಮಾತನಾಡಿದರೆ, ಅವಳು ಹೇಳುವುದನ್ನು ನಂಬಲೇಕೂಡದು. ಆದರೆ ಅದನ್ನು ಈಗ ನೆನೆಸಿ ಕೊಂಡು ಏನು ಪ್ರಯೋಜನ? ಇರಲಿ! ಹೇಗಾದರೂ ಮುಯ್ಯಿಗೆ ಮುಯ್ಯಿ ತೆಗೆಯುವ ದಾರಿಯನ್ನು ಕಂಡುಹಿಡಿಯಬೇಕು.

ಇನ್ನೊಂದು ಸಮಾಚಾರ. ಅಂದು ಅವಳು ನಮ್ಮನ್ನು ಕಾಯಿಸಿದಳು ಅಲ್ಲವೇ? ಸಿನಿಮಾ ಪ್ರಪಂಚದೊಡನೆ ಹೇಗೋ ಸ್ವಲ್ಪ ಸಂಬಂಧ ನನಗೂ ಈಗ ಉಂಟಾಗಿದೆಯೆಲ್ಲಾ? ಆದ್ದರಿಂದ ಸರಿಯಾದ ಕಾಲಕ್ಕಿಂತ ಸ್ವಲ್ಪ 'ಲೇಟಾಗಿ' ಬರುವುದಕ್ಕೆ ನನಗೂ ಹಕ್ಕಿದೆಯೆಲ್ಲಾ? ಶನಿವಾರ ಐದು ಗಂಟೆಗೆ ಬರಹೇಳಿ ದ್ದಾಳೆ. ನಾನು ಸರಿಯಾಗಿ ಐದು ನಲವತ್ತೆಂಟಕ್ಕೇ ಹೋಗಿ ಸೇರುತ್ತೇನೆ.

ಇದನ್ನು ಬಲರಾಮನ ಬಳಿ ಹೇಳಿದೆ. "ಛೇ! ಛೇ! 'ಲೇಟಾಗಿ' ಬರುವ ಹಕ್ಕು ಸ್ತ್ರೀಯರಿಗೆ ಮಾತ್ರ ಉಂಟು. ಅವರುಗಳು ಅಲಂಕಾರ ಮಾಡಿಕೊಂಡು ಮುಗಿಸುವುದರೊಳಗೆ ಕಾಲ ಓಡಿ ಬಿಡುತ್ತೆ. ನಿನಗೇನು ಅಲಂಕಾರವಿದೆಯೋ?

ಗಂಡಸರು ಒಪ್ಪಿಕೊಂಡ ಕಾಲಕ್ಕಿಂತ ಮುಂಚೆಯೇ ತಯಾರಾಗಿರಬೇಕು" ಎಂದನು

ಅವನೂ ಹಟ ಹಿಡಿದ, ನಾನೂ ಹಟಹಿಡಿದೆ. ಕೊನೆಗೆ ಇಬ್ಬರಿಗೂ ಮಧ್ಯಸ್ಥವಾಗಿ ಲಲಿತಾ ಹೇಳಿದಂತೆ, ಶನಿವಾರ ೫ ಘಂಟೆಗೆ ಬದಲಾಗಿ, ಶುಕ್ರವಾರ ೫-೪೮ಕ್ಕೆ ನಾವು ಹೋಗುವುದು ಎಂದು ತೀರ್ಮಾನಿಸಿದೆವು. ಅದೇ ರೀತಿ ವನಮಾಲಾವಿಗೆ ಬರೆದು ಬಿಟ್ಟೆ.

ನಡೆದುದೆಲ್ಲವನ್ನೂ ಬರೆದು ವನಮಾಲಾವಿನ ದುಷ್ಟತನವನ್ನು ಪ್ರಪಂಚವೆಲ್ಲಾ ತಿಳಿಯುವಂತೆ ಮಾಡುವುದೇ ಮುಯ್ಯಿಗೆ ಸರಿಯಾದ ಮುಯ್ಯಿ ಎಂದು ನನಗೆ ತೋರುತ್ತದೆ. ಆದ್ದರಿಂದ ಅದೇ ರೀತಿ ಮಾಡಿ ಬಿಟ್ಟಿದ್ದೇನೆ.

---

# ಕುತ್ತಾಲಂ

—○—

ಸ್ವಲ್ಪ ಹೊತ್ತಿಗೆ ಮುಂಚೆ ಕುತ್ತಾಲಕ್ಕೆ ಬಂದು ಒಬ್ಬ ಮಿತ್ರರ ಮನೆಯಲ್ಲಿ ಇಳಿದುಕೊಂಡೆ. ಬೆಳಿಗ್ಗೆ ಸುಮಾರು ಎಂಟು ಗಂಟೆ ಇರಬಹುದು. ಬಿಸಿಲು ಏರುವುದಕ್ಕೆ ಮುಂಚಿತವಾಗಿಯೇ, ಪರ್ವತದಿಂದ ಹರಿದುಬರುತ್ತಿರುವ ಝರಿಯನ್ನು ಸೇರಬೇಕೆಂದು ಸಾಬೂನು ಮತ್ತು ವಸ್ತ್ರಗಳನ್ನು ತೆಗೆದುಕೊಂಡು ರಸ್ತೆಯಲ್ಲಿ ಹೊರಟಿದ್ದೆ. ರಸ್ತೆಯ ಕೊನೆಯಲ್ಲಿ ಕಲ್ಲು ಮೆಟ್ಟಲುಗಳೂ, ಬಳಿಯಲ್ಲಿಯೇ ಹುಲ್ಲೂ ಬೆಳೆದ ಒಂದು ದಿಣ್ಣೆ ಇದೆಯೆಲ್ಲ, ಅಲ್ಲಿಗೇ ಊರಿನ ಬೀದಿಯೂ ಬಂದು ಸೇರುವುದು. ನಾನು ಆ ದಿಣ್ಣೆಯನ್ನು ಹತ್ತುವ ಸಮಯಕ್ಕೂ, ಬೀದಿಯಿಂದ ಒಬ್ಬ ಪರಮಸುಂದರಿ ಬಂದು ಆ ಸ್ಥಳವನ್ನು ಸೇರುವುದಕ್ಕೂ ಸರಿಯಾಯಿತು.

" ಪರಿಚಯವಿಲ್ಲದ ಸ್ತ್ರೀಯರೊಂದಿಗೆ, ಅವರನ್ನು ಬಲಾತ್ಕರಿಸಿ ಮಾತನಾಡಿಸುವ ಅಧಿಕಪ್ರಸಂಗಿ ಎಂದು ನನ್ನನ್ನು ಭಾವಿಸಬಾರದು." ಎಂದು ಪ್ರಾರಂಭಿಸಿದೆ. "ಹೀಗೆ ನಾನು ಮಾತನಾಡಲು ಉತ್ಸಾಹಿಯಾಗಿರುವ ಕಾರಣ ನೀವು ನನಗೆ ಹಿಂದಿನಿಂದಲೂ ತಿಳಿದಿರುವಿರೆಂಬ ಪ್ರಬಲವಾದ ಒಂದು ನಂಬಿಕೆ

ಮನಸ್ಸಿಗೆ ಉಂಟಾಗಿರುವುದೇ. ನಾನು ಕನ್ನಡಕವನ್ನು ಮನೆಯಲ್ಲಿ ಬಿಟ್ಟುಬಂದಿರುವುದರಿಂದ ಧೈರ್ಯವಾಗಿ ನೀವು ಯಾರೆಂಬುದನ್ನು ಹೇಳಲು ಸಾಧ್ಯವಿಲ್ಲವಾಗಿದೆ-"

ಆಕೆ ಮುಗುಳು ನಗೆ ನಗುತ್ತಾ ಹೇಳಿದಳು "ಏನು ಆಶ್ಚರ್ಯ! ನಿಮ್ಮನ್ನು ದೂರದಲ್ಲಿ ನೋಡಿದಕೂಡಲೇ ನಿಮ್ಮನ್ನು ಕುರಿತು ನನಗೂ ಅದೇ ಬಗೆಯ ಭಾವನೆ ಉಂಟಾಯಿತು. ಆದರೆ ಆಗ ನಿಮ್ಮ ಹೆಸರನ್ನು ಹಿಡಿದು ಕರೆಯಲು ಸಾಧ್ಯವಾಗಲಿಲ್ಲ—" ಎಂದು ಎಳೆದು ಎಳೆದು ಹೇಳಿದಳು.

[ಏನು ಸಾಮರ್ಥ್ಯ! ತನ್ನ ಹೆಸರನ್ನು ಹೇಳದೆ ನನ್ನ ಹೆಸರನ್ನು ಮಾತ್ರ ಗ್ರಹಿಸಲು ನೋಡುತ್ತಾಳೆ! ಆಗಲಿ! ಈ ಆಟದಲ್ಲಿ ನಾನು ಅವಳಿಗೆ ಸೋಲುತ್ತೇನೆಯೇ ನೋಡೋಣ? ]

"ಹೆಸರು ಯಾವುದಾದರೆ ಏನು?" ಎಂದೆ. "ವಾಸ್ತವವಾಗಿ ಪ್ರಿಯಳಾದ ಒಬ್ಬ ಸ್ತ್ರೀಯನ್ನು ಕಂಡರೆ, ಆಕೆಯ ಹೆಸರನ್ನು ತಿಳಿದುಕೊಳ್ಳದಿರುವುದೇ ನನ್ನ ಪ್ರಯತ್ನ. ಏಕೆಂದರೆ ಹಾಗೆ ಇದುವರೆಗೆ, ತಂದೆತಾಯಿಗಳು ಇಟ್ಟ ಹೆಸರಿಗಿಂತ, ಸುಂದರಗಳಾದ, ಅವಳಿಗೆ ತಕ್ಕ ಹೆಸರುಗಳನ್ನು ಅವಳಿಗೆ ಒಂದೊಂದನ್ನಾಗಿ ಇಟ್ಟು ನಾನು ನೋಡಬಹುದೆಲ್ಲ? ಈಗ ನೀವು ಒಂಟಿಯಾಗಿ ಹೋಗುತ್ತಿದ್ದುದನ್ನು ನೋಡಿದಾಗ, ನಳನನ್ನು ಬಿಟ್ಟ ದಮಯಂತಿ ಎಂದು ಆಲೋಚಿಸಿದೆ."

"ನೀವು ಓದಿದ ಕತೆಯಲ್ಲಿ ದಮಯಂತಿ ಕೊಳ್ಳೇಗಾಲದ ಸೀರೆಯನ್ನು ಧರಿಸಿಕೊಂಡು ಹೊರಟಿದ್ದಳೋ?" ಎಂದು ನಕ್ಕಳು.

"ಇಲ್ಲ, ಆದರೂ ನೀವು ಪತಿಯೊಂದಿಗೆ ಇಲ್ಲದೆ ಒಂಟಿಯಾಗಿ ಹೋಗುತ್ತಿರುವುದನ್ನು, ನನ್ನ ಕಣ್ಣಿಗೆ ಬಿದ್ದ ಕಾಲದಲ್ಲಿ ಹುಬ್ಬುಗಂಟು ಹಾಕಿಕೊಂಡಿರುವುದನ್ನೂ ನೋಡಿದರೆ, ಗಂಡನ ಮೇಲೆ ಕೋಪಿಸಿಕೊಂಡಿರುವ ಮತ್ತೊಬ್ಬ ದಮಯಂತಿ ಎಂದು ನಿಮ್ಮನ್ನು ಯಾಕೆ ವರ್ಣಿಸಬಾರದು? ನೀವೇನು ಚೆಲುವಿನಲ್ಲಿ ಅವಳಿಗೆ ಕಡಿಮೆಯಾದವರೆ? ಅಥವ ಅವಳಂತೆ ನೀವೂ ಸಹ ನಿಮ್ಮ ಗಂಡನನ್ನು ಸಾಹಸದಿಂದ ಕಂಡುಹಿಡಿಯಬಲ್ಲವರಲ್ಲವೇ? ಹೇಳಿ."

[ಈ ವಿನೋದ ನನಗೆ ಬಹಳ ಇಷ್ಟ. ಇದ್ದದ್ದರಲ್ಲಿ ಚತುರತೆಯಿಂದಲೇ ನಡೆಸಿಕೊಂಡು ಬರುತ್ತಿದ್ದೇನೆಂದು ನನಗೆ ತೋರುತ್ತದೆ. ಆದುದರಿಂದ ಈಗ ನನಗೆ ಐದು ನಂಬರು ಕೊಟ್ಟುಕೊಳ್ಳುತ್ತೇನೆ.]

" ನಾನು ಪೆಚ್ಚುಮುಖದೊಡನೆ ಒಬ್ಬಳೇ ಬಂದುದಕ್ಕೆ ಕಾರಣ ಹೇಳ ಬೇಕೇ? ಆ ಕಷ್ಟವನ್ನು ಕೇಳಿ. ನನ್ನ ಪತಿಯವರು ಎರಡು ದಿನ ಮುಂಚೆ ನನ್ನನ್ನ ಈ ಊರಿಗೆ ಕೆಲವು ಬಂಧುಗಳೊಡನೆ ಕಳುಹಿಸಿದರು. ತಾವು ನನ್ನ ಹಿಂದೆಯೇ ಕೆಲವು ಸ್ನೇಹಿತರೊಡನೆ ಮೋಟಾರ್ ಕಾರಿನಲ್ಲಿ ಬರುವುದಾಗಿ ಹೇಳಿದರು. ಆದರೆ ಎರಡು ದಿನಗಳಾದರೂ ಅವರು ಬರಲಿಲ್ಲ. ನನಗೆ ಎಷ್ಟು ನೋವಾಗಿರಬಹುದು ನೀವೇ ಹೇಳಿ. ಇಲ್ಲಿಗೆ ಬಂದಂದಿನಿಂದ ನಾನು ಬೀದಿ ಯನ್ನೇ ನೋಡುತ್ತಿದ್ದು, ಇಂದು ಬೆಟ್ಟದ ಝರಿಯಲ್ಲಿ ಸ್ನಾನಮಾಡಿ ಬರೋಣ ವೆಂದು ಹೊರಟೆ. ಆದದ್ದಾಗಲಿ ಎಂದು ಒಬ್ಬಂಟಿಗಳಾಗಿಯೇ ಹೊರಟೆ."

"ಒಂದು ಪಕ್ಷ ಮೋಟಾರು ಗಾಡಿ ತಪ್ಪಿ ಹೋಗಿ ಪೇಚಾಟವಾಗಿರ ಬಹುದು. ನೀವು ಇಳಿದುಕೊಂಡಿದ್ದ ಸ್ಥಳ ತಿಳಿಯದುದರಿಂದ ತಂತಿ ಕೊಡಲು ಸಹ ಸಾಧ್ಯವಾಗದೆ ಈಗ ಅವರು ನಿಮ್ಮನ್ನು ಹುಡುಕುತ್ತಾ ತಿರುಗುತ್ತಿರಬಹುದು.

" ಅಬ್ಬಾ ! ಗಂಡಸರು ಗಂಡಸರ ಪಕ್ಷ ಹಿಡಿದು ತಾನೇ ಮಾತನಾಡ ಬೇಕು. ಈ ಕುತ್ತಾಲದಲ್ಲಿ ಹುಡುಕುವುದಕ್ಕೆ ಎಷ್ಟು ಹೊತ್ತು ಬೇಕು ! ಏನು ಕಷ್ಟ ? ಲಂಕೆಯಲ್ಲಿ ಬಚ್ಚಿಟ್ಟಿದ್ದ ಸೀತೆಯನ್ನು ಸಹ ಶ್ರೀರಾಮಚಂದ್ರ ಕಂಡು ಹಿಡಿದುಬಿಡಲಿಲ್ಲವೇ ? "

" ನೋಡಿದಿರಾ ? ಈ ಕಾರಣದಿಂದ ನಿಮಗೆ ಸೀತಾದೇವಿ ಎಂಬ ಇನ್ನೊಂದು ಹೆಸರನ್ನೂ ಇಡಬಹುದೆಂದು ನನ್ನ ಮನಸ್ಸಿಗೆ ತೋರುತ್ತಿದೆ."

" ಯಾಕೆ ? ಪರಿಚಯವೇ ಇಲ್ಲದಿದ್ದ ಹನುಮಂತನನ್ನು ನೋಡಿದ ಕೂಡಲೇ ಸೀತೆ ಅವನೊಂದಿಗೆ ಮಾತನಾಡಲು ಪ್ರಾರಂಭಿಸಿಬಿಟ್ಟಂತೆ, ನಾನೂ ನಿಮ್ಮೊಡನೆ ಮಾತನಾಡುತ್ತಿರುವುದರಿಂದಲೇ ? ಅದು ಸೀತೆಯ ಅಭ್ಯಾಸವೇ ಎಂದು ಭಾವಿಸಬೇಡಿ."

[ಇವೇನಪ್ಪ ಇದು. ಈ ಆಟ ಬೆಳೆಯುತ್ತಲೇ ಹೋಗುತ್ತಿದೆಯೆಲ್ಲ. ಇಷ್ಟು ಸುಲಭ ವಾಗಿ ನನ್ನನ್ನು ಒಬ್ಬ ಹನುಮಂತನನ್ನಾಗಿ ಮಾಡಿಬಿಟ್ಟಳಲ್ಲ. ಇವಳಿಗೆ ಹದಿನೈದು ನಂಬರು. ಆದರೂ ಒಂದು ಕೈ ನೋಡುತ್ತೇನೆ. ಬೆನ್ನಿನ ಮೇಲೆ ಏಟು ಬೀಳಲಿಲ್ಲವೆಂದೇ ನಟಿಸಿ ಮಾತನಾಡುತ್ತೇನೆ.]

" ಅದೇ ಅಭ್ಯಾಸವಾಗಿದ್ದರೆ ತಾನೆ ತಪ್ಪೇನು ? ಎಲ್ಲಾ ಬಿಟ್ಟು ನಾನು ಯಾಕೆ ಅದನ್ನು ನಿಂದಿಸಲಿ ? ಅದರಿಂದಲೇ ಅಲ್ಲವೇ ನಿಮ್ಮ ಸವಿನುಡಿಗಳನ್ನು ಕೇಳುವ ಆನಂದಾನುಭವ ನನಗೆ ಉಂಟಾಗುತ್ತಿದೆ."

[ಹೋಗಲಿ. ಸ್ತೋತ್ರ ಮಾಡಿದರೂ ಚಿಂತೆಯಿಲ್ಲ. ಹೇಗೋ ತಪ್ಪಿಸಿಕೊಂಡು ಬಿಟ್ಟೆ. ನನಗೆ ಇನ್ನೂ ಐದು ನಂಬರು. ಆದರೂ ಮಾತನ್ನು ಬದಲಾಯಿಸುವುದೇ ಲೇಸು.]

" ಈ ಹಿಂದೆ ನೀವು ಈ ಊರಿಗೆ ಬಂದಿದ್ದಿರಾ ? "

" ಬಂದುದಿಲ್ಲ. ಸರಿಯಾದ ಕಾಲದಲ್ಲಿ ಇಲ್ಲಿ ಬಹಳ ಹಿತವಾಗಿರುವುದೆಂದು ಹೇಳುತ್ತಾರಲ್ಲ ? "

" ಹಿತವೇ ? ನಿಮಗೆ ತೋರುವುದು ಆ ಒಂದೇ ಮಾತೇ. ಇದು ಸಾಧಾರಣವಾದ ಸ್ಥಳವೆ ? ದೇವೇಂದ್ರನು ಮಲಯಮಾರುತವನ್ನೂ ಅಮೃತ ಸೇಚನವನ್ನೂ ತನ್ನ 'ಸ್ಟಾಕ್'ನಿಂದ ತೆಗೆದು ಈ ಊರಿಗೆ ಕಳುಹಿಸುತ್ತಾನಂತೆ."

" ಹಾಗೆಯೇ ? "

" ಹೌದು. ಇವೆರಡರ ವಿಷಯದಲ್ಲಿ ಈ ಸ್ಥಳವನ್ನು ಇಂದ್ರಲೋಕದ 'ಬ್ರಾಂಚ್' ಎಂದೇ ಹೇಳುತ್ತೇನೆ."

" ಇದನ್ನು ಕೇಳಿ ನನಗೆ ಬಹು ಸಂತೋಷ. ನದಿಗೆ ಈಗಲೇ ಹೊರಟೆ–"

" ಆತುರಪಡಬೇಡಿ. ನನ್ನನ್ನು ಬಿಟ್ಟು ಓಡಿಹೋಗುವುದಕ್ಕೇ ಕುತ್ತಾಲದ ಮಹಿಮೆಯನ್ನು ನಿಮಗೆ ಹೇಳಿದ್ದು ? ಈ ಬ್ರಾಂಚ್‌ನಲ್ಲಿ ವ್ಯಾಪಾರ ಮಾಡಬೇಕಾದರೆ ಒಂದು 'ಕಂಡಿಷನ್' ಇದೆ."

" ಏನು ಕಂಡಿಶನ್ ? "

" ಬಹಳ ಕಠಿಣವಾದುದು. "

" ಇರಲಿ ! ಹೇಳಿ. "

" ಇಲ್ಲಿ ಒಂಟಿಯಾಗಿರುವುದರಲ್ಲಿ ಏನೂ ಫಲವಿಲ್ಲ. ಪ್ರತಿಯೊಬ್ಬರೂ ಅನುರೂಪನಾದ ಗಂಡನೊಂದಿಗೋ ಅಥವಾ ಅನುರೂಪಳಾದ ಪತ್ನಿಯೊಂದಿಗೋ ಇದ್ದರೆ ಮಾತ್ರವೇ, ಇಲ್ಲಿ ಸುಖವಾಗಿರುವುದು."

" ಮಾತನ್ನು ಸರಿಯಾದ ದಾರಿಗೆ ತಿರುಗಿಸಿಬಿಟ್ಟೆ. ನನಗೆ ಇನ್ನೂ ಐದು ಮಾರ್ಕು. ಈಗ ಇಬ್ಬರಿಗೂ ನಂಬರು ಸಮವಾಯಿತು."

"ಮಾತನ್ನು ತಿರುಗಿಸಿದ್ದೇನು ? ಮಾರ್ಕು ಯಾವುದು. ನನಗೇನೂ ಅರ್ಥವಾಗುವುದಿಲ್ಲವಲ್ಲ ? "

"ಮನಸ್ಸಿನಲ್ಲಿ ಹೇಳಿಕೊಳ್ಳಬೇಕಾದುದನ್ನು ಆತುರದಲ್ಲಿ ಸ್ಪಷ್ಟವಾಗಿ ಹೇಳಿಬಿಟ್ಟೆ. ಅದನ್ನು ಗಮನಿಸಬೇಡಿ. ಸಂಭಾಷಣೆಯ ನಿಯಮದಂತೆ, ನೀವು

ನನ್ನನ್ನು ಈಗ ಕೇಳಬೇಕಾದ ಪ್ರಶ್ನೆ " ನಿಮ್ಮ ಅಭಿಪ್ರಾಯದಲ್ಲಿ ಒಬ್ಬ ಆದರ್ಶ ಪತ್ನಿ ಹೇಗಿರಬೇಕು ? " ಎಂದು.

" ನನಗೆ ಅದು ಬೇಡ. ಸರಿಯಾದ ಪತಿ ಹೇಗೆ ಇರಬೇಕು ಎಂಬುದನ್ನು—"

" ಆದರ್ಶ ಪತ್ನಿ, ಕೆಲವು ವೇಳೆ ದಮಯಂತಿಯಂತೆ ನಡೆದುಕೊಳ್ಳುತ್ತಾಳೆ. ಕೆಲವು ವೇಳೆ ಸೀತೆಯಂತೆ ಮಾತನಾಡುತ್ತಾಳೆ. ಗಂಡನ ಸಣ್ಣ ತಪ್ಪುಗಳನ್ನು ಗಮನಿಸದೆ, ಮನ್ನಿಸುತ್ತಾಳೆ. ಆಕಾರದಲ್ಲಿ—"

" ಅದು ನನಗೆ ಬೇಡ. ಪತಿಗೆ ಇರಬೇಕಾದ ಗುಣಗಳನ್ನು ವರ್ಣಿಸಿ. ಯಾಕೆ ಹಿಂದೆಗೆಯುತ್ತೀರಿ ? ಅದು ಅಷ್ಟು ಕಷ್ಟವೆ ? "

" ಹೂಂ ಏನೂ ಕಷ್ಟವಿಲ್ಲ."

" ಹಾಗಾದರೆ ಹೇಳಿ."

" ಒಂದೇ ಕ್ಷಣದಲ್ಲಿ ಹೇಳುತ್ತೇನೆ. ದೃಷ್ಟಾಂತವನ್ನೂ ತೋರಿಸುತ್ತೇನೆ. ಆದರೆ ಇದಕ್ಕೆ ಅಡ್ಡಿ ಬರುತ್ತಿರುವುದು ನನ್ನ ವಿನಯ ಸ್ವಭಾವವೊಂದೇ "

" ಅಯ್ಯೋ ಪಾಪ ! ನಿಮ್ಮ ವಿನಯವನ್ನು ತಟ್ಟಿ ಏಳಿಸಬೇಡಿ. ನನ್ನ ಸ್ಪಷ್ಟವಾದ ಮಾತುಗಳನ್ನು ನೀವು ಹೊಗಳಿದರೂ ಸರಿ, ತೆಗಳಿದರೂ ಸರಿ; ಮನಸ್ಸಿನಲ್ಲಿರುವುದನ್ನು ಹೇಳಿಬಿಡುತ್ತೇನೆ. ನನಗೆ ಮಾತ್ರ ಈಗಾಗಲೇ ಮದುವೆ ಆಗದೆ ಇದ್ದಿದ್ದರೆ ನಾನು ನಿಮ್ಮನ್ನೇ ಪತಿಯನ್ನಾಗಿ ಆರಿಸಿಕೊಳ್ಳುತ್ತಿದ್ದೆ. ಸಾಕೇ ? "

" ನಿಮ್ಮನ್ನು ನಾನು ಇಂದು ನೋಡಿದ ಕೂಡಲೇ ಏನೆಂದು ತೀರ್ಮಾನಿಸಿದೆ ಗೊತ್ತೋ ? ಈಗಾಗಲೇ ನನಗೆ ಒಬ್ಬ ಹೆಂಡತಿ ಇಲ್ಲದೆ ಇದ್ದಿದ್ದರೆ ನಾನು ಇಂದೇ ನಿಮ್ಮನ್ನು ಮೊದಲು ಮದುವೆಯಾಗಿ, ಅನಂತರ ಬಾಕಿ ಕೆಲಸ ಗಮನಿಸುತ್ತಿದ್ದೆ."

" ಸರಿ. ಅನ್ಯೋನ್ಯ ಸ್ತೋತ್ರಪಾಠವೆಲ್ಲ ತೃಪ್ತಿಕರವಾಗಿ ಮುಗಿಯಿತಲ್ಲ ? ಇನ್ನು ಅವರವರ ಕಾರ್ಯಗಳನ್ನು ನೋಡಲು ಹೋಗಬಹುದಲ್ಲ."

'' ಮುಗಿದದ್ದೆಲ್ಲಿ ? ಅವರವರ ಕಾರ್ಯವಾವುದು. ಮುಹೂರ್ತವನ್ನು ನೋಡಲು ಹೇಳಬೇಡವೇ ? ''

'' ಮುಹೂರ್ತ ಯಾತಕ್ಕೆ ? ''

" ನಮ್ಮಿಬ್ಬರಿಗೂ ಈಗಾಗಲೇ ಮತ್ತೊಬ್ಬರೊಂದಿಗೆ ವಿವಾಹವಾಗದೆ ಇದ್ದಿದ್ದರೆ, ಒಬ್ಬರನ್ನೊಬ್ಬರು ಈಗ ವಿವಾಹವಾಗಲು ಮುಹೂರ್ತ ಬೇಕೆಲ್ಲ "

" ಚೆನ್ನಾಗಿದೆ ಹೋಗಿ. ಇಂತಹ ಒಂದು ಮುಹೂರ್ತ ನೋಡಿ ಎಂದು ಯಾರಾದರೂ ಹೇಳುವುದುಂಟೆ ? ಹೇಳಿದರೆ ಜೋಯಿಸರು ನಗುವುದಿಲ್ಲವೆ ? "

" ನಗುತ್ತಾರೆಂದು ನಿಮಗೆ ತೋರುವುದೆ ? "

" ಸಂದೇಹವೇ ಇಲ್ಲ. "

" ಹೋಗಲಿ. ಹಾಗಾದರೆ ಅವರಿಗೆ ಯಾಕೆ ದಕ್ಷಿಣೆ ದಂಡ ? ನಾವೇ ಮುಹೂರ್ತವನ್ನು ನೋಡಿಕೊಳ್ಳೋಣ. "

" ನಾವು ಹೇಗೆ ನೋಡಿಕೊಳ್ಳುವುದು, ನಿಮಗೆ ಜ್ಯೋತಿಷ್ಯ ಗೊತ್ತೇ ?"

" ಜ್ಯೋತಿಷ್ಯ ಯಾಕೆ ? ನೂರ ಎಂಟರಲ್ಲಿ ಒಂದು ಸಂಖ್ಯೆ ಆರಿಸಿ, ಹನ್ನೆರಡರಿಂದ ಗುಣಿಸಿ ಭಾಗಿಸಿ ಪದ್ಧತಿಯಂತೆ ಲೆಕ್ಕಾಚಾರ ಹಾಕಿದರೆ ಆಯಿತು."

" ಸರಿ. ನೀವು ಒಂದು ಅಂಕಿ ಹೇಳಿ."

" ನೂರ ಎಂಭತ್ತು."

" ನೂರ ಎಂಟರೊಳಗೆ ಅಲ್ಲವೇ ಹೇಳಬೇಕಾದುದು ? "

" ಆದರೆ ಜೋಯಿಸರಾಗಲಿ ಸ್ನೇಹಿತರಾಗಲೀ ನೂರ ಎಂಟರೊಳಗೆ ಒಂದು ಅಂಕಿ ಹೇಳಿ ಎಂದು ನನ್ನನ್ನು ಯಾವಾಗ ಕೇಳಿದರೂ, ನೂರಎಂಬತ್ತು ಎಂದೇ ಹೇಳಿ ಅವರ ಲೆಖ್ಖಾಚಾರವನ್ನು ಹಾಳುಮಾಡುವುದು ನನ್ನ ಪದ್ಧತಿಯಾಗಿಬಿಟ್ಟಿದೆ. ಈಗ ಇದ್ದಕ್ಕಿದ್ದಂತೆ ಅದನ್ನು ಬದಲಾಯಿಸುವುದು ಹೇಗೆ ? "

" ಇದೆಲ್ಲಾ ಒಂದು ಪದ್ಧತಿಯೋ ! ಹಾಗಾದರೆ ನೀವೇ ಕೊನಷ್ಟೈ ಆಗಿರಬೇಕು. ನಿಮ್ಮ ಹೆಸರನ್ನು ಕಂಡು ಹಿಡಿದುಬಿಟ್ಟೆ ನೋಡಿ. ನನಗೆ ಎಷ್ಟು ನಂಬರು ? ನೂರಕ್ಕೆ ನೂರು ತಾನೇ ? "

ನಾನು ಮೊದಲೇ ಹೇಳಿಬಿಟ್ಟೆನಲ್ಲ ನೀವು ದಮಯಂತಿಗಿಂತ ಹೆಚ್ಚು ಸಾಮರ್ಥ್ಯಶಾಲಿ ಎಂದು ಈಗ ನೀವು ಒಂದು ಅಂಕಿಯನ್ನು ಹೇಳಿ.

" ಇನ್ನೂರ ಹದಿನೆಂಟು "

" ಇದು ಮಾತ್ರ ನೂರೆಂಟರೊಳಗೆ ಒಂದು ಅಂಕಿಯೋ ? "

" ಇಲ್ಲ. ಆದರೆ ನಾನು ಯಾವಾಗಲೂ ನೀವು ತೋರಿಸುವ ದಾರಿಯ

ಲ್ಲಿಯೇ ಹೋಗುವುದು. ಸಾಧ್ಯವಾದರೆ ಎರಡರಷ್ಟು ದೂರ ಹೋಗುವುದು ನನ್ನ ಪದ್ಧತಿ.''

'' ಹಾಗಾದ ಮೇಲೆ ನಾನೂ ಕಂಡುಹಿಡಿದುಬಿಟ್ಟೆ. ಕನ್ನಡಕವಿಲ್ಲದೆ ಕಂಡುಹಿಡಿದುಬಿಟ್ಟೆ. ನೀನಲ್ಲವೇ ನಾನು ಈ ಮೊದಲೇ ಮೇಳ ತಾಳಗಳೊಂದಿಗೆ ನಾನು ಮಾಂಗಲ್ಯ ಕಟ್ಟಿದ ನನ್ನ ಹೆಂಡತಿ ಲಲಿತಾ. ಅಬ್ಬ! ಇಷ್ಟು ಹೊತ್ತೂ ನಿನ್ನನ್ನು 'ನೀನು' ಎಂದು ಏಕವಚನದಲ್ಲಿ ಸಂಬೋಧಿಸುವ ಬದಲು ನೀವು ನೀವು ಎಂದು ಹೇಳಿ, ಎಲ್ಲಾ ಮರ್ಯಾದೆಯ ಮಾತುಗಳನ್ನು ಹುಡುಕಿ ಹುಡುಕಿ ಹೇಳಿಬಿಟ್ಟೆನಲ್ಲ. ಈಗ ಅದಕ್ಕೆ ಮಾಡುವುದೇನು ? ಅದನ್ನು ಮೊದಲು ಹೇಳು''

'' ಹೋಗಲಿ. ನಾವು ಇನ್ನೊಂದು ಬಾರಿ ವಿವಾಹವಾಗುವ ವೆಚ್ಚವಿಲ್ಲದೆ ಶಕುಂತಲೆಯ ಉಂಗುರ ಮತ್ತೆ ದೊರೆತಂತೆ ಒಬ್ಬರನ್ನೊಬ್ಬರು ಕಂಡುಹಿಡಿದು ಬಿಟ್ಟೆವಲ್ಲ. ಅದು ಲಾಭವೇ ತಾನೇ ? ''

ನಿಜ. ಆದುದರಿಂದ ಆ ಲಾಭವನ್ನು ನೆನೆಸಿಕೊಂಡು ಆ ಸಂತೋಷ ದಿಂದಲೇ ಒಬ್ಬರ ಕೈ ಒಬ್ಬರು ಹಿಡಿದುಕೊಂಡು ಪರ್ವತ ಝರಿಗೆ ಹೋದೆವು.

---

# ಸಂಸಾರ

" ದೇಹದಲ್ಲಿ ರೋಗ ಎಂದು ಹೇಳುವಂತೆ ಏನೂ ಇಲ್ಲ. ಬರಿಯ ಹಿಸ್ಟಿ ರಿಯ. ಅದು ಮನಸ್ಸಿಗೆ ಸೇರಿದ ವ್ಯಾಧಿ ಎಂದು ನಿಮಗೇ ಗೊತ್ತಲ್ಲ. ಆದ್ದ ರಿಂದ ಆಯಾಸವಿಲ್ಲದಂತೆ ಮನಸ್ಸಿಗೆ ನೆಮ್ಮದಿ, ಗೆಲುವಾಗಿಟ್ಟದ್ದರೆ ಎಂಟು ದಿನ ಗಳಲ್ಲಿ ತಾನಾಗಿಯೇ ಗುಣವಾಗುವುದು." ಎಂದರು ಡಾಕ್ಟರು.

ಆ ವೇಳೆಗೆ ರೋಗಿಯ ಗಂಡ ವೆಂಕಟರಾಮ ಐಯರವರು ಒಂದು ಐದು ರೂಪಾಯಿನ ನೋಟನ್ನು ಮುಂದಕ್ಕೆ ನೀಡಲು, ಮೂರು ರೂಪಾಯಿಗಳನ್ನು ಮಾತ್ರ ನಿರೀಕ್ಷಿಸಿದ್ದ ಡಾಕ್ಟರು, ಮತ್ತೂ ಬುದ್ಧಿವಾದವನ್ನು ಮುಂದುವರಿಸಿದರು.

" ಯಾವುದಕ್ಕೂ ನಾನು ಒಂದು ಟಾನಿಕ್‌ನ ಹೆಸರನ್ನು ಬರೆದು ಕೊಡು ತ್ತೇನೆ. ನನ್ನ ಕಾಂಪೌಂಡರಲ್ಲಿ ಅದು ಖರೀದಿಗೆ ಸಿಕ್ಕುತ್ತೆ. ಹೊತ್ತಿಗೆ ಒಂದು ಔನ್ಸಿನಂತೆ ದಿನವೂ ಮೂರು ಹೊತ್ತು ಕುಡಿಯುತ್ತಾ ಹೋದರೆ ನಾಲ್ಕು ದಿನ ಗಳಲ್ಲಿ ಗುಣವಾಗುವುದು. ಇವತ್ತು ಬುಧವಾರ ತಾನೇ " ಎಂದು ಹೇಳಿ ಕೊಂಡೇ ಒಂದು ಕಾಗದ ತೆಗೆದು ಅದರಲ್ಲಿ ಏನನ್ನೋ ಬರೆದರು. ಕಾಗದ

ವನ್ನು ಅಯ್ಯರಿಗೆ ಕೊಟ್ಟರು. ನೋಟು ಡಾಕ್ಟರ ಕೈ ಸೇರಿತು. ಪರಸ್ಪರ ವಂದನೆಗಳಾದವು. ಡಾಕ್ಟರು ಹೊರಟು ಹೋದರು.

"ಛೀ" ಎಂದು ವೆಂಕಟರಾಮ ಐಯರ್ ತಮ್ಮ ಹೆಂಡತಿಯೊಡನೆ ಪ್ರಾರಂಭಿಸಿದರು. "ಛೀ ನನಗೆ ಎಲ್ಲ ಟಾನಿಕ್‌ಗಳ ಔಷಧಿಗಳ ಹೆಸರೂ ಗೊತ್ತು. ಇದೇನೋ ತಿಳಿಯಲಿಲ್ಲವಲ್ಲ. ಹೇಗೆ ಓದಿದರೂ "ಬುಧವಾರ" ಎಂದು ಬರೆದಿರುವುದು ಮಾತ್ರ ಕಾಣುತ್ತೆ. ಒಂದು ಔಷಧಿಗೆ ಇಂತಹ ಹೆಸರು ಉಂಟೆ? ಛೀ ನಾನು ಇದನ್ನು ತೆಗೆದುಕೊಂಡು ಬರುತ್ತೇನೆ" ಎಂದು ಹೇಳಿ ವೆಂಕಟರಾಮ ಐಯರರೂ ಮನೆಬಿಟ್ಟು ಹೊರಟರು.

ಡಾಕ್ಟರು ತುಂಬ ಅನುಭವಸ್ಥರು. ಟಾನಿಕ್ ಎಂದು ಯಾವುದನ್ನಾದರೂ ಕೊಟ್ಟರೆ ಮಾತ್ರವೇ ರೋಗಿಗಳೂ ಅವರ ಬಂಧುಗಳೂ ನೆಮ್ಮದಿ ಹೊಂದುವರೆಂಬುದು ಅವರಿಗೆ ಗೊತ್ತು. ಆದರೆ ಅಂಗಡಿಗಳಲ್ಲಿ ದೊರೆಯುವ ಸಾವಿರಾರು ಟಾನಿಕ್‌ಗಳಲ್ಲಿ ಒಂದಕ್ಕಿಂತ ಒಂದು ರವೆಯಷ್ಟು ಹೆಚ್ಚು ಗುಣವೂ, ಗುಣಹೀನವೂ ಆಗಿರಲಿಲ್ಲವೆಂಬುದು ಅವರಿಗೆ ಅನುಭವದಿಂದ ಗೊತ್ತು. ಆದುದರಿಂದ ಮಾಡುವುದಕ್ಕೆ ಸುಲಭವಾದುದೂ ಹೆಚ್ಚು ವೆಚ್ಚವಿಲ್ಲದುದೂ ಆದ ಏಳು ಟಾನಿಕ್‌ಗಳನ್ನು ಅವರು ಮಾಡಿ ದೊಡ್ಡ ದೊಡ್ಡ ಜಾಡಿಗಳಲ್ಲಿ ಬರ್ತಿಮಾಡಿ ಮನೆಯಲ್ಲಿಟ್ಟಿದ್ದರು. ಆ ಔಷಧಗಳಿಗೆ ಭಾನುವಾರದಿಂದ ಶನಿವಾರದವರೆಗಿನ ಏಳುವಾರಗಳ ಹೆಸರನ್ನೇ ಇಟ್ಟಿದ್ದರು. ಅದರ ಅಂತರಂಗವನ್ನು ನಾವೇ ಊಹಿಸಿಕೊಳ್ಳಬಹುದು. ವ್ಯಾಧಿ ಯಾವುದಾಗಿದ್ದರೂ ಆಲೋಚನೆಯ ಆವಶ್ಯಕತೆಯೇ ಇಲ್ಲದೆ, ಔಷಧಿ ಬರೆದುಕೊಡಲು ಡಾಕ್ಟರಿಗೆ ಸೌಕರ್ಯವಾಗುತ್ತಿತ್ತು. ಅವನ್ನು ಕೊಡುವುದು ಕಾಂಪೌಂಡರಿಗೂ ಸುಲಭವಾಗುತ್ತಿತ್ತು. ಅಲ್ಲದೆ ಆ ಚೀಟಿಯನ್ನು ಬೇರೆ ಯಾವ ಔಷಧಿಯ ಅಂಗಡಿಗೂ ತೋರಿಸಿ ಔಷಧಿ ತೆಗೆದುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ಔಷಧದಿಂದ ಬರುವ ಲಾಭ ಸರಿಯಾದ ವಿಳಾಸದವರಿಗೇ ಸೇರುತ್ತಿದ್ದಿತು. "ಬುಧವಾರ" ಎಂಬ ಹೆಸರಿನ ಟಾನಿಕ್‌ನ ಸಾಮಗ್ರಿಗಳು, ನಿಂಬೆಹಣ್ಣಿನ ರಸ, ಕೊಯಿನಾಪುಡಿ ಮತ್ತು ನಲ್ಲಿಯ ನೀರು ಇವು ಮೂರೇ. ಒಟ್ಟು ವೆಚ್ಚ ಸೀಸೆ ಬೆಲೆ ಸೇರಿ ಎರಡೂ ಕಾಲು ಆಣೆ ಮಾತ್ರವೇ, ಸಾಧಾರಣ ಮಾರಾಟದ ಬೆಲೆ ರೂ. ೧-೧೨-೦ ಯುದ್ಧಕಾಲವಾದುದರಿಂದ ಹೆಚ್ಚಿದ ಬೆಲೆ ರೂ ೨-೭-೯.

ಈ ವಿವರಗಳೊಂದನ್ನೂ ಅರಿಯದ ವೆಂಕಟರಾಮಐಯರ್‌ರವರು, ಡಾಕ್ಟರು ಕೊಟ್ಟ ಚೀಟಿಯನ್ನು ತಿರುಗಿಸಿ ತಿರುಗಿಸಿ ಓದಿಕೊಳ್ಳುತ್ತಾ ಡಾಕ್ಟರ ಮನೆ ದಾರಿ ಹಿಡಿದರು.

ಆ ಸಮಯದಲ್ಲಿ ವೆಂಕಟರಾಮ ಐಯರ್‌ವರ ಭಾರ್ಯೆ ಅಲಮೇಲು ಅಮ್ಮಾಳ್, ಕೊಠಡಿಯ ಮೂಲೆಯಲ್ಲಿ ಕುಳಿತುಕೊಂಡು ತಲೆಯನ್ನು ಎರಡು ಕೈಗಳಿಂದಲೂ ಅಮುಕಿಕೊಂಡು "ದೇವರೇ" ಎಂದು ದೊಡ್ಡದಾಗಿ ನಿಟ್ಟುಸಿರು ಬಿಡುತ್ತಿದ್ದಳು. ಅವಳಿಗೆ ಈ ಸ್ಥಿತಿ ಒದಗಬಹುದೆಂದು ವಿವಾಹ ಮಂಟಪ ದಲ್ಲಿದ್ದ ಯಾರೊಬ್ಬರೂ ಭಾವಿಸಿದ್ದಿರಲಾರರು. ಏಕೆಂದರೆ ವಧೂವರರಿಬ್ಬರೂ ಕುಲ ಗೋತ್ರ ನಡತೆ ಅಂತಸ್ತು ಸೌಂದರ್ಯ ಮೊದಲಾದ ಎಲ್ಲ ಗುಣಗಳಲ್ಲಿಯೂ ಒಬ್ಬರಿಗೊಬ್ಬರು ಅನುರೂಪರಾದ ಜತೆಯಾಗಿದ್ದರು. ಅವರಿಗೆ ತಕ್ಕಷ್ಟು ಆಸ್ತಿ ಇತ್ತು. ಆಕೆಯೋ, ಸಾಹಿತ್ಯ, ಪಾಕಶಾಸ್ತ್ರ, ಸಂಗೀತಗಳಲ್ಲಿ ಒಳ್ಳೆಯ ಅನುಭವಶಾಲಿಯಾದುದರಿಂದ, ಸಂಸಾರವನ್ನು ಒಳ್ಳೆ ಆದರ್ಶವಾಗಿ ನಡೆ ಸುವ ಸಾಮರ್ಥ್ಯವುಳ್ಳವಳಾಗಿದ್ದಳು.

ಜನ, ಹೀಗೆ ಅಪೂರ್ವ ದಾಂಪತ್ಯವನ್ನು ನಿರೀಕ್ಷಿಸುತ್ತಿರುವಾಗ ಅವಳಿಗೆ ಹಿಸ್ಟಿರಿಯಾ ಉಂಟಾಯಿತೆಂದರೆ ಏನು ಹೇಳುವುದು? ಎಲ್ಲವೂ ಈಶ್ವರನ ಕಾರ್ಯ ಅಥವ ವಿಧಿಯ ಇಚ್ಛೆ ಎಂದು ತಾನೇ ಹೇಳಬೇಕು? ಅವರ ಮಹಿಮೆ ಯಿಂದ ಅಲ್ಲವೇ ಹುಲ್ಲು ಕಡ್ಡಿ ಸಹ ತೀಕ್ಷ್ಣವಾದ ಖಡ್ಗವಾಗುವುದು. ನಾವು ಯಾವುದನ್ನು ಬಹಳ ಪ್ರೀತಿಯಿಂದ ಬಯಸುವೆವೋ ಅದು ವಿಪರೀತದಲ್ಲಿ ಮುಗಿಯುವುದು.

"ಶ್ರೀ ಎಂಬ ಒಂದು ಮಾತನ್ನೇ ತೆಗೆದುಕೊಳ್ಳಿ. ನಮಗೆ ತಿಳಿದ ಎಷ್ಟೋ ಜನ-ಗೃಹಸ್ಥರು, ವಿವೇಕಿಗಳು ತಾವು ಮಾತನಾಡುವಾಗಲೆಲ್ಲ "ಶ್ರೀ" ಎಂದು ಪ್ರಾರಂಭಿಸುವುದಿಲ್ಲವೇ? "ಶ್ರೀ ನೆನ್ನೆ ಒಳ್ಳೆ ಮಳೆ" "ಶ್ರೀ ಬೀದಿಯಲ್ಲಿ ಹಣ್ಣು ಮಾರುತ್ತಿದ್ದಾನೆ" ಇಂತಹ ಮಾತನ್ನು ಕೇಳುವುದು ನಮಗೆ ಸಾಧಾರಣ ವಾಗಿದೆ. ಆದರೆ ಅಮ್ಮಾಳು ಅಮ್ಮಾಳ್‌ಳಂತೆ ನಾವೂ ಒಂದು ವೇಳೆ ವ್ಯಾಕ ರಣದಲ್ಲಿ ಮೊದಲನೆಯ ತರಗತಿಯಲ್ಲಿ ತೇರ್ಗಡೆಯಾಗಿದ್ದಿದ್ದರೆ, ನಮಗೂ ಒಂದು ಯೋಚನೆ ಹೊಳೆದಿದ್ದಿರಬಹುದು. ತನ್ನ ಗಂಡ ಪ್ರತಿಯೊಂದು ಮಾತನ್ನೂ ಶ್ರೀ ಎಂದು ಹೇಳಿ ಪ್ರಾರಂಭಿಸುವಾಗ, ಮೊದಮೊದಲು ಕೆಲವು ದಿನ ಅವಳಿಗೆ

ಸಗು ಬಂತು. ಎಂಟನೆಯ ದಿನ ಇರಬಹುದು. ಅವಳ ವ್ಯಾಕರಣ ಜ್ಞಾನ ತಲೆ ಎತ್ತಿ ನಿಲ್ಲಲು ಆರಂಭಿಸಿತು.

" ಲ್ರೀ, ಲ್ರೀ, ಇದು ಯಾವ ಮಾತು ?, ಕರ್ತೃವೇ ಕರ್ಮವೇ ಕ್ರಿಯೆಯೇ. ಹೆಸರೇ ? ಅರ್ಥವಿಲ್ಲದ, ಉಪಯೋಗವೂ ಇಲ್ಲದ ಒಂದು ಮಾತನ್ನು ಯಾಕೆ ಹೇಳಬೇಕು ? " ಎಂದು ಅಮ್ಮಾಳು ಅಮ್ಮಾಳ್ ಯೋಚಿಸತೊಡಗಿದಳು. ಹದಿನೈದನೆ ದಿನ "ಇವರು ದಿನಕ್ಕೆ ಎಷ್ಟು ಸಲ ಲ್ರೀ ಎನ್ನುತ್ತಾರೆ ಎಂದು ಎಣಿಸಲಾರಂಭಿಸಿದರು. ಮುವ್ವತ್ತೇಳು– ನಲವತ್ತೆಂಟು – ಐವತ್ತು. ಅಂದು ಅವರು ಸ್ಪಷ್ಟವಾಗಿ ಆ ಮಂತ್ರವನ್ನು ಐವತ್ತು ಸಲ ಉಚ್ಚಾರಣೆ ಮಾಡಿದುದನ್ನು ಅಮ್ಮಾಳು ಅಮ್ಮಾಳ್ ಕೇಳಿದಳು. ಅಲ್ಲಿಂದಲೇ ಅವಳ ಮನಸ್ಸಿನ ಶಾಂತಿ ನಾಶವಾಯಿತು. ಏಕೆಂದರೆ ಅಲ್ಲಿಂದ ಮುಂದೆ ಪ್ರತಿದಿನವೂ ಪ್ರಾತಃಕಾಲದಿಂದ ಹಿಡಿದು ಸಾಯಂಕಾಲದವರೆಗೆ ಅವಳಿಗೆ ಒಂದೇ ಯೋಚನೆ. ಇವತ್ತು ಐವತ್ತನ್ನು ಮುಟ್ಟುತ್ತಾರೆಯೇ ? ಅದನ್ನೂ ಮೀರಿ ತಮ್ಮನ್ನೇ ತಾವು ಜಯಿಸುತ್ತಾರೆಯೇ ? ಅಥವಾ ಸೋಲುತ್ತಾರೆಯೇ ?" ಇಂತಹ ಯೋಚನೆ ಮನಸ್ಸನ್ನು ಹಿಡಿದರೆ ಉಳಿದ ವಿಷಯಗಳೆಲ್ಲ ಆ ಮನಸ್ಸಿನಿಂದ ಹಿಂದೆ ಸರಿಯುವುದು ಸ್ವಾಭಾವಿಕ. ಅವರ ನಡುವೆ ನಡೆದ ಸಂಭಾಷಣೆಯನ್ನು ಸ್ವಲ್ಪ ಗಮನಿಸೋಣ.

" ಲ್ರೀ, ಕುಡಿಯುವುದಕ್ಕೆ ಸ್ವಲ್ಪ ನೀರು ತಾ. "

ಅವಳು (ಮನಸ್ಸಿನಲ್ಲಿ)—ಮುವ್ವತ್ತೆಂಟು (ಪ್ರಕಾಶವಾಗಿ) ಏನು ಹೇಳಿದಿರಿ. ಶರಬತ್ತೇ ? ಅಂಗವಸ್ತ್ರವೇ ?

ಅವನು— ಲ್ರೀ ಇಂದು ಸಿನಿಮಾಕ್ಕೆ ಹೋಗೋಣವೇ ? ಹೋಗಿ ಬಹಳ ದಿನಗಳಾದವೆಲ್ಲ ?

ಅವಳು (ಮನಸ್ಸಿನಲ್ಲಿ)— ಮುವ್ವತ್ತೊಂಬತ್ತು (ಪ್ರಕಾಶವಾಗಿ) ಹೌದು ನಲವತ್ತು ದಿನಗಳಾಗಿದ್ದಿರಬಹುದು.

ಅವನು— ನಲವತ್ತು ದಿನಗಳಾದವೇ ? ಲ್ರೀ ಹೋದ ಶುಕ್ರವಾರ ತಾನೇ ಹೋಗಿದ್ದೆವಲ್ಲೇ ?

ಅವಳು— ಹೌದು. ಈಗಲೀಗ ನಲವತ್ತು ಆಯಿತು. ಅದೇ ಈವತ್ತಿಗೆ ಏಳು ದಿನಗಳಾದುವು.

ಹೀಗೆ ಅವಳ ಮಾತೂ ಲೆಕ್ಕವೂ ದಾರಿತಪ್ಪಿ ಹೋದುವು.

ಅಷ್ಟರೊಂದಿಗೆ ನಿಲ್ಲಲಿಲ್ಲ. ವೆಂಕಟರಾಮಐಯರ್, ಅವರ ತಂದೆ ತಾಯಿಗಳ ಒಬ್ಬನೇ ಮಗ. ಆಸೆಯಿಂದ ಮುದ್ದಿನಿಂದ ಬೆಳೆದವರು. ಕೆಲವು ವೇಳೆ, ಬಾಲಕರು ಮಾತನಾಡುವಂತೆ ಕಕರ ಭಾಷೆಯಲ್ಲಿ ಮಾತನಾಡುತ್ತಿದ್ದರು. ಮೇಜ ಎಂದು ಹೇಳಬೇಕಾದರೆ, ಕಮೇ– ಕಜ ಎನ್ನುತ್ತಿದ್ದರು. ಅಲ್ಲದೆ ಜಗತ್ತಿನಲ್ಲಿ ಎಲ್ಲರಿಗೂ ಇರುವಂತೆ ತಾವು ಹೇಳುವುದೇ ಸರಿ ಎಂಬ ಭಾವನೆ ಅವರಿಗೂ ಇತ್ತು: ಆದುದರಿಂದಲೇ, ಪಾಕಶಾಸ್ತ್ರದಲ್ಲಿ ಪ್ರವೀಣೆ ಎಂದು ಬಿರುದು ಸಂಪಾದಿಸಿದ ಅಮ್ಮಾಳು ಅಮ್ಮಾಳ್ ಮಾಡಿದ, ಸೊಗಸಾದ ಅಡಿಗೆಯನ್ನು ಊಟ ಮಾಡುವಾಗಲೆಲ್ಲಾ ಅವರು “ಶ್ರೀ ಪಡವಲಕಾಯಿ ಹುಳಿಯಲ್ಲಿ ಕ-ಗೇ ಕ-ದು ಕ-ಪ ಕ-ಪ್ಪು ಹಾಕಿದರೆ ಮಾತ್ರ ರುಚಿಯಾಗುತ್ತೆ” ಎಂದು ಕೂಗುವರು. ಅಡಿಗೆಯ ಖಂಡನೆ ಒಂದನ್ನೋ ಅಥವಾ ಕಕರ ಭಾಷೆ ಒಂದನ್ನೋ ಆಕೆ ಸಹಿಸಿಕೊಳ್ಳುತ್ತಿದ್ದಳು. ಆದರೆ ಎರಡೂ ಸೇರಿ ಬೀಸುವಾಗ ಅವಳಿಂದ ಸಹಿಸಲು ಸಾಧ್ಯವಾಗುತ್ತಿರಲಿಲ್ಲ.

ಕೆಲವು ಪತ್ನಿಯರಂತೆ ತನ್ನ ಪತಿಯ ವಿಷಯದಲ್ಲಿ ಆಕೆ ಅಸಡ್ಡೆಯಿಂದ ಇದ್ದಿದ್ದರೆ, ಅವನ ದೋಷದ ವಿಷಯದಲ್ಲಿಯೂ ಅಸಡ್ಡೆಯಿಂದ ಇರಬಹುದಾಗಿತ್ತು. ಅವಳಿಗೆ ಗಂಡನಲ್ಲಿ ಪ್ರೇಮ ಮತ್ತು ಭಕ್ತಿ ಪೂರ್ಣವಾಗಿತ್ತು. ಅವರ ತಪ್ಪನ್ನು ಕಂಡುಹಿಡಿದು ಅವರಿಗೇ ಸ್ಪಷ್ಟವಾಗಿ ಹೇಳಲು ಆಕೆಗೆ ನಾಲಿಗೆ ಏಳಲೇ ಇಲ್ಲ. ಇತರರೊಡನೆ ಹೇಳಿಕೊಳ್ಳಲು ನಾಚಿಕೆಯಾಯಿತು. ಆವಿಯಾಗುತ್ತಿರುವ ನೀರನ್ನು ಅಡಗಿಸಿಟ್ಟಂತೆ ಆಕೆಯ ಸಂಕಟ ತೀವ್ರವಾಗಿ ಕುದಿಯತೊಡಗಿತು.

ಈ ಸ್ಥಿತಿಯಲ್ಲಿ, ಒಂದು ದಿನ ವೆಂಕಟರಾಮಯ್ಯರರು ಸಂಗೀತ ಕಛೇರಿಯಲ್ಲಿ ಜಯ ಜಯ ಗೋಕುಲಬಾಲ ಎಂಬ ಹಾಡನ್ನು ಕೇಳಿದವರು ಮನೆಗೆ ಬಂದು ಪದೇ ಪದೇ ಅದನ್ನೇ ಹಾಡಲು ಪ್ರಾರಂಭಿಸಿಬಿಟ್ಟರು. ಸಂಗೀತದಲ್ಲಿ ಒಳ್ಳೆಯ ಪರಿಶ್ರಮವಿದ್ದ ಅಮ್ಮಾಳುವಿಗೆ ಈ ಲೋಕದಲ್ಲಿಯೇ ನರಕವೂ ಸೇರಿಕೊಂಡ ಅನುಭವವುಂಟಾಯಿತು. ಇದುವರೆಗೆ ಯಾರೂ ಕೇಳದಿದ್ದ ಸ್ವರಗಳನ್ನು ಅವರು ಸೇರಿಸಿ ಹಾಡಿದುದು ಮಾತ್ರವೇ ಅಲ್ಲ. ದಿಕ್ಕುಪಾಲಾಗಿ

“ಚಯ ಚಯ ಗೋ— ಕುಲಬಾಲ”

ಎಂದೆಲ್ಲ ಕೀರುವರು. ಒಂದು ದಿನ ಅಮ್ಮಾಳು ಧೈರ್ಯ ಮಾಡಿಕೊಂಡು

"ಜಯ ಜಯ ಎಂಬುದಲ್ಲವೇ ಮಾತು?" ಎಂದು ತನ್ನ ಸಂದೇಹವನ್ನೇ ನಿವರ್ತಿಗೊಳಿಸಿಕೊಳ್ಳುವವಳಂತೆ ಕೇಳಿ ಬಿಟ್ಟಳು.

"ಹೌದು. ಆದರೇನು? ಸಂಸ್ಕೃತದಲ್ಲಿಯೇ ಜಯ ಜಯ ಎಂದು ಉಚ್ಚರಿಸಲು ನಾನು ಈಗೇನಾದರೂ ಹೋಮಕ್ಕೆ ಮಂತ್ರ ಹೇಳುತ್ತಿದ್ದೇನೆಯೇ? ತಮಿಳಿನಲ್ಲಿ ಪಾಡುತ್ತಿದ್ದೇನೆ. ತಮಿಳು ಭಾಷೆಯಲ್ಲಿರುವ ಶಬ್ದಗಳೇ ನನಗೆ ಕ-ಸಾ ಕ- ಕು ಎಂದು ಹೇಳಿ ಸಾಣೆ ಹಿಡಿಯುವವನು ಕುಡುಗೋಲನ್ನು ಸಾಣೆ ಹಿಡಿಯುವಾಗ ಉಂಟಾಗುವ ಕಠೋರ ಸ್ವರದಲ್ಲಿ ಮತ್ತೆ ಹಾಡಲು ಪ್ರಾರಂಭಿಸಿದರು. ದೇವರು ನನ್ನನ್ನು ಈಗಲೇ ಕಿವುಡಿಯನ್ನಾಗಿ ಮಾಡಬಾರದೇ ಎಂದು ಬೇಡಿಕೊಂಡು ಅಮ್ಮಾಳು ಅಮ್ಮಾಳ್ ಒಂದು ದೀರ್ಘವಾದ ನಿಟ್ಟುಸಿರು ಬಿಟ್ಟಳು.

ಮನೆ ಬಿಟ್ಟು ಹೊರಗೆ ಹೊರಡುವಾಗ ಆಕೆಯ ಮುಂದೆ ಬಂದು ನಿಂತು ಜಯ ಜಯ ಗೋ—ಎಂದು ಹಾಡಿ ಅನಂತರ ಎರಡು ಕೊಠಡಿಗಳನ್ನು ದಾಟಿ ಆಚೆಗೆ ಹೋಗಿ ಅಲ್ಲಿ "ಕುಲ ಪಾಲಾ" ಎಂದು ಕಿರುಚುವುದೇ ಅವರ ಪದ್ಧತಿಯಾಗಿತ್ತು.

ಅವರು ಹಾಡು ಪ್ರಾರಂಭಿಸಿದ ಕೂಡಲೇ ಅಮ್ಮಾಳುವಿಗೆ ಹೊಟ್ಟೆನೋವು ಪ್ರಾರಂಭವಾಗುವುದು. ಸಂಗತಿ ಪೂರ್ತಿ ಮುಗಿದ ನಂತರವೇ ಇನ್ನು ಭಯವಿಲ್ಲ ಎಂದು ಆಕೆ ನಿಟ್ಟುಸಿರು ಬಿಡುವಳು. ಒಂದು ದಿನ ಕುದಿಯುತ್ತಿರುವ ಅನ್ನದ ಗಂಜಿಯನ್ನು ಅವಳು ಬಸಿಯುತ್ತಿರುವಾಗ "ಹಾಡಿನ" ಮೊದಲ ಭಾಗವನ್ನು ಕೇಳಿ ಸ್ತಂಭಿತಳಾದಳು. ಆದರೆ ಸ್ವಲ್ಪ ಹೊತ್ತು ಕಳೆದರೂ ಉಳಿದ ಹಾಡು ಕಿವಿಗೆ ಬೀಳಲಿಲ್ಲ. ಹೇಗಾದರೂ ಹಾಡನ್ನು ಕೇಳಿ ಮುಗಿಸಿಬಿಡಬೇಕೆಂದು ಉಸಿರು ಕಟ್ಟಿದವಳಂತೆ ಅಮ್ಮಾಳು ಗಂಡನನ್ನು ಹುಡುಕಿಕೊಂಡು ಬಂದು ನೋಡಿದಾಗ ಆತ ಅದನ್ನು ಮುಗಿಸದೆ ಹೊರಗೆ ಹೋಗಿದ್ದುದು ಗೊತ್ತಾಯಿತು. ಅನಂತರ ಅವಳು ಅರ್ಧ ನಿದ್ರೆಯಲ್ಲಿ ಎಚ್ಚರಗೊಂಡವಳಂತೆ, ಅಡಿಗೆ ಮನೆಗೆ ಹೋಗಿ ಸೋರಿ ಹೋಗುತ್ತಿದ್ದ ಅನ್ನದ ತಪ್ಪಲೆಯನ್ನು ಸರಿಮಾಡಿ ಅಡಿಗೆಯನ್ನು ಮುಂದುವರಿಸಿದಳು. ಆವತ್ತು ಊಟಕ್ಕೆ ಕುಳಿತಾಗ ವೆಂಕಟರಾಮು ಐಯರರು ಪ್ರೀತಿಯಿಂದ "ಅಮ್ಮಾಳು ಇವತ್ತು ಅನ್ನ ಸ್ವಲ್ಪ ಕ–ಹಿ ಕ–ಟ್ಟು ಆದಂತೆ ತೋರುತ್ತಿದೆಯಲ್ಲ. ಅದಕ್ಕೆ ಕಕಾ ಕ–ರ ಕ–ಣ ಏನು ಎಂದು ಕೇಳಿದರು. ಕಡೆಯ ಹುಲ್ಲುಕಡ್ಡಿ ಕುದುರೆಯ ಬೆನ್ನನ್ನು ಮುರಿಯುವುದೆಂದು ಹೇಳು

ತ್ತಾರಲ್ಲವೆ ? ಹಾಗೆ ಆ ತೊದಲು ನುಡಿಯನ್ನು ಕೇಳಿ ಸಹಿಸಲಾರದೆ ಅಮ್ಮಾಳು ಬಡಿಸುತ್ತಿದ್ದ ಪಾತ್ರೆಯನ್ನು ತೊಪ್ಪೆಂದು ನೆಲದ ಮೇಲೆ ಇಟ್ಟು ಬಿಕ್ಕಿ ಬಿಕ್ಕಿ ಅಳಲು ಆರಂಭಿಸಿದಳು. ಗಂಡ, ಡಾಕ್ಟರನ್ನು ಕರೆತರಲು ಬೇಗ ಹೋಗಬೇಕಾಯಿತು.

ಡಾಕ್ಟರ ಮನೆಯಿಂದ ಬುಧವಾರವೆಂಬ ಔಷಧಿಯನ್ನು ತಂದ ವೆಂಕಟರಾಮು ಐಯ್ಯರರು, ಹೆಂಡತಿಯೊಂದಿಗೆ ಏನು ಹೇಳಿದರೆಂದು ನಾನು ಒಂದು ಪೈಪೋಟಿ ಒಡ್ಡುವುದಿಲ್ಲ. ಏಕೆಂದರೆ ಇಲ್ಲಿಯವರೆಗೆ ಸಹನೆಯಿಂದ ವಾಚಿಸಿರುವ ವಾಚಕರು ಪ್ರತಿಯೊಬ್ಬರೂ ಸುಲಭವಾಗಿ ಈ ಪೈಪೋಟಿಯಲ್ಲಿ ಗೆದ್ದು ಬಿಡುವರು. " ಅಮ್ಮಾಳು ಕ–ಔ ಕ–ಷ ಕ–ಧಿ ಕ–ನ್ನು ತಂದಿದ್ದೇನೆ ಎಂದು ಪ್ರೀತಿಯಿಂದ ತಾವೇ ಅವಳ ಬಾಯನ್ನು ಬಿಡಿಸಿ ಬಾಯಿಗೆ ಔಷಧಿ ಹುಯಿದರು.—ಹಿಂದೆ ಹೇಳಿದ ನಿಂಬೆಹಣ್ಣಿನಲ್ಲಿ ನೀರು ಕೊಯಿನಾ ಮೂರೂ ಸೇರಿದ ರಸಾಯನವನ್ನು. ಮೂರನೆ ವಸ್ತುವನ್ನೂ ಕಾಂಪೌಂಡರು ಧಾರಾಳವಾಗಿಯೇ ಸೇರಿಸಿದ್ದರು. [ಹೆಚ್ಚಿಸಿದ ಬೆಲೆ ೨-೭-೯ನ್ನು ನೆನೆಮುಕೊಂಡರೆ ಅದರ ಐವತ್ತರಷ್ಟು ಹೆಚ್ಚಾಗಿ ಕೊಯಿನಾವನ್ನು ಸೇರಿಸಿದ್ದರೂ ಡಾಕ್ಟರಿಗೆ ಲಾಭ ಇನ್ನೂ ಹೆಚ್ಚಾಗಿಯೇ ಉಳಿಯುತ್ತಿದ್ದಿತಲ್ಲವೆ? ] ಅಮ್ಮಾಳುವಿನ ಗಂಟಲಿನಲ್ಲಿ ರಸಾಯನ ಇಳಿದು ಬಾಣದಂತೆ ಪ್ರವೇಶಿಸಿತು. ಅಲ್ಲಿಯವರೆಗೆ ಒಂದು ಇಲಿಯನ್ನು ಸಹ " ಛೂ " ಎಂದೂ ಬೆದರಿಸಿ ಓಡಿಸಲು ಧೈರ್ಯವಿಲ್ಲದಿದ್ದ ಅಮ್ಮಾಳು ಹಾಗೆಯೇ ಔಷಧಿ ಸೀಸೆಯನ್ನು ಪಠೀರ್ ಎಂದು ಹೊಡೆದು ತಳ್ಳಿಬಿಟ್ಟು "ನಾನು ಈಗಲೇ ನಮ್ಮ ತಾಯಿಯ ಮನೆಗೆ ಹೋಗುತ್ತೇನೆ." ಎಂದು ಹೇಳಿ ಮತ್ತೆ ಅಳತೊಡಗಿದಳು. ಹಿಸ್ಟಿರಿಯ ಎಂಬ ಮಾತನ್ನು ಕೇಳಿದ ಹೊತ್ತಿನಿಂದ ದಿಗಿಲುಗೊಂಡಿದ್ದ ವೆಂಕಟರಾಮುಐಯ್ಯರು, ಬೇರೆ ಮಾತನಾಡದೆ ಗಾಡಿಯನ್ನು ತಂದು ಅದರಲ್ಲಿ ಹೆಂಡತಿಯನ್ನು ಕೂರಿಸಿ ಅವಳ ತಾಯಿಯ ಮನೆಗೆ ಕರೆದುಕೊಂಡು ಹೋಗಿಬಿಟ್ಟರು. ಆಲೋಚನಾಪರರಾಗಿ ಮತ್ತೆ ಡಾಕ್ಟರನ್ನು ನೋಡಲು ಹೋದರು.

ಡಾಕ್ಟರು ಧೈರ್ಯ ಹೇಳಿದರು. " ನಾನು ಆಗಲೇ ಹೇಳಲಿಲ್ಲವೇ ? ಇದು ಹಿಸ್ಟಿರಿಯಾ ಕೇಸ್. ಈ ವ್ಯಾಧಿ ಉಂಟಾಗುವ ಕಾರಣವನ್ನು ಹೇಳುವುದು ಸಾಧ್ಯವಿಲ್ಲ. ಆದರೆ ಚಿಕಿತ್ಸಾ ಮಾರ್ಗ ಖಂಡಿತ ಗುಣಕಾರಿ. ನೀವು ಆಕೆಯನ್ನು ಎದುರಿಸಿ ಏನನ್ನೂ ಹೇಳಬೇಡಿ. ಗಾಬರಿ ಹತ್ತಿಸಬೇಡಿ. ಕಾಗದ

ವನ್ನೂ ಸಹ ಬರೆಯಬೇಡಿ. ತಾನಾಗಿಯೇ ಇಷ್ಟಪಟ್ಟು ನಿಮ್ಮ ಮನೆಗೆ ಹಿಂದಿರುಗುತ್ತಾಳೆ. ಅಲ್ಲಿಯವರೆಗೆ ಸಮಾಧಾನದಿಂದಿರಿ."

*   *   *   *   *

ಅಮ್ಮಾಳುವಿನ ತವರು ಮನೆಯಲ್ಲಿ ಅವಳಿಗೆ ಹೀಗೆ ಧೈರ್ಯ ಹೇಳುವವರು ಯಾರೂ ಇರಲಿಲ್ಲ. "ದಂಪತಿಗಳಲ್ಲಿ ಏನೋ ಮನಸ್ತಾಪ. ಇದು ಎಲ್ಲರಲ್ಲಿಯೂ ಇರುವುದೇ. ಇದನ್ನು ನಾವು ಕೆಣಕಿ ಕೆದಕಿದರೆ, ಸಣ್ಣ ವಿಚಾರ ದೊಡ್ಡದಾಗಿ ಬಿಡುವುದು. ತಾನಾಗಿಯೇ ಶಾಂತವಾಗಿ ಹೋಗಲಿ." ಎಂದುಕೊಂಡು ಆಧುನಿಕರಾದ ಆ ತಾಯಿತಂದೆಗಳು ಏನೂ ನಡೆಯದಿದ್ದವರಂತೆ ಸ್ವಾಭಾವಿಕವಾಗಿ ಸುಮ್ಮನಿದ್ದು ಬಿಟ್ಟರು.

ಅದರಿಂದ ಅಮ್ಮಾಳುವಿನ ಸಂಕಟ ಹೆಚ್ಚೇ ಆಯಿತು. ಜತೆ ಸೇರಿ ಕಷ್ಟ ಸುಖ ಹೇಳಿಕೊಳ್ಳಲು ಯಾರೂ ಇಲ್ಲದ ಚಿಕ್ಕ ವಯಸ್ಸಿನ ಯುವತಿಯ ಮನಸ್ಸು ಹೇಗಿದ್ದೀತು! ನಾವಿಕನಿಲ್ಲದ ಹಡಗು ಅದು. ಆಕೆ ತವರು ಮನೆಗೆ ಹೋದ ದಿನ ಪೂರ್ತಿ ಗಂಡನ ಅಲ್ಪವಾದ ದೋಷಗಳನ್ನು ಎಣಿಸುತ್ತಾ ಅಳುತ್ತಾ ಕಾಲ ಕಳೆದಳು. ತನ್ನಲ್ಲಿ ಅಷ್ಟೊಂದು ಪ್ರೀತಿಯೂ ಪ್ರೇಮವೂ ತುಂಬಿದ್ದ ಗಂಡನಲ್ಲಿ ಅಲ್ಪವಾದ–ಬಹು ಅಲ್ಪವಾದ–ಕೆಲವು ದೋಷಗಳಿದ್ದರೂ ಅವುಗಳನ್ನು ಸಹಿಸಿಕೊಳ್ಳದ ತಾನು ಎಂತಹ ಕಲ್ಲು ಎದೆಯ ಪಾತಕಿಯಾಗಿರಬಹುದೆಂದು ದುಃಖಪಟ್ಟಳು. ಹೀಗೆ ಯೋಚಿಸಿ ಯೋಚಿಸಿ ತನ್ನ ತಪ್ಪಿಗೆ ತಕ್ಕ ದಂಡನೆಯನ್ನು ತನಗೆ ತಾನೇ ವಿಧಿಸಿಕೊಳ್ಳಬೇಕೆಂದು ಅವಳು ನಿಶ್ಚಯಿಸಿದಳು. ಹಿಂದಲ ಕಾಲದಲ್ಲಿ ಕಾಳಿಯ ಸನ್ನಿಧಿಯಲ್ಲಿ ಕೆಲವರು ತಮ್ಮ ತಲೆಯನ್ನು ತಾವೇ ಬಲಿಕೊಟ್ಟುಕೊಂಡ ಉದಾಹರಣೆಗಳಿಲ್ಲವೆ? ಅಮ್ಮಾಳು ಸಂಜೆಯಾಗುವುದರೊಳಗಾಗಿ ಮಾಡಬೇಕಾದುದನ್ನು ತೀರ್ಮಾನಿಸಿಕೊಂಡಳು.

"ನನ್ನ ಪ್ರಾಣದ ಪ್ರಾಣವಾದ ಪ್ರಾಣಕಾಂತನೆ" [ಈ ಉದ್ದವಾದ ಮಾತಿಗೆ ಅರ್ಥವೇನೆಂದು ನನ್ನನ್ನು ಕೇಳಬೇಡಿ. ನನಗೆ ತಿಳಿಯದು. ಬರೆದವಳು ಅಮ್ಮಾಳು ಅಮ್ಮಾಳ್]

"ನನ್ನ ಪ್ರಾಣದ ಪ್ರಾಣವಾದ ಪ್ರಾಣಕಾಂತನೇ, ನಾನು ಕಲ್ಲು ಹೃದಯದ ಪಾತಕಿ. ನಾನು ನಿಮಗೆ ಅರ್ಹಳಲ್ಲ. ನನ್ನನ್ನು ಮರೆತುಬಿಟ್ಟು ನೀವು ಹೇಗಾದರೂ ಸುಖವಾಗಿ ಬಾಳಬೇಕೆಂಬುದೇ ದೇವರಲ್ಲಿ ನನ್ನ ಪೂರ್ಣಪ್ರಾರ್ಥನೆ."

ಲಕ್ಕೋಟೆಯನ್ನು ಅಂಟಿಸಿ, ಯಾರಿಗೂ ತಿಳಿಯದಂತೆ ಟಪಾಲ್ ಗೊಟ್ಟಕ್ಕೆ ಹಾಕಲು ತನ್ನ ಚಿಕ್ಕ ತಮ್ಮನ ಕೈಲಿ ಅವಮ್ಮಾಳು ಕೊಟ್ಟಳು.

ಮರುದಿನ ಬೆಳಿಗ್ಗೆ ಅವಳ ಮುಖ ಗೆಲುವಾಗಿಯೇ ಇತ್ತು. ಸಂಧ್ಯಾ ಕಾಲದವರೆಗೆ ಯಾವ ಪ್ರತ್ಯುತ್ತರವೂ ಬಾರದೆ ಹೋಗಲು ಮತ್ತೆ ಅವಳಿಗೆ ಗಾಬರಿಯಾಯಿತು. ದಿನ ಕಳೆದಂತೆಲ್ಲ ತನ್ನ ಪತಿ, ಒಪ್ಪಿಕೊಂಡು ಬಿಟ್ಟರೇನೋ ಎಂಬ ದಿಗಿಲು ಅವಳನ್ನು ಹಿಡಿದುಕೊಂಡಿತು. ಆಕೆ ಯಾರೊಂದಿಗೂ ಮಾತ ನಾಡುತ್ತಿರಲಿಲ್ಲ. ಆದರೆ ಕಣ್ಣಿನಲ್ಲಿ ನೀರು ಧಾರೆ ಧಾರೆಯಾಗಿ ಹರಿಯುತ್ತಲೇ ಇತ್ತು. ಏನು ಮಾಡಬೇಕೆಂಬುದು ಅವಳ ತಂದೆಗೂ ಹೊಳೆಯಲಿಲ್ಲ. ಏಳನೆಯ ದಿನ ಇದಾದರೂ ಅವಳ ಮನಸ್ಸನ್ನು ಸ್ವಲ್ಪ ಸಮಾಧಾನ ಪಡಿಸಲಿ ಎಂದು ಯೋಚಿಸಿ ಆ ದಿನವೇ ಬಂದಿದ್ದ ಮಲಯ ಮಾರುತ ಪತ್ರಿಕೆಯನ್ನು ಅವಳಿಗೆ ತಂದುಕೊಟ್ಟರು.

ಮಲಯ ಮಾರುತ ಪತ್ರಿಕೆಯನ್ನು ನಮ್ಮ ನಾಡಿನಲ್ಲಿ ಅರಿಯದವರು ಯಾರೂ ಇಲ್ಲ. ಅಕ್ಷರಗಳನ್ನು ಜೋಡಿಸಿಕೊಂಡು ಓದುವವರೂ ಸಹ ಅದನ್ನು ಓದುತ್ತಾರೆ. ಅದೂ ಸಹ ತಿಳಿಯದಿದ್ದವರು ಅದರಲ್ಲಿರುವ ಚಿತ್ರಪಟಗಳನ್ನು ಕಂಡು ಆನಂದಗೊಳ್ಳುತ್ತಾರೆ.

* * * * *

ಆದರೆ ವೆಂಕಟರಮಣಯ್ಯರ್ ಕೆಲವರಿಗೆ ಮಾತ್ರ ಗೊತ್ತು. ಈ ಕಥಾ ನಾಯಕ ವೆಂಕಟರಾಮಐಯರರ ಮನೆಯಿಂದ ಎರಡು ಮನೆ ಆಚೆಗೆ ಅವರು ವಾಸಮಾಡುವ ಮನೆ. ಆದರೆ ಅವರು ಕಸಬಿನಲ್ಲಿ "ಹೀನ ಜಾತಿ." ಅದನ್ನು ಪ್ರಕಟಿಸಲು ನನ್ನ ಲೇಖನಿ ಹಿಂದೆಗೆಯುತ್ತೆ. ಆದರೂ ಹೇಳಿಯೇ ತೀರಬೇಕಲ್ಲ? ಅವರ ವೃತ್ತಿ, ಕಥೆ ಬರೆಯುವುದು.

ಈ ಜಾತಿಯವರನ್ನು ನೀವು ಚೆನ್ನಾಗಿ ಬಲ್ಲಿರಿ. ನೀವು ಅವರನ್ನು ಏನನ್ನಾದರೂ ಕೇಳಿದರೆ ಸರಿಯಾಗಿ ಪ್ರತ್ಯುತ್ತರ ಕೊಡುವುದಿಲ್ಲ. ಏಕೆಂದರೆ ಅವರ ಗಮನವೆಲ್ಲ ತಾವು ಮುಂದೆ ಬರೆಯಬೇಕಾದ ಕತೆಯ ಮೇಲೆಯೇ ಇರು ವುದು. ಸ್ವಲ್ಪ ಅವಕಾಶ ಸಿಕ್ಕಿದರೆ ಸಾಕು. ತಾವು ಬರೆದ ಕಡೆಯ ಕತೆಯ ಮಹಿಮೆ ಸ್ವಾರಸ್ಯಗಳನ್ನೆಲ್ಲ ವಿಸ್ತಾರವಾಗಿ ಹೇಳತೊಡಗುತ್ತಾರೆ. ಕಥಾ ನಾಯಕಿ ಆತ್ಮಹತ್ಯೆ ಮಾಡಿಕೊಳ್ಳಬೇಕಾಗಿ ಬಂದರೂ, ಕತೆಯನ್ನು ಸ್ವಾರಸ್ಯ

ವಾಗಿ ಮುಗಿಸಿಬಿಟ್ಟುದನ್ನು ಕುರಿತು ಅವರು ಆನಂದಿಸುವರು. ಅವಳಿಗಾಗಿ ತಮ್ಮ ಎಡಗಣ್ಣಿನಲ್ಲಿ ಸ್ವಲ್ಪ ಕನಿಕರ ಮಿಡಿದರೂ ಒಲಗಣ್ಣಿನಲ್ಲಿ ಚಾತುರ್ಯ ವನ್ನೇ ಹೊಳೆಸುವರು. ಅವರಿಗೆ ಇನ್ನೊಂದು ಒಳ್ಳೆಯ ಗುಣವೂ ಉಂಟು. ನೀರು ಏರಿಯನ್ನು ಕೊರೆಯಲು ಪ್ರಾರಂಭಿಸಿದ ನಂತರ, ಮುಂದೆ ಬಹು ವೇಗ ವಾಗಿ ನುಗ್ಗುವಂತೆ, ಇವರು ಕತೆಯನ್ನು ಸ್ವಲ್ಪ ಪ್ರಾರಂಭಿಸಿಬಿಟ್ಟರೆ ಸಾಕು. ಅನಂತರ ಕತೆಗೆ ಅಸಾಧ್ಯವೇಗ ಬಂದು ಬಿಡುವುದು. ಆದರೆ ಪ್ರಾರಂಭಿಸು ವುದೇ ಬಹಳ ಪ್ರಯಾಸ. ಏನನ್ನು ಕುರಿತು ಬರೆಯೋಣ ಎಂದು ಎಷ್ಟು ಯೋಚಿಸಿದರೂ ಹೊಳೆಯದೆ ವೇದನೆಪಡುತ್ತಿದ್ದ ಸಮಯದಲ್ಲಿ ವೆಂಕಟರಮ ಣಯ್ಯರದು, ಸೊಗಸಾಗಿ ಬಾಚಿಕೊಂಡಿರುವ ಕ್ರಾಪನ್ನು ಕೆದರಿಕೊಂಡು ಚಿತ್ತ ಭ್ರಮೆಯುಳ್ಳವರಂತೆ ಕಾಣುವರು. ಅಂತಹ ಒಂದು ಸಮಯದಲ್ಲಿ ವೆಂಕಟ ರಮಣಯ್ಯರ್‌ರ ಕೈಲಿ ಟಪಾಲಿನವನು ಒಂದು ಲಕ್ಕೋಟೆ ಕೊಟ್ಟನು.

ಅದರ ಮೇಲೆ ಬರೆದಿದ್ದ ವಿಳಾಸ ವೆಂಕಟರಾಮ ಐಯರ್ ನಂಬರ್ ೨೧-೨ ಎಂದು. ಆದರೆ ಇವರ ವಿಳಾಸ ವೆಂಕಟರಮಣಯ್ಯರ್ ೨೨-೧. ಹಲ್ಲು ಮೊಳೆಯುವುದಕ್ಕಾಗಿ ನೋವಿನಿಂದ ರಾತ್ರಿ ಅಳುತ್ತಿದ್ದ ತನ್ನ ಮಗುವಿನೊಂದಿಗೆ ತಾನೂ ಜಾಗರಣೆಮಾಡಿದ್ದ ಟಪಾಲ್‌ನವನನ್ನು ಆಕ್ಷೇಪಿಸು ವುದೂ ನ್ಯಾಯವಲ್ಲ. ಕಾಗದವನ್ನು ತಮ್ಮದೆಂದು ತೆಗೆದುಕೊಂಡ ವೆಂಕಟರಮ ಣಯ್ಯರನ್ನು ನಿಂದಿಸಿ ಫಲವಿಲ್ಲ. ಏಕೆಂದರೆ ಮೊದಲೇ ಹೇಳಿದಂತೆ ಇವರದು ಬಹಳ "ಹೀನಜಾತಿ."

ಕಾಗದವನ್ನು ಬಿಚ್ಚಿ ನೋಡಿ ಹಾ ಎಂದುಕೊಂಡು ಸಂತೋಷದಿಂದ ತಮ್ಮ ಕ್ರಾಪನ್ನು ಮತ್ತೆ ಸರಿಮಾಡಿಕೊಂಡರು ಕತೆಗಾರ ವೆಂಕಟರಮಣ ಐಯರ್. ಕಾಗದದಲ್ಲಿದ್ದ ವಾಕ್ಯಗಳನ್ನು ಆಧಾರವಾಗಿಟ್ಟುಕೊಂಡು ಒಂದು ಕತೆಯ "ಪ್ಲಾಟ್" ಕಥಾಂಶವನ್ನು ಸೃಷ್ಟಿಸಬಹುದೆಂದು ಅವರ ಬುದ್ಧಿಗೆ ತೋರಿತು. ಆ ಕಾಗದವನ್ನು ಯಾರು ಯಾರಿಗೆ ಬರೆದುದು ಎಂಬ ಚಿಂತೆ ಅವರಿಗೆ ಇರಲಿಲ್ಲ. ಕತೆಗೆ "ಪ್ಲಾಟ್" ಗಳಿಲ್ಲದೆ ಅವರು ಪಡುತ್ತಿದ್ದ ಸಂಕಟ ದಲ್ಲಿ ಇತರರ ಸಂಕಟಗಳನ್ನು ಕುರಿತು ಯೋಚಿಸಲು ಅವರಿಗೆ ಹೊತ್ತಿರಲಿಲ್ಲ. ಆದುದರಿಂದ ನಿಸ್ಸಂಕೋಚದಿಂದ ತಮ್ಮ ಕತೆಯ ಪ್ರಾರಂಭಕ್ಕೆ ಆ ಕಾಗದವನ್ನೇ "ಕಾಪಿ" ಮಾಡಿಬಿಟ್ಟರು. ಮೇಲೆ ಹೇಳಿದಂತೆ ನನ್ನ ಪ್ರಾಣದ ಪ್ರಾಣವಾದ

ಪ್ರಾಣೇಶ್ವರನೇ ಎಂದು ಪ್ರಾರಂಭವಾಗಿ ದೇವರಲ್ಲಿ ನನ್ನ ಪೂರ್ಣ ಪ್ರಾರ್ಥನೆ, ಎಂದು ಮುಗಿಯುವವರೆಗೆ ಅದನ್ನೂ ಹಾಗೆಯೇ ತಮ್ಮ ಸಾಹಿತ್ಯವಾಗಿ ಉಪ ಯೋಗಿಸಿಕೊಂಡರು. ಅಲ್ಲಿಂದ ಮುಂದೆ ಅವರ ಲೇಖನಿ ಬಹು ವೇಗವಾಗಿ ಓಡ ತೊಡಗಿತು. ಆ ಕಾಗದದ ಗುರಿಯಾದ ನಲ್ಲನನ್ನೂ ಅದನ್ನು ಬರೆದ ನಲ್ಲೆ ಯನ್ನೂ ಅವರು ಹೇಗೆ ಆಡಿಸಿದರು! ಕತೆಯನ್ನು ಹೇಗೆ ಮುಗಿಸಿದರು. ಎಂಬು ದನ್ನೆಲ್ಲ ನೀವೇ ಮಲಯಮಾರುತ ಪತ್ರಿಕೆಯಲ್ಲಿ ಓದಿದ್ದೀರಿ.

ಆದರೆ ಪಾಪ! ಅಮ್ಮಾಳು ಅಮ್ಮಾಳ್ ಆ ಕತೆಯನ್ನು ಓದಲಿಲ್ಲ. ಮೊದಲನೆಯ ಐದು ಪಂಗ್ತಿಗಳನ್ನು ಮಾತ್ರ ಓದಿದಳು. ದೊಡ್ಡ "ಪೈಕಾ" ಅಕ್ಷರದಲ್ಲಿ ಅಚ್ಚಾಗಿದ್ದ ತನ್ನ ಕಾಗದವನ್ನೇ ನೋಡಿ ಆಕೆ ಭ್ರಮಿಸಿದಳು. ಅವಳ ದೃಷ್ಟಿ ಅದರಿಂದ ಮುಂದಕ್ಕೆ ಹೋಗಲೇ ಇಲ್ಲ. ಅವಳ ಹೃದಯ ವೇದನೆಯಿಂದ ತುಂಬಿತು. ತಾನು ಎಷ್ಟೋ ದುಃಖದಿಂದಲೂ ಪ್ರೀತಿಯಿಂ ದಲೂ ಕಾಗದ ಬರೆದುದು, ಪ್ರತ್ಯುತ್ತರವನ್ನು ಸಹ ಬರೆಯದೆ ಆ ಕಾಗದವನ್ನು ಯಾವನೋ ಒಬ್ಬನಿಗೆ ಒಂದು ಕತೆಗೆ ಅದನ್ನು ಸಾಮುಗ್ರಿಯಾಗಿ ಒದಗಿಸಲು ಕೊಡುವುದಕ್ಕೇನೆ? ಎಂದು ಅವಳ ಹೃದಯ ಮತ್ತೆ ಗೋದಿಯಿತು ಎಂದು ಮಾತ್ರ ಹೇಳುತ್ತೇನೆ.

ಆಕೆ ತಂದೆಗೆ "ಅಪ್ಪಾ ನಾನು ಯಜಮಾನರ ಮನೆಗೆ ಹೋಗುತ್ತೇನೆ" ಎಂದು ಹೇಳಿದಳು. ಆ ಮಾತು ಬರುತ್ತದೆಯೇ ಎಂದು ಕಾಯ್ದುಕೊಂಡಿದ್ದ ಅವಳ ತಂದೆ ಕೂಡಲೇ ಗಾಡಿಯನ್ನು ತಂದು ನಿಲ್ಲಿಸಿದರು-

ಹೋಗುತ್ತಾ ದಾರಿಯಲ್ಲಿ ಅಮ್ಮಾಳು "ಅಪ್ಪಾ, ಜಯ ಜಯ ಗೋಕುಲ ಬಾಲ ಎಂದು ಯಾರಾದರೂ ಹಾಡಿದರೆ ಏನು ಮಾಡಬೇಕು" ಎಂದು ಕೇಳಿದಳು.

ಅವರಿಗೆ ಅದು ಅರ್ಥವಾಗಲಿಲ್ಲ. ಕೆದಕಿ ಕೇಳುವುದಕ್ಕೆ ಭಯ. ಆದು ದರಿಂದ ಅವರು "ಬೇರೆ ಏನು ಮಾಡಲು ಸಾಧ್ಯ? ಪ್ರತಿಯಾಗಿ ಕ್ಷೀರಸಾಗರ ವನ್ನು ಹಾಡಬೇಕು ಅಷ್ಟೇ" ಎಂದು ಅರ್ಥ ಹಾಸ್ಯದಿಂದ ಪ್ರತ್ಯುತ್ತರವಿತ್ತರು.

ಒಂದು ಗಳಿಗೆ ಬಿಟ್ಟು ಅಮ್ಮಾಳು "ಎಲ್ಲದಕ್ಕೂ ಹಾಗೆಯೇ?" ಎಂದು ಕೇಳಿದಳು.

ಅವಳ ತಂದೆಗೆ ಅದೂ ಅರ್ಥವಾಗಲಿಲ್ಲ. ಆದರೆ 'ಹಾಗೆಯೇ' ಎಂದು ಹೇಳುವುದೇ ಉಚಿತವೆಂದು ಭಾವಿಸಿ ಅದೇ ಪ್ರತ್ಯುತ್ತರವಿತ್ತರು.

* * * * *

ವೆಂಕಟರಮಣ ಐಯರರು "ಅಮ್ಮಾಳು ನಿನಗೆ ವೈಸ್ವಸ್ಥವಾಯಿತೆ ?" ಎಂದು ಹೇಳಿ ಅವಳನ್ನು ಆಲಂಗಿಸಿಕೊಂಡರು. ಅವಳ ಹೃದಯ ಆನಂದದಿಂದ ತುಂಬಿತು. "ಶ್ರೀ, ಯಾಕೆ ನೀನು ನನಗೆ ಕಾಗದವನ್ನೇ ಬರೆಯಲಿಲ್ಲ ?" ಎಂದು ಕೇಳಿದರು ಐಯರ್‌ರು.

ಆಕೆ ಭ್ರಮಿಸಿದಳು. ಹೇಳಲು ಪ್ರಾರಂಭಿಸಿದಳು. ಅಷ್ಟರಲ್ಲಿ ತಡೆದು ಕೊಂಡು ಎರಡು ಸಲ ಉಗುಳು ನುಂಗಿ "ಚೆನ್ನಾಯಿತು. ಆವತ್ತೇ ನಿಮಗೆ ಕಾಗದ ಬರೆದೆನಲ್ಲ ?" ಎಂದಳು.

"ಕ–ಯಾ ಕ–ವ ಕ–ತ್ತು ?"

"ಕ–ಶ ಕ–ನಿ ಕ–ವಾ ಕ–ರ ಕ–ವೇ"

ಕೇಳಿ ವೆಂಕಟರಮಣಯ್ಯರ್ ಸ್ವಲ್ಪ ಭ್ರಮಿಸಿದಗು. "ಟಪಾಲ್‌ನವ ನನ್ನು ಕೇಳಬೇಕು" ಎಂದರು. ಅನಂತರ ಸ್ವಲ್ಪ ನಕ್ಕು

ಚಯ ಚಯ ಕೋಕುಲ ಪಾಲಾ ಎಂದು ಕಿರಚಿದರು.

ಕೂಡಲೇ ಅಮ್ಮಾಳು ಬೀದಿಗೇ ಕೇಳಿಸುವಂತೆ "ಕ್ಷೀರಸಾಗರ ಶಯನಾ" ಎಂದು ಹಾಡತೊಡಗಿದಳು.

ಅದು ನಡೆದುದು ಕಳೆದ ಶ್ರಾವಣ ಮಾಸದಲ್ಲಿ. ಅನಂತರ ಅಮ್ಮಾಳುವಿನ ತಾಯಿತಂದೆಯರು ಅಳಿಯನಿಗೂ ಮಗಳಿಗೂ ಧೋತ್ರ ಸೀರೆಗಳನ್ನು ತಂದು ಕೊಟ್ಟು ಆಶೀರ್ವದಿಸಿ ಹೋದರು. ಅಮ್ಮಾಳುವಿಗೆ ಈಗ ಹಿಸ್ಟಿರಿಯ ಇಲ್ಲ. ಮುಖದಲ್ಲಿ ಸದಾ ಸಂತೋಷವೇ. ಆದುದರಿಂದ ಅವಳಿಗಿಂತ ಭಾಗ್ಯಶಾಲಿ ಯಾರೂ ಇಲ್ಲವೆಂಬುದೇ ಅವಳ ಮಾತಾಪಿತೃಗಳ ಅಂತರಂಗದ ಭಾವನೆ.

———

# ಊರ್ವಶಿಯ ಶಾಪ

[ಈ ಸಂಗತಿಯನ್ನು ಕುರಿತು ಇತರರಿಗೆ ತಿಳಿಯದಿರುವ ಕೆಲವು ವಿವರಗಳು ನನಗೆ ಹೇಗೆ ದೊರೆತವು ಎಂಬುದನ್ನು ಹೇಳಲು ನನಗೆ ಅಧಿಕಾರವಿಲ್ಲ. ಆದರೆ ಈ ಹಿಂದೆ ಪ್ರಕಟವಾಗಿರುವ ಊರ್ವಶೀ ಎಂಬ ಚರಿತ್ರವನ್ನು ಓದಿದವರು ತಮಗೆ ಇಷ್ಟಬಂದಂತೆ ಊಹಿಸಿಕೊಳ್ಳಲು ನನ್ನ ಆಕ್ಷೇಪವಿಲ್ಲ—ಕೊನಷ್ಟೈ.]

## ಮೊದಲ ದೃಶ್ಯ

ಕಾಲ—ಪಾಂಡವರು ವನವಾಸಮಾಡುತ್ತಾ, ಕೌರವರೊಡನೆ ಮುಂದೆ ಸಂಭವಿಸುವ ಯುದ್ಧಕ್ಕಾಗಿ ಅಸ್ತ್ರಗಳನ್ನು ಒದಗಿಸಿಕೊಳ್ಳುತ್ತಿರುವಲ್ಲಿ, ಅರ್ಜುನನು ಹಿಮವದ್ಗಿರಿಯ ತುದಿಗೆ ಹೋಗಿ ಕೆಲವು ಕಾಲ ತಪಸ್ಸನ್ನಾಚರಿಸಿದ ನಂತರ, ದೇವೇಂದ್ರನು ಅವನನ್ನು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋದನು.

ಸ್ಥಳ—ದೇವಲೋಕದಲ್ಲಿ ಒಂದು ನಂದನವನ.

[ಅಪ್ಸರ ಸ್ತ್ರೀಯರು ಪುಷ್ಪಗಳನ್ನುಕೊಯ್ಯುತ್ತಾ ಸಂಭಾಷಣೆಮಾಡುತ್ತಾ ತಿರುಗಾಡುತ್ತಿದ್ದಾರೆ]

ಚಿತ್ರಲೇಖೆ—ನಿಮಗೆ ಹೇಗಾಗಿದೆಯೋ ಕಾಣೆ. ಅರ್ಜುನ ಬಂದುದೇ ಬಂದುದು. ಅವರಿಗಾಗಿ ನಾಲ್ಕು ದಿನಗಳಿಂದ ಬಿಡುವೇ ಇಲ್ಲದೆ ಹಾಡುವುದರಲ್ಲಿಯೂ ನರ್ತನಮಾಡುವುದರಲ್ಲಿಯೂ ನನ್ನ ಸಪ್ತನಾಡಿಗಳೂ ಬಳಲಿ ನೋಯುತ್ತಿವೆ.

ವರೂದಿನಿ—ಇನ್ನು ಒಂದು ದಿನ ಮಾತ್ರ ಇಲ್ಲಿರುತ್ತಾರಂತೆ. ಆದರೆ ಆಯಿತು, ಅವರು ಅಂತಹ ಸುಂದರರೆಲ್ಲ! ಅವರಿಗಾಗಿ ನಾವು ಸ್ವಲ್ಪ ಶ್ರಮಪಡ ಕೂಡದೆ?

ಸ್ವಯಂಪ್ರಭೆ—ಅವರು ಹೇಗೆ ಸುಂದರರು ಎನ್ನುತ್ತೀ? ತೋಳು ಕಂಬದಂತೆ, ಮೈಯೆಲ್ಲಾ ಬಾಣದ ಗಾಯ. ನಡೆದರೆ ಭೂಮಿ ನಡುಗುತ್ತೆ. ಮಾತನಾಡಿದರೆ ಕಿವಿಯಲ್ಲಿ ಭೋರ್ಗರೆಯುತ್ತೆ!

ವರೂದಿನಿ—ವೀರರು ಇನ್ನು ಹ್ಯಾಗೆ ಇರುತ್ತಾರೆ? ಚಿಗುರುತ್ತಿರುವ ಮಲ್ಲಿಗೆ ಲತೆಯಂತೆ ಯಾವುದಕ್ಕಾದರೂ ಆಶ್ರಯ ಹೊಂದಿ ಕೋಗಿಲೆಯಂತೆ ಕೂಗುತ್ತಾರಲ್ಲವೇ!

ಮೇನಕೆ—ಅವಳ ಮಾತನ್ನು ಬಿಡು. ಸ್ವಯಂಪ್ರಭೆಗೆ ಇದು ಯಾವ ತ್ತೂ ಅಭ್ಯಾಸತಾನೇ. ಮನಸ್ಸಿನಲ್ಲಿ ಒಂದಿದ್ದರೆ ಅದಕ್ಕೆ ತೀರ ವಿರುದ್ಧವಾಗಿ ಬಾಯಲ್ಲಿ ಹೇಳುವುದು ?

ಸ್ವಯಂಪ್ರಭೆ—ಹೌದಮ್ಮ, ನಿನಗೇನು ವಿಶ್ವಾಮಿತ್ರರನ್ನು ಕಂಡು ಮೋಹಿಸಿದ ಕಣ್ಣುಗಳಿಗೆ ಯಾವ ಪುರುಷನೂ ಸುಂದರನಾಗಿಯೇ ತೋರುತ್ತಾನೆ !

ಮೇನಕೆ—ವಿಶ್ವಾಮಿತ್ರರಿಗೇನು ಕಡಿಮೆ ? ನನಗೆ ಬಿಡುವು ಇದ್ದಿದ್ದರೆ ಅವರ ಗಡ್ಡವನ್ನು ಚೆನ್ನಾಗಿ ಬಾಚಿ ಅದರಲ್ಲಿ ಎರಡು ಹೂವುಗಳನ್ನು ಮುಡಿಸಿರುತ್ತಿದ್ದೆ. ಆಗ ಅವರು ಹೇಗಿರುತ್ತಿದ್ದರು ಗೊತ್ತೇ !

ರಂಭೆ—ಮನ್ಮಥನಂತೆ ಇರುತ್ತಿದ್ದರು. ಆದರೆ ಮನ್ಮಥನಿಗೆ ದಾಡಿ ಇಲ್ಲ. ಆದುದರಿಂದ ವಿಶ್ವಾಮಿತ್ರರು ಮನ್ಮಥನಿಗಿಂತ ಒಂದು ಕೈ ಮೇಲು. ಸಾಕೆ?

ಮಧುರಸ್ವರೆ—ಅದಿರಲಿ. ಅರ್ಜುನನು ದೇವೇಂದ್ರನ ಮಗನಂತೆಲ್ಲ. ನಿಜವೆ ?

ರಂಭೆ—ಹಾಗೆ ಎಲ್ಲರೂ ಹೇಳುತ್ತಾರೆ. ನಿಜವಿರಬಹುದು. ಯಾಕೆಂದರೆ ಈ ಹಿಂದೆಯೂ ಭೂಲೋಕದಿಂದ ವೀರರನ್ನು ಸಾರಥಿ ಮಾಧವಿ ಕರೆದುಕೊಂಡು ಬರುತ್ತಿದ್ದುದುಂಟು. ಆದರೆ ಯಾರನ್ನೂ ಹೀಗೆ ದೇವೇಂದ್ರ ತನ್ನ ಸಿಂಹಾಸನದಲ್ಲಿ ಕೂರಿಸಿದುದಿಲ್ಲವೆಲ್ಲ ?

ವರೂದಿನಿ—ಸ್ವಯಂಪ್ರಭೆ ಏನು ಬೇಕಾದರೂ ಹೇಳಲಿ. ಅವರಿಬ್ಬರೂ ಒಟ್ಟಾಗಿ ಕುಳಿತಿರುವುದು ನೋಡುವುದಕ್ಕೆ ಮನೋಹರವಾಗಿರುವುದು !

ಚಿತ್ರಲೇಖೆ—ನಾರದರು ನೆನ್ನೆ “ ಈಗ ಚತುರ್ದಶಿಯಾಗಿದೆ ” ಎಂದು ಹೇಳಿಕೊಂಡು ಹೋದರು. ಪಂಚಾಂಗದಂತೆ ನೆನ್ನೆ ಪಂಚಮಿ. ಏನನ್ನು ನೆನೆದುಕೊಂಡು ಆ ಸಾಧು ಹಾಗೆ ಹೇಳಿದರೋ ?

ರಂಭೆ—ಅಲ್ಲಕಣೇ. ಚತುರ್ದಶಿ ಸಾಯಂಕಾಲ ತಾನೇ ಅಸ್ತಮಿಸುವ ಶಾಂತ ಸೂರ್ಯನೂ, ಉದಯಿಸುವ ಪೂರ್ಣ ಚಂದ್ರನೂ ಒಂದೇ ಸಮಯದಲ್ಲಿ ಒಟ್ಟಿಗೆ ಕಾಣುವರು.

ಚಿತ್ರಲೇಖೆ—ಅದೇ ಅರ್ಥ ! ಹಾಗಾದರೆ ಅವರಿಬ್ಬರಲ್ಲಿ ಯಾರು ಚಂದ್ರ ಯಾರು ಸೂರ್ಯ ?

ರಂಭೆ—ಇಷ್ಟು ಸೂಕ್ಷ್ಮವಾಗಿ ಕೇಳಿದರೆ ನಾನು ಬದಲು ಹೇಳುವುದು

ಕಷ್ಟ. ಊರ್ವಶಿಯನ್ನು ಕೇಳು. ನಮ್ಮ ಪೈಕಿ ಅವಳಲ್ಲವೇ ವಿದುಷಿ. ನೀನು ಹೇಳು ಊರ್ವಶಿ.

ಊರ್ವಶಿ—ಅದರಲ್ಲಿ ಸಂದೇಹಕ್ಕೆ ಅವಕಾಶವೆಲ್ಲಿಯದು ? ಎಲ್ಲರ ನೇತ್ರಗಳಿಗೂ ತಂಪಾಗಿ ಚಂದ್ರವಂಶದ ಪ್ರತಿನಿಧಿಯಾಗಿರುವ ಅರ್ಜುನನೇ ಚಂದ್ರ.

ಮೇನಕೆ—ಚೆನ್ನಾಗಿ ಕೇಳಿದಿರಾ ? ಎಲ್ಲರ ನೇತ್ರಗಳಿಗೂ ತಂಪಾಗಿದ್ದಾರಂತೆ ಅವರು. ಇನ್ನು ಸೂರ್ಯನನ್ನು ನಿಮ್ಮಲ್ಲಿ ಯಾರು ಬೇಕಾದರೂ ಆರಿಸಿಕೊಳ್ಳಿ. ಆದರೆ ಚಂದ್ರನ ಹತ್ತಿರ ಸುಳಿಯಲೇ ಬೇಡಿ –ಊರ್ವಶಿಗೆ ಪೈಪೋಟಿಯಾಗಿ.

ರಂಭೆ—ಹಾಗಾದರೆ ಇದು ಪೈಪೋಟಿಯಲ್ಲವೆ ? ದುಷ್ಯಂತನು ನಿನ್ನ ಮಗಳನ್ನು ಮದುವೆಮಾಡಿಕೊಂಡುದರಿಂದಲ್ಲವೇ ನೀನು ಚಂದ್ರವಂಶಕ್ಕೆ ಅತ್ತೆಯಾದೆ. ಊರ್ವಶಿ ಸೊಸೆ. ಅವಳೊಂದಿಗೆ ಪೈಪೋಟಿ ಕೂಡದು.

ಚಿತ್ರಲೇಖೆ—ಅವಳಿಗೆ ಪುರೂರವಸ್‌ನ ಜ್ಞಾಪಕವುಂಟುಮಾಡಿಬಿಟ್ಟೆ. ಇನ್ನು ಒಂದು ತಿಂಗಳು ಊರ್ವಶಿ ನಮ್ಮೊಂದಿಗೆ ಮಾತನಾಡುವುದಿಲ್ಲ.

ಊರ್ವಶಿ—(ಮನಸ್ಸಿನಲ್ಲಿ) ನನಗೆ ಯಾರೂ ಪುರೂರವಸ್‌ನ ಜ್ಞಾಪಕ ಉಂಟುಮಾಡಬೇಡಿ. ಅದಕ್ಕೂ ಇವರ ಮಾತು ಬೇಕೆ ? ಅರ್ಜುನನನ್ನು ನೋಡಿದಾಗಲೇ ಸ್ಪಷ್ಟವಾಗಿ ತೋರಲಿಲ್ಲವೆ ? ಪುರೂರವಸ್‌ನ ಕಣ್ಣುಗಳು ಅವರ ತುಟಿ, ಮುಖಭಾವ ನಡೆ ನೈಕಟ್ಟು.

ದಾಸಿ—(ಪ್ರವೇಶಿಸಿ) ಅಮ್ಮ ನಿಮ್ಮನ್ನು ಹುಡುಕಿಕೊಂಡು ಚಿತ್ರಸೇನ ಬಂದಿದ್ದಾರೆ.

ಊರ್ವಶಿ—ಚಿತ್ರಸೇನನೇ. ಇದೋ ಬಂದೆ (ಹೊರಡುತ್ತಾಳೆ)

ರಂಭೆ—ನಾವೂ ಹೋಗೋಣ. ಕತ್ತಲೆಯಾಯಿತು. (ಎಲ್ಲರೂ ಹೊರಡುತ್ತಾರೆ)

## ಎರಡನೆಯ ದೃಶ್ಯ

ಕಾಲ—[ಸ್ವಲ್ಪ ಹೊತ್ತಿನ ನಂತರ] ಸ್ಥಳ—[ಊರ್ವಶಿಯ ಮನೆ]

ಊರ್ವಶಿ ಮತ್ತು ಚಿತ್ರಸೇನರು

ಊರ್ವಶಿ—ಗಂಧರ್ವರಾಜರೇ ನಮಸ್ಕಾರ. ನನ್ನ ಗುಡಿಸಿಲಿಗೆ ತಾವು ದಯಮಾಡಿಸಿದ ಕಾರ್ಯವೇನೋ ?

ಚಿತ್ರಸೇನ—ಸೌಭಾಗ್ಯವತೀಭವ. ದೇವೇಂದ್ರನು ನನ್ನನ್ನ ಕಳುಹಿಸಿದನು.

ಊರ್ವಶಿ—[ನಿರುತ್ಸಾಹ ಧ್ವನಿಯಿಂದ] ಅವರ ಅಪ್ಪಣೆ ಏನು ?

ಚಿತ್ರಸೇನ—ಯಾಕಮ್ಮ ನಿನ್ನ ಮುಖ ಹೀಗೆ ಬಾಡಿಹೋಯಿತು. ನಿನಗೆ ಅಪ್ರಿಯವಾದ ಯಾವ ಮಾತನ್ನೂ ಇಂದ್ರನು ಹೇಳಿಲ್ಲವಲ್ಲ ?

ಊರ್ವಶಿ—ಪ್ರಿಯವೋ ಅಪ್ರಿಯವೋ, ಅವರ ಅಪ್ಪಣೆಯಂತೆ ತಾನೇ ನಾನು ನಡೆದುಕೊಳ್ಳಬೇಕಾದುದು ? ಅವರ ಅಪ್ಪಣೆ ಏನು ?

ಚಿತ್ರಸೇನ—ಮತ್ತೇನೂ ಇಲ್ಲ. ನೀನು ಅರ್ಜುನನ ಬಳಿಗೆ ಹೋಗಿ ಅವರನ್ನು ಉಪಚರಿಸಬೇಕೆಂದು ಹೇಳಿದರು.

ಊರ್ವಶಿ—ನನ್ನನ್ನೇ ? ಅರ್ಜುನನಿಗೆ ? ಇಂದ್ರಪದವಿಯನ್ನು ಕಿತ್ತುಕೊಳ್ಳಲು ಉಗ್ರತಪಸ್ಸು ಮಾಡುತ್ತಿದ್ದಾರೆಯೆ ? ಹಾಗಿದ್ದರೆ ತಪಸ್ಸನ್ನು ಕೆಡಿಸುವುದರಲ್ಲಿ ನಿಸ್ಸೀಮರಾದವರು ಇಲ್ಲವೆ ? ಮೇನಕೆ ತಿಲೋತ್ತಮೆ–

ಚಿತ್ರಸೇನ—ನೋಡಿದೆಯಾ ? ಹೀಗೆ ನೀನೇ ಸುಮ್ಮ ಸುಮ್ಮನೆ ಕಲ್ಪನೆ ಮಾಡಿಕೊಳ್ಳುತ್ತೀಯಲ್ಲ ? ಅದೊಂದೂ ಇಲ್ಲ. ಇಂದ್ರ ಹೇಳಿದ ಮಾತುಗಳನ್ನೇ ಹೇಳಿಬಿಡುತ್ತೇನೆ. " ನಮ್ಮ ಮೆಚ್ಚಿನ ಊರ್ವಶಿಯ ಬಳಿ ಹೋಗಿ, ಅವಳು ಅರ್ಜುನನ್ನು ಉಪಚರಿಸುವಂತೆ ಹೇಳು. ನಮ್ಮ ಅಪ್ಪಣೆಯಿಂದಲೇ ಅವಳು ಹೀಗೆ ಮಾಡುತ್ತಿದ್ದಾಳೆ ಎಂಬುದೂ ಅರ್ಜುನನಿಗೆ ತಿಳಿದಿರಲಿ." ಇಂದ್ರ ಹೀಗೆ ಹೇಳಿದರು. ಇದರಲ್ಲಿ ತಪಸ್ಸು ಎಲ್ಲಿ, ತಪಸ್ಸು ಕೆಡಿಸುವುದು ಎಲ್ಲಿ ?

ಊರ್ವಶಿ—ನಮ್ಮ ಮೆಚ್ಚಿನ ಊರ್ವಶಿ ಎಂದು ಅವರು ಹೇಳಿದರೆ ?

ಚಿತ್ರ—ಹಾಗೆಯೇ ಹೇಳಿದರು. ಅದೇನು ಹೆಚ್ಚು ? ಹಿಂದೆ ನಾರಾಯಣ ಋಷಿ ತಪಸ್ಸುಮಾಡುತ್ತಿದ್ದ ಪ್ರದೇಶಕ್ಕೆ ಇಂದ್ರನು ತನ್ನ ಅಪ್ಸರೆಯರನ್ನೆಲ್ಲಾ ಕಳುಹಿಸಲಿಲ್ಲವೇ ? ಅವರನ್ನೆಲ್ಲಾ ಸೌಂದರ್ಯದಲ್ಲಿ ಸೋಲಿಸುತ್ತೇನೆಂದು ಹೇಳಿ ನಾರಾಯಣ ಋಷಿ ನಿನ್ನನ್ನು ಸೃಷ್ಟಿಸಿ ತನ್ನ ಶಪಥವನ್ನು ಪೂರ್ತಿಮಾಡಿಕೊಳ್ಳಲಿಲ್ಲವೆ ? ಅದೆಲ್ಲ ಹೋಗಲಿ. ನಿತ್ಯವೂ ತನ್ನ ಕಣ್ಣೆದುರಿಗೆ ನಿಲ್ಲುವವರಲ್ಲಿ ತಾರತಮ್ಯ ಇಂದ್ರನ ಕಣ್ಣಿಗೆ ತಿಳಿಯುವುದಿಲ್ಲವೆ ? ನಿನ್ನನ್ನು 'ಮೆಚ್ಚಿನ' ಎಂದು ಹೇಳದೆ ಮತ್ತೆ ಹೇಗೆ ವರ್ಣಿಸುವುದು ?

ಊರ್ವಶಿ—ಒಬ್ಬ ಸ್ತ್ರೀಯ ಸೌಂದರ್ಯವನ್ನು ಬಾಯಿತುಂಬ ಹೊಗಳಿದರೆ

ಅವಳಿಂದ ಯಾವ ಕಹಿಯಾದ ಕೆಲಸವನ್ನೂ ಸಹ ಮಾಡಿಸಬಹುದೆಂಬ ಸಾಮಾನ್ಯ ನಿಯಮಕ್ಕನುಸಾರವಾಗಿ ನೀವು ಮಾತನಾಡುತ್ತಿರುವಂತಿದೆ.

ಚಿತ್ರಸೇನ—ಇಲ್ಲವೇ ಇಲ್ಲ. ನಾನು ಹೇಳುತ್ತಿರುವುದು ನಿಜವೆಂದು ನಿನಗೇ ಗೊತ್ತು. ಜತೆಯಲ್ಲಿಯೇ ಇನ್ನೊಂದು ವಿಷಯವನ್ನು ಹೇಳಿಬಿಡುತ್ತೇನೆ. ಸಭೆ ನಡೆಯುವಾಗಲೆಲ್ಲ ಅರ್ಜುನ ಮುಖ್ಯವಾಗಿ ನಿನ್ನೊಬ್ಬಳನ್ನೇ ನೋಡುತ್ತಾನೆ. ಅದರಿಂದಲೇ ನಿನ್ನನ್ನು ಕಳುಹಿಸಬೇಕೆಂದು ಇಂದ್ರನಿಗೆ ತೋರಿರಬಹುದು. ಅರ್ಜುನನು ನಿನ್ನನ್ನು ಗಮನಿಸುವುದು ಮಾತ್ರವೇ ಅಲ್ಲ. ಕೆಲವು ಕಾಲದಿಂದ ಯಾರನ್ನೂ ಕಣ್ಣುಬಿಟ್ಟು ನೋಡದೆ ಅಲಕ್ಷ್ಯದಿಂದಿರುವ ನೀನೂ ಸಹ, ಅರ್ಜುನನನ್ನು ಕುರಿತು ನೋಡುತ್ತಿರುವುದು ಸಭೆಯಲ್ಲಿ ಎಲ್ಲರಿಗೂ ಗೊತ್ತಾಗಿದೆ. ಅದನ್ನಾದರೂ ಒಪ್ಪಿಕೊಳ್ಳುತ್ತೀಯಾ ?

ಊರ್ವಶಿ–ಅದಿರಲಿ ಚಿತ್ರಸೇನರೇ, ದಯವಿಟ್ಟು ನನಗೆ ಇದನ್ನು ಹೇಳಿ. ಭೂಲೋಕದಲ್ಲಿ ಪ್ರತಿಯೊಬ್ಬ ಮನುಷ್ಯನಿಗೂ ಮತ್ತೆ ಮತ್ತೆ ಜನನ-ಮರಣ ಮರಣ ಜನನ ಉಂಟಲ್ಲವೆ ?

ಚಿತ್ರ—ಹೌದು.

ಊರ್ವಶಿ—ಎರಡನೆ ಜನ್ಮದಲ್ಲಿಯೂ ಆತ ಮೊದಲ ಜನ್ಮದಲ್ಲಿದ್ದಂತೆಯೇ ಇರುತ್ತಾನೆಯೇ ?

ಚಿತ್ರ—ನಿನ್ನ ಪ್ರಶ್ನೆ ನನಗೆ ಸರಿಯಾಗಿ ಅರ್ಥವಾಗಲಿಲ್ಲ. ತಿಳಿಯಾಗಿ ಹೇಳು.

ಊರ್ವಶಿ—ಈಗ ಒಬ್ಬ ಅರಸನಾಗಿದ್ದಾನೆ. ಮುಂದಲ ಜನ್ಮದಲ್ಲಿಯೂ ಅವನು ಅರಸನಾಗಿಯೇ ಜನಿಸುತ್ತಾನೆಯೇ ? ಮೂಟೆ ಹೊರುವ ಕೂಲಿಯಾಗಿಯೂ ಹುಟ್ಟಲು ಅವನಿಗೆ ಅವಕಾಶವಿದೆಯೆ ? ಒಂದು ಜನ್ಮದಲ್ಲಿರುವ ಮುಖಭಾವ ಆಕೃತಿ, ದೇಹ ಸೌಂದರ್ಯಗಳೇ ಮುಂದಲ ಜನ್ಮಕ್ಕೂ ಇರುವುವೆ ? ಅಥವ ಬದಲಾಯಿಸುವುವೆ ?

ಚಿತ್ರ—ಹೀಗೆ ಭೂಲೋಕಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ ಸರಿಯಾಗಿ ಪ್ರತ್ಯುತ್ತರ ಕೊಡಲು ನನ್ನಿಂದ ಸಾಧ್ಯವಿಲ್ಲ. ಇದು ದೇವೇಂದ್ರನಿಗೂ ಸಾಧ್ಯವಿಲ್ಲವೆಂದು ಭಾವಿಸುತ್ತೇನೆ. ನಾರದರಂತಹ ದೇವಋಷಿಗಳಿಗೆ ಮಾತ್ರ ಇವೆಲ್ಲ ಸಾಧ್ಯ. ಬೇಕಾದರೆ ನಾರದರನ್ನೇ ಕೇಳಿ ನೋಡುತ್ತೇನೆ.

ಊರ್ವಶಿ—(ತನ್ನಲ್ಲಿ) ಸರಿ. ಅವರನ್ನು ಕೇಳಿಬಿಟ್ಟರೆ ಆಮೇಲೆ ನಾಲ್ಕು ದಿನ ಉಪನ್ಯಾಸಮಾಡುತ್ತಾ ಕುಳಿತುಬಿಡುತ್ತಾರೆ, ಅವರನ್ನು ಯಾಕೆ ಕೇಳ ಬೇಕು? ಪುರೂರವಸ್ ಅರ್ಜುನ ಈ ಇಬ್ಬರನ್ನು ಪ್ರತ್ಯಕ್ಷವಾಗಿ ನೋಡಿದರೆ, ಕಣ್ಣುಗಳಿಗೇ ಸ್ಪಷ್ಟವಾಗುವುದಿಲ್ಲ? ಅದೇ ವಂಶ, ಅದೇ ಪದವಿ, ಅದೇ ಆಕೃತಿ (ಪ್ರಕಾಶವಾಗಿ) ಇದಕ್ಕಾಗಿ ನೀವು ಶ್ರಮಪಡಬೇಡಿ. ಒಬ್ಬರನ್ನೂ ಕೇಳಬೇಕಾ ದುದೂ ಇಲ್ಲ. ಇನ್ನು ಈ ವಿಷಯ ನೀವು ಹೇಳಿದಂತೆ ಮಾಡುತ್ತೇನೆ ನಮಸ್ಕಾರ.

ಕಾಲ—ಆ ರಾತ್ರಿ : ಸುಮಾರು ಅರ್ಧರಾತ್ರಿ.

ಸ್ಥಳ—ಅರ್ಜುನನು ಇಳಿದುಕೊಳ್ಳಲು ಸಿದ್ಧಪಡಿಸಿದ್ದ ಭವನದ ಮುಂದೆ

[ಊರ್ವಶಿ ಸ್ನಾನಮಾಡಿ ಅಲಂಕಾರಮಾಡಿಕೊಂಡು, ಸೌರಭವನ್ನು ಸೂಸುತ್ತಾ ಬೀದಿಯಲ್ಲಿ ಒಯ್ಯಾರದಿಂದ ನಡೆದುಬಂದು ಬಾಗಿಲ ಕದವನ್ನು ತಟ್ಟುತ್ತಾಳೆ. ದ್ವಾರಪಾಲಕ ಬರುತ್ತಾನೆ.]

ಊರ್ವಶಿ—ದೇವೇಂದ್ರರು ಕಳುಹಿಸಿರುವ ಒಬ್ಬ ಅಪ್ಸರಕನ್ನಿಕೆ ಬಂದಿ ದ್ದಾಳೆಂದು ಪಾರ್ಥರಿಗೆ ಹೇಳು.

[ದ್ವಾರಪಾಲಕ ಒಳಗೆ ಹೋಗುತ್ತಾನೆ. ಸ್ವಲ್ಪ ಹೊತ್ತಿನೊಳಗಾಗಿ ಅರನಿದ್ರೆಯಿಂದ ಕಣ್ಣು ಹೊಸಕಿಕೊಳ್ಳುತ್ತಾ ಅರ್ಜುನದೇವ ಹೊರಗೆ ಬರುತ್ತಾರೆ.]

ಅರ್ಜುನ—ಈ ನಿಶಿರಾತ್ರಿಯಲ್ಲಿ ದೇವೇಂದ್ರ ಕಳುಹಿಸಿದ್ದಾರೆಯೆ? ಯಾರನ್ನ? ಯಾವ ಕಾರ್ಯಕ್ಕಾಗಿ?

ಊರ್ವಶಿ—ಬಂದಿರುವವಳು ನಾನೇ ಕುಂತೀ ಪುತ್ರ—, ನಿನ್ನನ್ನು ಉಪ ಚರಿಸಲು ನನ್ನನ್ನು ಕಳುಹಿಸಿದ್ದಾರೆ.

ಅರ್ಜುನ—[ಅವಳನ್ನು ಸ್ವಾಗತಿಸಿ] ಬಾ ನಾರೀಮಣಿ! ನಿನಗೆ ನಮಸ್ಕಾರ ಈ ರಾತ್ರಿ ವೇಳೆಯಲ್ಲಿ ನಿನ್ನನ್ನು, ಯಾತಕ್ಕಾಗಿ ಶ್ರಮಪಡಿಸಿದರು?

ಊರ್ವಶಿ—ಶ್ರಮವೇನು? ನಮಗೆ ನಿದ್ರೆಯೇ ಆವಶ್ಯಕವಿಲ್ಲವಲ್ಲ.

ಅರ್ಜುನ—ನನಗೆ ಬೇಕಾದ ಪರಿಚಾರಕರು ಈಗಾಗಲೇ ಇದ್ದಾರೆಲ್ಲ. ನಿನ್ನಂತಹ ಸ್ತ್ರೀ ರತ್ನವನ್ನು ಯಾಕೆ ಕಳುಹಿಸಿದರು?

ಊರ್ವಶಿ—ಕಾರಣ ನಿನಗೆ ತಿಳಿಯಲಿಲ್ಲವೆ?

ಅರ್ಜುನ—ತಿಳಿಯಲಿಲ್ಲವಲ್ಲ!

ಊರ್ವಶಿ—'ಚಿತ್ರಸೇನಾ ಊರ್ವಶಿಯನ್ನು ಅರ್ಜುನನಲ್ಲಿಗೆ ಕಳುಹಿಸಿ

ಅವನ ಇಷ್ಟದಂತೆ ನಡೆದುಕೊಳ್ಳಹೇಳು ' ಎಂದು ಹೇಳಿ ಕಳುಹಿಸಿದ್ದಾರೆ. ಎರಡು ಲೋಕಗಳಲ್ಲಿಯೂ ಪ್ರಸಿದ್ಧನಾದ ನಾಯಕನಿಗೆ ಈ ಒಗಟಿ ಬಿಡಿಸಲು ತಿಳಿಯದೆ ?

ಅರ್ಜುನ–ನನ್ನ ಬುದ್ಧಿಗೆ ಎಟಕದ ಒಗಟಿಯಾಗಿದೆ ಇದು. ನಿನ್ನ ಸೌಂದರ್ಯದ ಪ್ರಕಾಶದಿಂದ ನನ್ನ ಬುದ್ಧಿ ಮಂಕಾಗಿದ್ದಿರಬೇಕು. ನೀನೇ ತಿಳಿಯುವಂತೆ ಹೇಳು.

ಊರ್ವಶಿ–(ಅರ್ಜುನನು ಅನುಕೂಲನಾಗಿರುವನೆಂದು ಭಾವಿಸಿ, ಆಸೆಯಿಂದ) ಅರ್ಜುನಾ ನಾನು ಈ ಲೋಕದವಳಾಗಿ ಇಷ್ಟಬಂದಂತೆ ಭೂಲೋಕಕ್ಕೆ ಹೋಗಲು ಸಾಧ್ಯವಿಲ್ಲದವಳು. ಆದರೆ ನನ್ನನ್ನೇ ಹುಡುಕಿಕೊಂಡು ಬಂದಂತೆ ನೀನು ಇಲ್ಲಿ ಬಂದೆ. ಇನ್ನು ನಾವು ವಿವಾಹಮಾಡಿಕೊಂಡರೆ ನಿನ್ನನ್ನು ಉಪಚರಿಸುವ ಭಾಗ್ಯ ನನಗೆ ಶಾಶ್ವತವಾಗಿ ದೊರೆಯುವುದಿಲ್ಲವೆ ?

ಅರ್ಜುನಾ–(ಬೆಚ್ಚಿಬಿದ್ದು) ವಿವಾಹವೆ ? ನಾನು ಈಗ ಒಂದು ವ್ರತದಲ್ಲಿದ್ದೇನೆಲ್ಲ !

ಊರ್ವಶಿ–(ಮುಗುಳುನಗೆಯೊಡನೆ) ಹಾಗೆ ವ್ರತ ಕೊಂಡವನು, ಇಂದ್ರ ಸಭೆಯಲ್ಲಿ ಯಾಕೆ ನನ್ನನ್ನು ಪದೇ ಪದೇ ಕುರಿತು ನೋಡಿದೆ ? ಇದನ್ನು ನಾನು ಮಾತ್ರವಲ್ಲ, ಅಲ್ಲಿದ್ದ ಇತರರೂ ಗಮನಿಸಿದ್ದಾರೆ. ಇಂಗಿತಜ್ಞನಾಗಿ ಇಂದ್ರ ಅದನ್ನು ಅರಿತೇ ನಾನು ನಿನ್ನಲ್ಲಿಗೆ ಹೋಗಬೇಕೆಂದು ಚಿತ್ರಸೇನನೊಡನೆ ಹೇಳಿ ಕಳುಹಿಸಿದ.

ಅರ್ಜುನ– ನಾನು ನಿನ್ನನ್ನು ಕುರಿತು ನೋಡಿದುದು ನಿಜ. ಅದರ ಕಾರಣ ಹೇಳುತ್ತೇನೆ. ನಮ್ಮ ವಂಶದ ಆದಿಪುರುಷ—

ಊರ್ವಶಿ – (ಅರ್ಜುನನ ಮಾತುಗಳನ್ನು ಕಿವಿಯ ಮೇಲೆ ಹಾಕಿಕೊಳ್ಳದೆ) ಅರ್ಜುನಾ, ಇಂದ್ರ ಹೇಳಿದನೆಂದು ಮಾತ್ರ ನಾನು ಬರಲಿಲ್ಲ. ನನ್ನ ಇಷ್ಟದಿಂದಲೇ ಬಂದಿದ್ದೇನೆ. ನಮ್ಮ ಸಂಸರ್ಗಕ್ಕೆ ಯಾವ ತಡೆಯೂ ಇಲ್ಲ.

ಅರ್ಜುನ–(ಕಿವಿಯನ್ನು ಮುಚ್ಚಿಕೊಂಡು) ಈಶ್ವರಾ ! ನಿನ್ನ ಮಾತು ಕರ್ಣ ಕಠೋರವಾಗಿದೆಯಲ್ಲ ! ನಮ್ಮ ಹಿರಿಯರಾದ ಪುರೂರವಸ್‌ನ ಭಾರ್ಯೆ ಅಲ್ಲವೇ ನೀನು, ಅದರಿಂದ ತಾನೆ ನಾನು ನಿನ್ನನ್ನು ಮತ್ತೆ ಮತ್ತೆ ನೋಡಿದೆ? ನಾನು

ನಿನ್ನನ್ನು ವರಿಸುವುದು ದೊಡ್ಡಪಾಪವಲ್ಲವೆ? ನೀನು ನನಗೆ ಬಾಂಧವ್ಯದಲ್ಲಿ ಅಜ್ಜಿ ಆಯಿತಲ್ಲ!

ಊರ್ವಶಿ – ಇದೇನು ಮಕ್ಕಳಾಟಿಕೆಯ ಮಾತು! ಭೂಲೋಕದ ಸಂಬಂಧ ಇಲ್ಲಿ ಬರುವುದೂ ಉಂಟೆ? ಪ್ರತಿದಿನವೂ ಸ್ವರ್ಗಪ್ರಾಪ್ತಿ ಹೊಂದಿದ ಮನುಷ್ಯರು ಇಲ್ಲಿಗೆ ಬರುತ್ತಲೇ ಇರುತ್ತಾರೆ. ಶೇಖರಿಸಿದ ಪುಣ್ಯಫಲ ತೀರಿದ ವ ು, ದಿನದಿನವೂ ಹೊಸ ಜನ್ಮವೆತ್ತಲು ಭೂಲೋಕಕ್ಕೆ ಹೋಗುತ್ತಲೇ ಇರುತ್ತಾರೆ. ಹೀಗೆ ಕೋಟಿ ಕೋಟಿ ಸಂಖ್ಯೆಯ ಜನ ಸ್ವರ್ಗಕ್ಕೆ ಬಂದು ವಾಸಿಸಿ ಆಗಿಹೋಯಿತು. ಇವರಿಗೆ, ಬೇರೆ ಜನ್ಮಗಳಲ್ಲಿ ಇರಬಹುದಾದ ಬಾಂಧವ್ಯವನ್ನು ವಿಚಾರಿಸಿ ನಿರ್ಣಯಿಸಲು ಯಾವ ಅಪ್ಸರ ಸ್ತ್ರೀಗಾಗಲಿ ಸಾಧ್ಯವೇ? ಭೂಲೋಕದ ಬಾಂಧವ್ಯ ಭೂಲೋಕಕ್ಕೆ ಮಾತ್ರ, ಬೇಕಾದರೆ ಇಲ್ಲಿ ಯಾರನ್ನಾದರೂ ಕೇಳಿನೋಡು. ಇಂದ್ರನು ನನ್ನನ್ನು ನಿನ್ನಲ್ಲಿಗೆ ತಿಳಿಯದೆ ಕಳುಹಿದನೆ? ನನ್ನನ್ನು ನೋಡಿದರೆ ನಿನ್ನ ಕಣ್ಣಿಗೆ ಅಜ್ಜಿಯ ಹಾಗೆ ತೋರುವುದೆ?

ಅರ್ಜುನ–ಎಲೆ ಕಲ್ಯಾಣಿ! ನನ್ನ ಮನಸ್ಸನ್ನು ಚಂಚಲಗೊಳಿಸಬೇಡ. ಇದೋ ನನ್ನ ತಲೆಯಿಂದ ನಿನ್ನ ಪಾದ ಕಮಲಗಳನ್ನು ವಂದಿಸುತ್ತೇನೆ.

ಊರ್ವಶಿ–(ಗಾಬರಿಯಿಂದ) ಅಯ್ಯೋ! ಬೇಡ. ನಾನಲ್ಲವೇ ನಿನ್ನ ಪಾದವನ್ನು ಹಿಡಿಯಬೇಕಾದವಳು. ಇದೋ ಹಿಡಿಯುತ್ತೇನೆ. ನನ್ನ ಮನೋರಥ ಫಲಿಸುವಂತೆ ನೀನೇ ಆಶೀರ್ವದಿಸು.

ಅರ್ಜುನ–ನನ್ನನ್ನು ಧರ್ಮ ಸಂಕಟದಲ್ಲಿ ಕೆಡವಬೇಡ. ನಿನ್ನೊಂದಿಗೆ ಈ ವಾದದಲ್ಲಿ ನಾನು ಸೋತರೂ ಗೆದ್ದರೂ — ಹೇಗೂ — ನನಗೆ ತೃಪ್ತಿ ಇಲ್ಲ.

ಊರ್ವಶಿ–ಹಾಗಾದರೆ ಯಾಕೆ ವಾದಿಸುವೆ? ಈ ಜಗತ್ತೆಲ್ಲ ಅನುಸರಿಸುವ ಆಚಾರವನ್ನೇ ನೀನೂ ಅನುಸರಿಸುವುದು ತಾನೆ?

ಅರ್ಜುನ–ಇಲ್ಲಿಯ ಆಚಾರ ಹೇಗೇ ಇದ್ದರೂ, ನಮ್ಮ ಬಾಂಧವ್ಯ ನಮಗೆ ತಿಳಿದಿರುವಾಗ, ನನ್ನ ಮನಸ್ಸಾಕ್ಷಿ ನನ್ನನ್ನು ಎಚ್ಚರಿಸುವುದಿಲ್ಲವೆ?

ಊರ್ವಶಿ–ಎಚ್ಚರಿಸಲಿ! ಅದು ಹೇಳುವುದು ನ್ಯಾಯವಾಗಿದ್ದರೆ ತಾನೇ ನೀನು ಅದನ್ನು ಗಮನಿಸುವುದು! ನೀವು ಐವರು ಸಹೋದರರೂ ಹನ್ನೆರಡು ವರುಷ ಕಾಡಿನಲ್ಲಿ ವಾಸಿಸುವುದಾಗಿ ಒಪ್ಪಂದ. ಈಗ ನೀನು ಕೌರವನಲ್ಲಿಗೆ ಓಡಿ ಹೋಗಿ "ಸಹೋದರರೇ ನಿಮಗೆ ತಿಳಿಯದಂತೆ ನಾನು ನಾಲ್ಕು ದಿನಗಳು

ಸ್ವರ್ಗದಲ್ಲಿ ವಾಸಿಸಿಬಿಟ್ಟೆ. ನನ್ನ ವಾಗ್ದಾನಕ್ಕೆ ಭಂಗ ಬಂತು. ಆದುದರಿಂದ ಮತ್ತೆ ವನವಾಸವನ್ನು ಪ್ರಾರಂಭಿಸಬೇಕೆಂದು ನನ್ನ ಮನಸ್ಸಾಕ್ಷಿ ಹೇಳುತ್ತದೆ" ಎಂದು ಹೇಳುತ್ತೀಯಾ ? ಹೇಳು.

ಅರ್ಜುನ–(ಬೆಚ್ಚಿಬಿದ್ದು ಅವಳಿಗೆ ನೇರವಾದ ಪ್ರತ್ಯುತ್ತರ ಕೊಡಲರಿಯದೆ ಒಂದೇ ಉಸುರಿನಲ್ಲಿ) ಅಷ್ಟದಿಕ್ಕು ದೇವತೆಗಳೇ, ನಾನು ಹೇಳುವುದನ್ನು ಕೇಳಿಕೊಳ್ಳಿ. ನಾನು ಸತ್ಯವಾಗಿ ಹೇಳುತ್ತೇನೆ. ಊರ್ವಶಿ ನನಗೆ ತಾಯಿಯಂತೆ, ಅಜ್ಜಿ ಯಂತೆ —

ಊರ್ವಶಿ – ಅರ್ಜುನಾ ಸ್ವಲ್ಪ ತಡೆದುಕೊ. ಅವಸರದಲ್ಲಿ ಪ್ರತಿಜ್ಞೆ ಮಾಡಬೇಡ. ನೀನೇ ಹಿಂದಲ ಜನ್ಮದಲ್ಲಿ ಪುರೂರವಸ್ ಆಗಿ ಜನಿಸಿ ನನ್ನ ಪತಿಯಾಗಿದ್ದೆ, ಎಂದು ಹೇಳಿದರೆ, ಆಗಲೂ ಈ ಆಕ್ಷೇಪಣೆಯೇ ಉಂಟೆ ? ಹೇಳು.

ಅರ್ಜುನ – ಅದು ಬರೀ ಮಾತು. ನಾನು ಅದನ್ನು ನಂಬುವುದೇ ಇಲ್ಲ. ಸ್ತ್ರೀಯರು ವಂಚಕರು. ತಮ್ಮ ಇಷ್ಟವನ್ನು ಸಾಧಿಸಲು ಯಾವ ಸುಳ್ಳನ್ನೂ ಹೇಳುತ್ತಾರೆ.

ಊರ್ವಶಿ – ಕೌಂತೇಯ. ನನಗಾಗಿ ಸ್ತ್ರೀಯರನ್ನೆಲ್ಲಾ ಒಂದೇ ಏಟಿಗೆ ದೂಷಿಸಬೇಡ. ಭಕ್ತಿಯಿಂದಲೂ ವಿಶ್ವಾಸದಿಂದಲೂ ಕಾಮದಿಂದಲೂ ನಿನ್ನಲ್ಲಿ ಬಂದ ನನ್ನನ್ನು ತಿರಸ್ಕರಿಸಬೇಡ. ನನ್ನ ಅವಸ್ಥೆಯನ್ನು ನೋಡಿದರೆ ಬೇರೆ ಯಾವ ಪುರುಷನಾದರೂ ಕನಿಕರಪಡುವನು. ಯಾವ ಸ್ತ್ರೀಯೇ ಆಗಲಿ ಕನಿಕರಪಡಲಿ ಅಥವ ಪಡದೆ ಇರಲಿ, ನನ್ನ ವೇದನೆಯನ್ನಂತೂ ಅರಿಯುತ್ತಾಳೆ. ನೀನು ಮಾತ್ರ ಈ ಎರಡರಲ್ಲಿಯೂ ಸೇರದೆ—

ಅರ್ಜುನ–ಹಾಗೆ ಆಗಲಿ. ನಾನು ಸ್ತ್ರೀಯೂ ಅಲ್ಲ. ಪುರುಷನೂ ಅಲ್ಲ. ನಪುಂಸಕನೆಂದೇ ಭಾವಿಸಿಕೊ. ನಿನ್ನ ಮೋಸದ ಬಲೆಯಲ್ಲಿ ಸಿಕ್ಕಿ ನನ್ನ ವ್ರತವನ್ನು ಭಂಗಪಡಿಸಿಕೊಂಡು ರಾಜ್ಯವನ್ನು ಕಳೆದುಕೊಳ್ಳುವುದಕ್ಕಿಂತ, ಎಲ್ಲರೂ ನನ್ನನ್ನು ನಪುಂಸಕನೆಂದು ಭಾವಿಸುವುದೇ ನನಗೆ ಸಮ್ಮತ. [ಅವಳು ಹಿಡಿದುಕೊಂಡಿರುವ ಕಾಲನ್ನು ಒದರಿ ಬಿಡಿಸಿಕೊಳ್ಳುತ್ತಾನೆ. ಆ ಕಾಲು ಅವಳ ತಲೆಗೆ ತಗಲುತ್ತದೆ.]

ಊರ್ವಶಿ – (ಅವಮಾನದಿಂದಲೂ ಕೋಪದಿಂದಲೂ ಮೈಮರೆತು) ನಾನೇ ನಿನ್ನನ್ನು ಮೋಸಪಡಿಸುವವಳು ? ನಿನಗೆ ಕೇಡನ್ನು ಮಾಡಬಯಸುವವಳು ?

ಹೀಗೆ ಭಾವಿಸಿ ನಪುಂಸಕನಂತೆ ಮಾತನಾಡುವ ನೀನು ಶಿಖಂಡಿಯೇ ಆಗಿ ಹೋಗು.

[ಅರ್ಜುನನ ದೇಹ ನಡುಗಲು ಮನಸ್ಸು ದಿಗಿಲುಗೊಳ್ಳಲು ಮತ್ತೆ ಒಳಕ್ಕೆ ಹೋಗುತ್ತಾನೆ.]

ಊರ್ವಶಿ– ಅಯ್ಯೋ ದೇವರೇ! ನಾನು ಏನುಮಾಡಿಬಿಟ್ಟೆ? ನನ್ನ ಪುರೂರವಸ್‌ನ್ನು ಶಪಿಸಿಬಿಟ್ಟೆನಲ್ಲ? ಅಯ್ಯೋ (ಮೂರ್ಛೆ ಬೀಳುತ್ತಾಳೆ. ಸ್ವಲ್ಪ ಹೊತ್ತಿನೊಳಗಾಗಿ ನಾರದರು ಪ್ರತ್ಯಕ್ಷರಾಗುತ್ತಾರೆ. ಉಪಚಾರಮಾಡಿ ಅವಳ ಮೂರ್ಛೆಯನ್ನು ತಿಳಿಸುತ್ತಾರೆ.)

ನಾರದ–ಏಳು ಮಗು.

ಊರ್ವಶಿ–(ತುಂಬ ದುಃಖದಿಂದ) ಮಹರ್ಷಿಗಳೇ, ನಾನು ಎಂತಹ ಕಾರ್ಯ ಮಾಡಿಬಿಟ್ಟೆ. ಒಂದು ಕೋಟಿ ಪಾಪವಲ್ಲವೇ—

ನಾರದ–ದುಃಖಪಡಬೇಡ. ಈ ಶಾಪ ಅರ್ಜುನನಿಗೆ ಪ್ರಯೋಜನವಾಗಿ ಅವನ ಒಳ್ಳೆಯದಕ್ಕೇ ಆಗುವುದು. ದುರ್ಯೋಧನಾದಿಗಳೊಂದಿಗೆ ಮಾಡಿಕೊಂಡ ಏರ್ಪಾಡಿನಂತೆ ಪಾಂಡವರು ಹದಿಮೂರನೆಯ ವರುಷದಲ್ಲಿ ಅಜ್ಞಾತವಾಸ ಮಾಡಬೇಕಷ್ಟೆ. ಆಗ ಅರ್ಜುನ ಶಿಖಂಡಿಯಾಗಿರಬೇಕಾದುದು ಅವಶ್ಯಕ. ನೀನು ಕೊಟ್ಟ ಶಾಪ ಆ ಒಂದು ವರುಷ ಮಾತ್ರ ನಡೆಯುವಂತೆ ಇಂದ್ರನು ಅಜ್ಞಾಪಿಸುತ್ತಾನೆ.

ಊರ್ವಶಿ–(ಆಸೆಯಿಂದ) ನಾರದರೇ ನೀವೇ ಹೇಳಿ. ಅರ್ಜುನನಲ್ಲವೇ, ಹಿಂದಲ ಜನ್ಮದಲ್ಲಿ ನನ್ನ ಪ್ರಿಯನಾಗಿದ್ದ ಪುರೂರವಸ್

ನಾರದ–(ದುಃಖದಿಂದ) ಅಲ್ಲ ಮಗು. ಒಂದೇ ವಂಶದಲ್ಲಿ ಹುಟ್ಟಿದವರಿಗೆಲ್ಲ ಆಕೃತಿ ಒಂದೇ ಸಮನಾಗಿರಬಹುದು. ನಮ್ಮ ಆಸೆ ಕರೆಯುತ್ತದೆಂದು ಅದೊಂದನ್ನೇ ನಂಬಿ ನಡೆಯಬಹುದೆ? ಹಿಂದೆ ನರ ನಾರಾಯಣರೆಂದು ಇಬ್ಬರು ಋಷಿಗಳು ಇದ್ದರಲ್ಲ? ಅವರ ಪೈಕಿ ನರಋಷಿಯೇ, ಕೆಲವು ಅಂಶಗಳೊಡನೆ ಈಗ ಅರ್ಜುನನಾಗಿ ಜನಿಸಿದ್ದಾರೆ.

ಊರ್ವಶಿ–(ಗಾಬರಿಯಿಂದ) ಹಾಗಿದ್ದರೆ, ಇಂದ್ರ ಅವರ ಬಳಿಗೆ ಹೋಗುವಂತೆ ನನಗೆ ಹೇಳಿಕಳುಹಿಸಿದರಲ್ಲ? ಇದು ಕ್ರೂರವಲ್ಲವೆ? ನಾನು ಪುರೂರವಸ್‌ರನ್ನು ವರಿಸಿದಂದಿನಿಂದಲೇ ನನ್ನ ವಿಷಯದಲ್ಲಿ ಇಂದ್ರನ ಮನಸ್ಸು ಬದಲಾಯಿಸಿದೆ.

ನಾರದ–ನೀನು ಮಾತ್ರ ಹೇಗೆ? ನಿನಗೆ ಅಪ್ಪಣೆ ಮಾಡುವ ಯಜಮಾನನೆಂದು ಇಂದ್ರನನ್ನು ಭಾವಿಸಿರುವೆಯೇ ಹೊರತು, ಹಿಂದಲಂತೆ ಅವನಲ್ಲಿ ಭಕ್ತಿಯಿಟ್ಟಿದ್ದೀಯಾ? ಅರ್ಜುನ ಅವನ ಮಗ. ಅವನಿಗೆ ಈ ಶಾಪ ಬರಬೇಕಾದುದು ಆವಶ್ಯಕ. ತಿರಸ್ಕರಿಸಲ್ಪಟ್ಟವಳು ಮಾತ್ರ ಇಂತಹ ಶಾಪ ಕೊಡಬಲ್ಲಳು. ಇದನ್ನೆಲ್ಲ ಯೋಚಿಸಿಯೇ ಇಂದ್ರ ನಿನ್ನನ್ನು ಇಲ್ಲಿಗೆ ಕಳುಹಿಸಿರಬಹುದು?

ಊರ್ವಶಿ–ಇಷ್ಟು ಮುಂದಾಲೋಚನೆಯುಳ್ಳ ಇಂದ್ರನಿಗೆ, ಇದರಿಂದ ನನಗೆ ಅವಮಾನವೂ ಮನೋವೇದನೆಯೂ ಉಂಟಾಗುವುದೆಂದು ತಿಳಿಯಲಿಲ್ಲವೆ? ತಿಳಿದೂ ತಾನೇ ಹೀಗೆ ಮಾಡಿದ್ದಾನೆ.

ನಾರದ–ಅದು ಅವನ ತಪ್ಪೇ ಸರಿ. ಇಂದ್ರನದು ತಪ್ಪಲ್ಲ ಎಂದು ಯಾರು ಹೇಳುತ್ತಾರೆ? ಆದರೆ ಒಂದು. ನೀನೂ ಸಹ, ಇತರ ಅಪ್ಸರ ಸ್ತ್ರೀಯರಂತೆ ತಾವರೆಯ ಮೇಲಿನ ನೀರಿನ ಹನಿಯಂತೆ ಯಾರೊಂದಿಗೂ ಬಂಧನವಿಟ್ಟುಕೊಳ್ಳದೆ ನಿರ್ಲಿಪ್ತಳಾಗಿದ್ದರೆ ನಿನಗೆ ಯಾವ ವೇದನೆಯೂ ಇಲ್ಲ. ನೀನು ಭೂಲೋಕದಲ್ಲಿ ಜನಿಸಿದ ಒಂದು ದೇವ ಕನ್ನಿಕೆಯಾದುದರಿಂದ ನಿನಗೆ ಎರಡು ಲೋಕಗಳಲ್ಲಿಯೂ ಪಾಶ. ಎರಡೂ ಕೆಟ್ಟ ಸ್ಥಿತಿ.

ಊರ್ವಶಿ–ಅದೇನು ಹಾಗೆ ಹೇಳುತ್ತೀರಿ?

ನಾರದ–ಮತ್ತೇನು? ನೋವು, ಮುಪ್ಪು ಸಾವು ಮೂರೂ ಇಲ್ಲದ ಒಂದು ದೇವತೆ, ಈ ಮೂರೂ ಇರುವ ಮನುಷ್ಯನಲ್ಲಿ ಅಂತವಿಲ್ಲದ ಪ್ರೇಮಗೊಂಡರೆ?

ಊರ್ವಶಿ–(ಹೀನ ಸ್ವರದಲ್ಲಿ) ಮಹರ್ಷಿಗಳೇ, ಪುರೂರವಸ್‌ರಿಗೆ ನಾನು ದೇವತೆ ಅಲ್ಲ. ಒಬ್ಬ ಸ್ತ್ರೀ. ನನ್ನ ಕಣ್ಣಿಗೆ ಅವರು ಒಬ್ಬ ಮನುಷ್ಯರಲ್ಲ. ಒಬ್ಬ ದೇವತೆ.

ನಾರದ–ಹೀಗೆ ಹೇಳಿದರೆ ಅದಕ್ಕೆ ಏನು ಮಾಡೋಣ? ನೀನು ಅವರನ್ನು ಬಯಸುತ್ತಿರುವುದು, ಬಂಧನವಿಲ್ಲದ ಆತ್ಮನಿಗೆ ನಶ್ವರದೇಹದಲ್ಲಿ ಆಸೆ ಹುಟ್ಟಿದಂತೆ ಆಗಿದೆ. ನೀನು ಹಿಡಿದಿರುವ ಹಾದಿಯಲ್ಲಿ, ಇತರರಿಗೆ ದೊರಕದ ಪ್ರೇಮವನ್ನು ನೀನು ಅನುಭವಿಸುತ್ತಿರುವಂತೆಯೇ, ಆ ಪ್ರೇಮವನ್ನೇ ಅನುಸರಿಸಿ ಬರುವ, ಇತರರಿಗೆ ಸಂಭವಿಸದ ವೇದನೆಗಳೂ ನಿನಗೆ ಸಂಭವಿಸುವುವಲ್ಲವೆ? ನೀನು

ಅವರನ್ನು ಮರೆತು ಇತರ ಅಪ್ಸರ ಸ್ತ್ರೀಯರಂತೆ ನೆಮ್ಮದಿಯಾದ ಮನಸ್ಸನ್ನು ಹೊಂದುವಂತೆ ವರ ಕೊಡಲೆ ?

ಊರ್ವಶಿ–ಸ್ವಾಮಿ ಬೇಡ ಬೇಡ. ನೂರು ಕಾಲಕ್ಕೂ ಬೇಡ. ನಾನು ಅನುಭವಿಸಿರುವ ಆನಂದದ ಜ್ಞಾಪಕವನ್ನು ಸಹ ಮರೆಯಲು ನಾನು ಸಮ್ಮತಿಸುವುದಿಲ್ಲ. ಮತ್ತೆ ಅದು ದೊರೆಯುತ್ತದೆಯೇ ಎಂದು ಯಾವಾಗಲೂ ಪಡುವ ಕೊರಗನ್ನು ಸಹ ಬಿಡಲು ಸಮ್ಮತಿಸುವುದಿಲ್ಲ.

ನಾರದ–ಹಾಗಾದರೆ ನಿನಗೆ ಬೇಕಾದುದಾದರೂ ಏನು ?

ಊರ್ವಶಿ–ಪುರೂರವಸ್‌ಗೆ ಅವಿನಾಶಿಯಾದ ಆತ್ಮವುಂಟಲ್ಲವೆ ? ಅವರು ಯಾವುದಾದರೂ ಜನ್ಮವನ್ನು ಹೊಂದಿರುವರಲ್ಲವೆ ?

ನಾರದ–ಹೌದು. ಅದು ಸರಿ.

ಊರ್ವಶಿ–ಅವರು ಯಾವ ಯಾವ ಜನ್ಮವನ್ನು ಹೊಂದಿದ್ದರೂ ನಾನು ಭೂಲೋಕಕ್ಕೆ ಹೋಗಿ ಅವರನ್ನು ಹೊಂದುವ ಮಾರ್ಗವನ್ನು ಮಾತ್ರ ಬೋಧಿಸಿರಿ. ನಿಮ್ಮನ್ನು ವಂದಿಸುತ್ತೇನೆ.

ನಾರದ–ಏನು ಇಂದ್ರನ ಸಮ್ಮತಿ ಅಪ್ಪಣೆ ಇಲ್ಲದೆ ನಿನ್ನ ಇಷ್ಟದಂತೆ ಹೋಗುವಿಯಾ ?

ಊರ್ವಶಿ–ಹೌದು ನನಗೆ ಅದೇ ಬೇಕು.

ನಾರದ–ಹಾಗಾದರೆ ಅವನಿಗಿಂತ ದೊಡ್ಡವರಿಂದ ತಾನೇ ನಿನಗೆ ಸಹಾಯ ದೊರಕಬೇಕಾದುದು?

ಊರ್ವಶಿ–ಅದಕ್ಕೆ ದಾರಿ ಹೇಳಿ. ನಿಮಗೆ ಕೋಟಿ ನಮಸ್ಕಾರ.

ನಾರದ–ನನಗೆ ಹೀಗೆ ತೋರುತ್ತೆ. ಈಗ ಭೂಲೋಕದಲ್ಲಿ ಮಹಾವಿಷ್ಣುವಾಗಿ ಅವತರಿಸಿರುವ ಶ್ರೀ ಕೃಷ್ಣನನ್ನೇ ನೀನು ಪ್ರಾರ್ಥಿಸಬೇಕು.

ಊರ್ವಶಿ–ಹಾಗೆಯೇ ಮಾಡುತ್ತೇನೆ.

ನಾರದ–ಹೀಗೆ ಸ್ಪಷ್ಟವಾಗಿ ಗುರುತಿಟ್ಟು ಯಾಕೆ ಹೇಳುತ್ತೇನೆಂದರೆ ಇತರ ಅವತಾರಗಳಲ್ಲಿ – ನರಸಿಂಹಾವತಾರವೇ ಆಗಲಿ ರಾಮಾವತಾರವೇ ಆಗಲಿ – ದುಷ್ಟನಿಗ್ರಹವೇ ಮುಖ್ಯವಾದ ಗುರಿ. ಕೃಷ್ಣನೋ ಹಾಗಲ್ಲ. ಹಿಂದಲ ಅವತಾರದಲ್ಲಿ, ಗರ್ಭಿಣಿಯಾಗಿದ್ದ ಸೀತೆಯನ್ನು ಕಾಡಿಗೆ ಅಟ್ಟಿ ಲೋಕಾಪವಾದವನ್ನು ಸಂಪಾದಿಸಿದಂದಿನಿಂದಲೇ ಬದಲಾಯಿಸಿದ್ದಾರೆ. ನ್ಯಾಯ

ವಾಗಿ ನಡೆದುಕೊಂಡರೆ ಮಾತ್ರವೇ ಸಾಲದು. ನ್ಯಾಯದಲ್ಲಿ ಕಾರುಣ್ಯವನ್ನು ಬೆರಸಬೇಕು ಎಂಬ ಭಾವನೆಯಿಂದ ಈಗ ಇತರರ ಕಷ್ಟಗಳನ್ನೇ ಮುಖ್ಯವಾಗಿ ಜ್ಞಾಪಕದಲ್ಲಿಟ್ಟುಕೊಂಡು ತಪ್ಪಿತಸ್ತರನ್ನು ಮನ್ನಿಸಿ ಅವರನ್ನು ರಕ್ಷಿಸುವುದನ್ನೇ ಗುರಿಯಾಗಿಟ್ಟುಕೊಂಡಿದ್ದಾರೆ.

ಊರ್ವಶಿ-(ಕೈಮುಗಿದು) ಕೃಷ್ಣಾ ! ಕೃಷ್ಣಾ !

ನಾರದ-ಜೂಜಾಡಿ ಸಮಸ್ತ ರಾಜ್ಯವನ್ನೂ ಹೆಂಡತಿಯನ್ನೂ ಸಹ ಸೋತ ಯುಧಿಷ್ಠಿರನ ಮೇಲೆ ಕೂಡ, ಒಂದು ಮಾತಿನಿಂದಲೂ ತಪ್ಪನ್ನು ಹೊರಿಸದೆ ಅವನನ್ನು ಕಾಪಾಡುವುದರಲ್ಲಿಯೇ ತೊಡಗಿದ್ದಾರೆ. "ಅವನೇನು ಕದ್ದನೇ? ಹಾಗಾದರೆ ಅವನ ಕೈಯನ್ನು ಕತ್ತರಿಸು" ಎನ್ನುತ್ತಿದ್ದರು ಇತರ ದೇವರುಗಳು. ಕೃಷ್ಣನಾದರೋ "ಯಾಕಪ್ಪಾ ಕದ್ದೆ ? ಹಸಿವಿನಿಂದ ಬಳಲಿದೆಯಾ ? ಅಯ್ಯಯ್ಯೋ ಇನ್ನು ಹಾಗೆ ಮಾಡಬೇಡ. ಇಗೋ ಈ ದಾರಿಯಲ್ಲಿ ದುಡಿದು ಸಂಪಾದಿಸಿ ಬದುಕು" ಎನ್ನುತ್ತಾರೆ.

ಊರ್ವಶಿ – ನನ್ನಂತಹವಳಲ್ಲಿ ಕನಿಕರಗೊಳ್ಳುವವರೆಂದರೆ ಅವರೇಯ. ಅರ್ಜುನನೇ ಪುರೂರವಸ್ ಎಂಬ ನಂಬಿಕೆ ಉಂಟಾಗುವುದಕ್ಕೆ ಮುಂಚೆಯೇ ಆಸೆಯಿಂದ ಇಲ್ಲಿ ಬಂದು ಬಿಟ್ಟೆ. ಬಂದ ಸ್ಥಳದಲ್ಲಿ ಕೋಪದಿಂದ ಅರ್ಜುನನನ್ನು ಶಪಿಸಿದೆ. ಕಾಮೋ ಅಕಾರಶೀತ್, ಮನ್ಯುರಕಾರಶೀತ್ (ಕಾಮದಿಂದ ಮಾಡಿದೆ· ಕೋಪದಿಂದ ಮಾಡಿದೆ) ಶ್ರೀಕೃಷ್ಣ ಪರಮಾತ್ಮನೇ ತಾನೇ ನನ್ನನ್ನು ರಕ್ಷಿಸಿ ಕಾಪಾಡಬೇಕು. ಕೃಷ್ಣಾ. ಕರುಣಾಸಿಂಧೋ!

ನಾರದ – ನೀನು ಅವರನ್ನು ಪ್ರಾರ್ಥಿಸಿಕೊಂಡರೆ, ಪುರೂರವಸ್‌ಗೆ ಒಂದೊಂದು ಜನ್ಮದಲ್ಲಿಯೂ ಪುಣ್ಯ ಸಂಚಿತವಾಗಿ ಭಾಗ್ಯವೊದಗಿದ ಸಮಯದಲ್ಲೆಲ್ಲ, ಸಮಯೋಚಿತವಾದ ವಿಧದಲ್ಲಿ ನೀನು ಅವರನ್ನು ಸಂಧಿಸುವೆ. ಅವರೂ ನಿನ್ನನ್ನು ಗುರಿತಿಸುವಂತೆ ಶ್ರೀಕೃಷ್ಣ ಪರಮಾತ್ಮ ದಯೆಗೈಯ್ಯುವರು. ಇನ್ನು ನಾನು ಬರುತ್ತೇನೆ. (ಮರೆಯಾಗುವರು)

ಊರ್ವಶಿ– (ಸಾಷ್ಟಾಂಗವಾಗಿ ನಮಸ್ಕರಿಸುತ್ತಾ) ಕೃಷ್ಣಾ, ಕೃಷ್ಣಾ, ದಯಾಪಯೋನಿಧೇ.

---

ಶ್ರೀ ಹೇಮಾವತಿ ಮುದ್ರಣಾಲಯ, ಗೊರೂರು.

# ಈ ಲೇಖಕರ ಇತರ ಕೆಲವು ಕೃತಿಗಳು

ಹಳ್ಳಿಯ ಚಿತ್ರಗಳು .... .... ....
ನಮ್ಮ ಊರಿನ ರಸಿಕರು .... .... ....
ಬೈಲಹಳ್ಳಿ ಸರ್ವೆ .... .... ....
ಗರುಡಗಂಬದ ದಾಸಯ್ಯ .... .... ....
ವೈಯ್ಯಾರಿ .... .... ....
ಪುರಾತನ ಕತೆಗಳು .... .... ....
ಶಿವರಾತ್ರಿ .... .... ....
ಬೆಸ್ತರ ಕರಿಯ .... .... ....
ಹಳ್ಳಿಯ ಬಾಳು .... .... ....
ಹಳ್ಳಿಯ ಹಾಡುಗಳು [ಸಂಗ್ರಹಿತ] .... ....
ಸಾಹಿತ್ಯದ ಜೀವಾಳ [ಶೌಪನ್‌ಹೂರ್ ಪ್ರಬಂಧಗಳು] ....
ಮೆರವಣಿಗೆ .... .... ....
ಪುನರ್ಜನ್ಮ .... .... ....
ಹೇಮಾವತಿ .... .... ....
ಮಲೆನಾಡವರು [ಟಾಲಸ್ಟಾಯ್‌ರವರ ಕೋಸಕ್ಸ್ ಕಾದಂಬರಿ]
ಮಹದೇವದೇಸಾಯಿಯವರ ಕೃತಿಗಳು .... ....
ತಾಯಿನುಡಿಯಲ್ಲಿ ಶಿಕ್ಷಣ .... ....
ಸ್ವಾತಂತ್ರ್ಯವೇ ಧರ್ಮ .... .... ....
ಭಕ್ತಿಯೋಗ [ಸ್ವಾಮಿವಿವೇಕಾನಂದ] .... ....
ಭಾರತ ಭಾಗ್ಯವಿಧಾತಾ .... .... ....
ಸತೀ ಕಸ್ತೂರಿ ಬಾ .... .... ....
ಮೌಲಾನಾ ಅಬುಲ್ ಕಲಾಂ ಆಜಾದ್

## ಕೆಲವು ಅಭಿಪ್ರಾಯಗಳು

—★—

## ಹೇಮಾವತಿ

The story is of one texture and true - - The author describes all this vividly and is a master of a medium which he uses with effect - - observation achieves a Jewel-like effect ... The story can be described as a record of the worthiness of a family of musicians and men of God who through their fundamental humanity, build up for themselves character and usefulness. —THE HINDU.

## ಮೆರವಣಿಗೆ

Merevanige is a pageant of pictures of life lived in a mysore village on the banks of Hemavati river. Almost every type of person–Raiyat, Priest, School master, Shanbhog, official visiting for inspection, landlord and money lender, craftsmen Harijans, visitors from the town - is presented both as an individual human being and as a type. It is a live world well realised. Mr. Ramaswami Iyengar's is an experienced hand at such sketches. The Gallery here is as fresh as ever with his robust if quaint humour playing about it all..... There are endless delights of anecdote, incident and situation, insets of touching beauty . .it enshrines enduring human worth true in every detail to the life and time it depicts. THE HINDU.

# ಗರುಡಗಂಬದ ದಾಸಯ್ಯ

—೦—

"ಒಬ್ಬ ಅರಸುಗಳೇ, ಹಜಾಮರೇ, ಹಾರುವರೇ, ತುರುಕರೇ, ದಾಸಯ್ಯಗಳೇ, ಬಯಲಾಟದವರೇ, ಸುಬೇದಾರರೇ, ಶ್ಯಾನುಭೋಗರೆ ಹೊಲೆಯರೇ—ಇವರೆಲ್ಲರನ್ನೂ ಒಂದು ಮಾಲೆಯಲ್ಲಿ ಪೋಣಿಸಿದ ವಿಕಟ ಕವಿತ್ವವು ಪ್ರಶಂಸನೀಯವೆಂದು ಯಾರು ಹೇಳಲಿಕ್ಕಿಲ್ಲ? ಹಾಸ್ಯವು ಸಾಮ್ಯವಾದಿ, ವ್ಯಂಗ್ಯ ಸರಣಿಯ ಗಾದೆಯ ಮಾತಿನ ಲೇಹ್ಯಗಳು; ಚಟಕಿಯ ಮಾತಿನ ತಿರುಪಿನ ಕಷಾಯಗಳು ಹಾಸ್ಯಗರ್ಭಿತ ಉಪಮೆ ದೃಷ್ಟಾಂತಗಳ ವಾಚಕ ರೇಚಕಗಳು—ಇವೆಲ್ಲವು ಸಾಮಾಜಿಕ ರುಗ್ಣತೆಯನ್ನು ಕಳೆಯುವ ಇವರ ಹಾಸ್ಯ—ವೈದ್ಯಕದಲ್ಲಿ ಉಚಿತ ಪ್ರಯೋಜನಕಾರಿಯಾದುದನ್ನು ಕಂಡು ಹೀಗೆಯೇ ಈ ಕಲೆಯು ನಮ್ಮ ಜನಮನದ ಕೊಳೆಯನ್ನು ಕಳೆದು ಬೆಳಗುವಂತಿರಲಿ ಎಂದು ಹರಸುವಂತಾಗುವುದು........"

—ದ. ರಾ. ಬೇಂದ್ರೆ.

........ನೆನ್ನೆ ರಾತ್ರಿ ನಿದ್ರೆ ಬರದುದರಿಂದ ಸುಮಾರು ಹನ್ನೆರಡು ಗಂಟೆಗೆ ದೀಪ ಹತ್ತಿಸಿಕೊಂಡು ನಿಮ್ಮ ಗರುಡಗಂಬದ ದಾಸಯ್ಯ ಓದಲು ಪ್ರಾರಂಭಿಸಿದೆ. ನಿದ್ರೆ ಬರದಾಗ ಇದು ನನ್ನ ಪದ್ಧತಿ. ಆಚಾರ ಕೆಟ್ಟರೂ ಆಕಾರ ಕೆಡಬಾರದೆಂಬುದನ್ನು ಓದುತ್ತಾ ತಡೆಯಲಾರದ ನಗು ಬಂತು. ಗಟ್ಟಿಯಾಗಿ ನಗುತ್ತಲೇ ಇದ್ದುಬಿಟ್ಟೆ. ನಮ್ಮ ಹುಡುಗರು ಗಾಬರಿಯಿಂದ ಎದ್ದು ನೋಡಿದರು. ವಿಷಯ ತಿಳಿದ ನಂತರ ಅವರೂ ನಗ ತೊಡಗಿದರು.

ಮಹಾನುಭಾವಾ, ನೀವು ಕನ್ನಡ ಕಲಿತದ್ದು ಸಾರ್ಥಕವಾಯಿತು. ಹೀಗೆಯೇ ಬರೆಯುತ್ತಾ ಜನಮನದ ಕೊಳೆಯನ್ನು ಹೋಗಲಾಡಿಸುತ್ತಿರಿ.

—ಡಿ. ವಿ. ಗುಂಡಪ್ಪ.

ಶ್ರೀ ಗೊರೂರವರ ಕೃತಿಗಳು ಬರಬರುತ್ತಾ ಹಳ್ಳಿಗಳ ಮಹಾಭಾರತಗಳೇ ಆಗುತ್ತಿವೆ. ಇವು ಗ್ರಾಮಜೀವನದ ವಿಶ್ವರೂಪದ ರಸನೋಟ. ಒಂದು ವಿಶೇಷ. ಹೇಮಾವತಿಯ ತೀರದಲ್ಲಿ ಎಂಬ ಚಿತ್ರದಲ್ಲಿ ಹೇಮಾವತಿ ನದಿಯೇ ನಾಯಕ. ಶ್ರೀ ಗೊರೂರರು ಎಷ್ಟು ಬೇಗ ಬೇಗ ಕೃತಿಗಳನ್ನು ಬರೆದರೆ ನಾವು ಅಷ್ಟು ಬೇಗ ಬೇಗ ಓದಿ ಆನಂದಿಸಬಹುದು.

ಪ್ರೊಫೆಸರ್ ವಿ. ಕೆ. ಗೋಕಾಕ್ [ಜೀವನದಲ್ಲಿ]

ಶ್ರೀ ಹೇಮಾವತಿ ಮುದ್ರಣಾಲಯ, ಗೊರೂರು.